ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪ್ರಕಟಣೆ - ೫೫
ಸಾಹಿತ್ಯಮಾಲೆ - ೫೨

ಪ್ರಧಾನ ಸಂಪಾದಕರು
ಡಾ. ಪ್ರಧಾನ್ ಗುರುದತ್ತ

ಸಂಪಾದಕರು
ಡಾ. ಪಿ. ಎಸ್. ರಾಮಾನುಜಂ

# ಕಥಾಸರಿತ್ಸಾಗರ

(ಸಂಪುಟ ೫)

(ಲಂಬಕ: ರತ್ನಪ್ರಭಾ)

# ಕಥಾಸರಿತ್ಸಾಗರ

(ಸಂಪುಟ ೫)

(ಲಂಬಕ: ರತ್ನಪ್ರಭಾ)

ಸಂಸ್ಕೃತ ಮೂಲ

**ಸೋಮದೇವ ಭಟ್ಟ**

ಕನ್ನಡ ಅನುವಾದ

**ಡಾ. ಬಿ.ಎಸ್. ರಾಮಕೃಷ್ಣರಾವ್**




**ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ**

ಕನ್ನಡ ಭವನ, ಜೆಸಿ. ರಸ್ತೆ ಬೆಂಗಳೂರು – ೫೬೦ ೦೦೨

**Kathā Sarit-sāgara (Vol. 5)** by **Somadeva Bhatta**, consisting of Book 7 - Ratnaprabha; Kannada translation by **Dr. B. S. Ramakrishna Rao**; Editor-in-Chief: **Dr. Pradhan Gurudatta**; General Editor of the series: **Dr. P. S. Ramanujam;** Published by **Registrar**, **Karnataka Anuvada Sahitya Academy**, Kannada Bhavana, J.C. Road, Bangalore - 560 002. 2007; Pp. xxviii + 258; Price: Rs. 100/-.



ಮುದ್ರಣ : ೨೦೦೮
ಪುಟಗಳು : xxviii + ೨೫೮
ಬೆಲೆ : ರೂ. ೧೦೦/–
ಪ್ರತಿಗಳು : ೩೨೦೦

ಪ್ರಕಾಶಕರು :
**ಪಿ. ನಾರಾಯಣಸ್ವಾಮಿ**
ರಿಜಿಸ್ಟ್ರಾರ್
ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು
ದೂ : ೨೨೧೦೬೬೬೦

ಮುಖಪುಟ ವಿನ್ಯಾಸ ಮತ್ತು ಚಿತ್ರ : **ವಿಶ್ವನಾಥ್**

**ISBN : 978-81-905692-1-7**

ಮುದ್ರಕರು :
**ಮೆ|| ಮಯೂರ ಪ್ರಿಂಟ್ ಆಡ್ಸ್**
ನಂ. ೬೯, ಸುಬೇದಾರ್‌ಛತ್ರಂ ರೋಡ್
ಬೆಂಗಳೂರು – ೫೬೦೦೨೦ ದೂ : ೨೩೩೪೨೬೨೪



ಕರ್ನಾಟಕ ಸರ್ಕಾರ

ವಿಧಾನಸೌಧ
ಬೆಂಗಳೂರು – ೫೬೦ ೦೦೧

**ಬಿ.ಎಸ್.ಯಡಿಯೂರಪ್ಪ**
ಮುಖ್ಯಮಂತ್ರಿಗಳು

ದಿನಾಂಕ : ೦೪–೧೦–೨೦೦೮

# ಮುನ್ನುಡಿ

ರಾಷ್ಟ್ರಕವಿ ಕುವೆಂಪು ಅವರ ಹೆಸರಿನಲ್ಲಿ ಸ್ಥಾಪಿತವಾಗಿರುವ 'ಶ್ರೀ ಕುವೆಂಪು ಭಾಷಾಭಾರತಿ'ಯ ಅಂಗವಾಗಿ ಕರ್ನಾಟಕ ಸರ್ಕಾರ ೨೦೦೫ರಲ್ಲಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಸ್ಥಾಪಿಸಿತು. ನಮ್ಮ ನಾಡಿನಲ್ಲಿ ಅನುವಾದ ಕಾರ್ಯಚಟುವಟಿಕೆಗಳಿಗಾಗಿ ಅಕಾಡೆಮಿಯೊಂದನ್ನು ಸ್ಥಾಪಿಸಿದ ಮೊದಲ ರಾಜ್ಯ ಕರ್ನಾಟಕವೇ ಆಯಿತು ಎಂಬುದು ನಮಗೆ ಹೆಮ್ಮೆಯ ಸಂಗತಿಯೇ ಆಗಿದೆ. ಭಾರತೀಯ ಭಾಷೆಗಳ ನಡುವೆ ಪಾರಸ್ಪರಿಕ ಅರಿವನ್ನು ಹೆಚ್ಚಿಸುವುದು, ನಮ್ಮ ನಾಡು–ನುಡಿಗಳ ಹಿರಿಮೆ – ವೈಶಿಷ್ಟ್ಯಗಳನ್ನು ಇತರ ಭಾಷಾ–ಬಾಂಧವರಿಗೆ ಪರಿಚಯಿಸಿಕೊಡುವುದು, ಜಾಗತಿಕ ಮಹತ್ವದ ಕೃತಿಗಳನ್ನು ಕನ್ನಡಿಗರಿಗೆ ಪರಿಚಯಿಸಿ ಕೊಡುವುದು ಹಾಗೂ ಕನ್ನಡ ಸಾಹಿತ್ಯದ ಮಹತ್ವದ ಕೃತಿಗಳನ್ನು ಜಾಗತಿಕ ಮಹತ್ವದ ಇತರ ಭಾಷೆಗಳಿಗೆ ಅನುವಾದಿಸಿಕೊಡುವುದು ಅಕಾಡೆಮಿಯ ಸ್ಥಾಪನೆಯ ಮುಖ್ಯ ಉದ್ದೇಶವಾಗಿದೆ. ಇದಕ್ಕೆ ಪೂರಕವಾಗಿ ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರಗಳಲ್ಲಿನ ಪ್ರಮುಖ ಕೃತಿಗಳನ್ನು ಕನ್ನಡಕ್ಕೆ ತರುವುದೂ ಅಕಾಡೆಮಿಯ ಕರ್ತವ್ಯವೇ ಆಗಿದೆ. ಹೀಗೆ ಅನುವಾದ ಸಾಹಿತ್ಯ ಅಕಾಡೆಮಿ ಅನೇಕ ಆಯಾಮಗಳಲ್ಲಿ ಕೆಲಸಮಾಡಬೇಕಾಗುತ್ತದೆ.

'ಶ್ರೀ ಕುವೆಂಪು ಭಾಷಾಭಾರತಿ'ಯ ಬಹುಮುಖ್ಯವಾದ ಚಟುವಟಿಕೆಗಳು ಸದ್ಯದಲ್ಲಿಯೇ ಆರಂಭಗೊಂಡು ಕರ್ನಾಟಕದ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಹೊಸ ದಿಕ್ಕು–ದೆಸೆಗಳನ್ನು ತೆರೆದು ತೋರಲಿವೆ ಎಂದು ನಂಬಿದ್ದೇನೆ. ಸ್ಥಾಪನೆಯಾದ ಕೆಲವೇ ವರ್ಷಗಳಲ್ಲಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಈ ದಿಕ್ಕಿನಲ್ಲಿ ಗಣನೀಯವಾದ ಕಾರ್ಯವನ್ನು ಮಾಡಿ ಈಗಾಗಲೇ ೫೦ಕ್ಕೂ ಹೆಚ್ಚು ಗ್ರಂಥಗಳನ್ನು ಬಿಡುಗಡೆ ಮಾಡಿದ್ದು, ಅವು ಜನಮನ್ನಣೆಯನ್ನು ಗಳಿಸಿವೆ ಎಂಬುದು ಕರ್ನಾಟಕ ಸರ್ಕಾರಕ್ಕೆ ಸಂತೋಷದ ವಿಚಾರವೇ ಆಗಿದೆ. ಅನುವಾದ ಸಾಹಿತ್ಯ ಅಕಾಡೆಮಿ ಮುಂಬರುವ ವರ್ಷಗಳಲ್ಲಿ ಮತ್ತಷ್ಟು ಅರ್ಥಪೂರ್ಣವಾದ ಚಟುವಟಿಕೆಗಳನ್ನು ಹಮ್ಮಿಕೊಂಡು ವಿಶ್ವದ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ಒದಗಿಸಿಕೊಡುವ ಕೆಲಸವನ್ನು, ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರಗಳಲ್ಲಿನ ಬೆಳವಣಿಗೆಯನ್ನು ಕನ್ನಡಿಗರಿಗೆ ಪರಿಚಯಿಸಿಕೊಡುವ ಕೆಲಸಗಳನ್ನು ಮಾಡಲಿ ಎಂದು ಹಾರೈಸುತ್ತೇನೆ. ಇಂಥ ಅರ್ಥಪೂರ್ಣವಾದ ಚಟುವಟಿಕೆಗಳಿಗೆ ಕರ್ನಾಟಕ ಸರ್ಕಾರದ ಬೆಂಬಲ ಎಂದೂ ಇದ್ದೇ ಇರುತ್ತದೆ. ಅಕಾಡೆಮಿಯ ಪ್ರಕಟಣೆಗಳನ್ನು ಕರ್ನಾಟಕದ ಜನತೆ ಸಹೃದಯತೆಯಿಂದ ಇನ್ನು ಮುಂದೆಯೂ ಸ್ವಾಗತಿಸಿ ಪ್ರೋತ್ಸಾಹ ನೀಡುತ್ತದೆ ಎಂದು ಭಾವಿಸಿದ್ದೇನೆ.

**(ಬಿ.ಎಸ್.ಯಡಿಯೂರಪ್ಪ)**



ಕರ್ನಾಟಕ ಸರ್ಕಾರ

**ಶ್ರೀ ಸುಬೀರ್ ಹರಿಸಿಂಗ್**, ಭಾ.ಆ.ಸೇ.
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಹಾಗೂ ಪ್ರವಾಸೋದ್ಯಮ ಇಲಾಖೆ

ವಿಕಾಸಸೌಧ
ಬೆಂಗಳೂರು – ೫೬೦ ೦೦೧

ದಿನಾಂಕ : ೦೪–೧೦–೨೦೦೮

## ಶುಭಾಕಾಂಕ್ಷೆ

ಶ್ರೀ ಕುವೆಂಪು ಭಾಷಾಭಾರತಿಯ ಅಂಗವಾಗಿ ಕರ್ನಾಟಕ ಸರ್ಕಾರ ಅಸ್ತಿತ್ವಕ್ಕೆ ತಂದ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಕೆಲವೇ ವರ್ಷಗಳ ಅವಧಿಯಲ್ಲಿ ಗಮನಾರ್ಹವಾದ ಕೆಲಸವನ್ನು ಮಾಡಿದೆ ಎಂಬುದನ್ನು ಕರ್ನಾಟಕದ ಜನತೆ ಈಗಾಗಲೇ ಗಮನಿಸಿ ತನ್ನ ಮೆಚ್ಚುಗೆಯನ್ನು ಸೂಚಿಸುತ್ತಾ ಬಂದಿದೆ ಎಂಬುದು ಸಂತೋಷಕರ ಸಂಗತಿಯೇ ಆಗಿದೆ. ಇತ್ತ ಕೇಂದ್ರ ಸರ್ಕಾರ "ರಾಷ್ಟ್ರೀಯ ಜ್ಞಾನ ಆಯೋಗ'ವನ್ನು ಸ್ಥಾಪಿಸಿದ್ದು, ಅದರ ಅಂಗವಾಗಿ "ರಾಷ್ಟ್ರೀಯ ಅನುವಾದ ಮಿಷನ್'ನ ಕಾರ್ಯಚಟುವಟಿಕೆಗಳು ಆರಂಭವಾಗಲಿರುವುದು ನಮ್ಮ ನಾಡಿನ ಇತಿಹಾಸದಲ್ಲಿ ಹೊಸ ಶಕೆಯನ್ನು ಪ್ರಾರಂಭಿಸಲಿದೆ ಎಂದು ನಾನು ನಂಬಿದ್ದೇನೆ. ಈ ದಿಕ್ಕಿನಲ್ಲಿ ಮೊದಲ ಹೆಜ್ಜೆಯನ್ನಿರಿಸಿದ ಗೌರವ ಕರ್ನಾಟಕದ್ದಾಗಿದೆ ಎಂಬುದು ನಮಗೆ ಸಂತೋಷದ ಹಾಗೂ ಗೌರವದ ವಿಚಾರವೇ ಆಗಿದೆ.

ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಈಗಾಗಲೇ ಹಲವಾರು ಮಹತ್ವದ ಯೋಜನೆಗಳನ್ನು ಕೈಗೊಂಡಿದೆ. ಅವುಗಳಲ್ಲಿ ಮುಖ್ಯವಾಗಿರುವುದೆಂದರೆ ವಿಲ್ ಡ್ಯೂರಾಂಟ್ ಅವರ "ನಾಗರಿಕತೆಯ ಕಥೆ' ಸಂಪುಟಗಳ ಕನ್ನಡ ಆವೃತ್ತಿಯನ್ನು ಹೊರತರುತ್ತಿರುವುದು. ಭಾರತೀಯ ಭಾಷೆಗಳಲ್ಲಿಯೇ ಮೊದಲ ಬಾರಿಗೆ ಇಂಥ ಯೋಜನೆಯನ್ನು ಹಮ್ಮಿಕೊಂಡಿರುವ ಹಿರಿಮೆಯೂ ಕರ್ನಾಟಕದ್ದಾಗಿದೆ. ವಿವಿಧ ಭಾಷಾ ಸಾಹಿತ್ಯಗಳ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ಹೊರತರುವುದರ ಜೊತೆಗೆ, ಕನ್ನಡದ ಮಹತ್ವದ ಕೃತಿಗಳನ್ನು ರಾಷ್ಟ್ರೀಯ ಮತ್ತು ಜಾಗತಿಕ ಸ್ತರದಲ್ಲಿ ಪರಿಚಯಿಸಿಕೊಡುವ ವಿಶಿಷ್ಟ ಕಾರ್ಯಕ್ರಮಗಳನ್ನೂ ಈ ಸಂಸ್ಥೆ ಕೈಗೊಳ್ಳಬೇಕಾಗಿದೆ. ಇದರ ಜೊತೆಗೆ ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರಕ್ಕೂ ಮಹತ್ವದ ಕೊಡುಗೆಯನ್ನು ನೀಡುವ ಉದ್ದೇಶದಿಂದ ಜೆ.ಡಿ.ಬರ್ನಾಲ್ ಅವರ "ವಿಜ್ಞಾನದ ಇತಿಹಾಸ' (Science in History)ದ ನಾಲ್ಕು ಸಂಪುಟಗಳನ್ನು, ಜ್ಞಾನ–ವಿಜ್ಞಾನ–ತಂತ್ರಜ್ಞಾನ ಕ್ಷೇತ್ರದ ನೂರಾರು ಮಹತ್ವದ ಕೃತಿಗಳನ್ನು ತರುವ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ ಎಂಬುದು ವೈಯಕ್ತಿಕವಾಗಿಯೂ ನನಗೆ ವಿಶೇಷ ಸಂತೋಷದ ಸಂಗತಿಯೇ ಆಗಿದೆ. ಇಂಥ ಮಹತ್ವದ ಯೋಜನೆಗಳ ಮೂಲಕ ಶ್ರೀ ಕುವೆಂಪು ಭಾಷಾಭಾರತಿ ಮತ್ತು ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಕರ್ನಾಟಕದ ಜನತೆಗೆ ಸ್ಮರಣೀಯ ಸೇವೆಯನ್ನು ಸಲ್ಲಿಸುವಂತಾಗಲಿ ಎಂದು ಹಾರೈಸುತ್ತೇನೆ. ಈ ಬಗೆಯ ಬಹುಮುಖವಾದ ಕಾರ್ಯಚಟುವಟಿಕೆಗಳನ್ನು ಕರ್ನಾಟಕದ ಜನತೆ ಮುಕ್ತ ಹೃದಯದಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

(ಶ್ರೀ ಸುಬೀರ್ ಹರಿಸಿಂಗ್, ಭಾ.ಆ.ಸೇ.,)


ಕರ್ನಾಟಕ ಸರ್ಕಾರ

ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು – ೫೬೦ ೦೦೨

ದಿನಾಂಕ : ೦೪–೧೦–೨೦೦೮

**ಶ್ರೀ ಮನು ಬಳಿಗಾರ್**
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

## ಪ್ರಾಸ್ತಾವಿಕ ನುಡಿ

ಕರ್ನಾಟಕ ಸರ್ಕಾರ ೨೦೦೫ರಲ್ಲಿ ಸ್ಥಾಪಿಸಿದ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಕಳೆದ ಮೂರು ವರ್ಷಗಳ ಅಲ್ಪಾವಧಿಯಲ್ಲಿ ಮಾಡಿರುವ ಕಾರ್ಯವನ್ನು ನಾನು ಗಮನಿಸುತ್ತ ಬಂದಿದ್ದೇನೆ. ಅನುವಾದ ಸಂಬಂಧವಾದ ಕಮ್ಮಟಗಳು ಮತ್ತು ತರಬೇತಿ ಕಾರ್ಯಕ್ರಮಗಳ ಜೊತೆಗೆ, ಈಗ್ಗೆ ಕೆಲವು ತಿಂಗಳುಗಳ ಹಿಂದಷ್ಟೇ ಈ ಅಕಾಡೆಮಿ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ, ಒಮ್ಮೆಲೇ ಐವತ್ತಮೂರು ಗ್ರಂಥಗಳನ್ನು ಬಿಡುಗಡೆ ಮಾಡಿದ್ದು, ನನಗೆ ಆಶ್ಚರ್ಯ–ಆನಂದಗಳನ್ನುಂಟುಮಾಡಿದೆ. ವಿವಿಧ ಭಾಷೆಗಳಲ್ಲಿನ ಉತ್ಕೃಷ್ಟ ಸಾಹಿತ್ಯ ಕೃತಿಗಳನ್ನಲ್ಲದೆ, ವೈದ್ಯಕೀಯ, ಕಾನೂನುಶಾಸ್ತ್ರ ಮೊದಲಾದ ವಿವಿಧ ವಿಷಯಗಳಿಗೆ ಸಂಬಂಧಿಸಿದ ಗ್ರಂಥಗಳನ್ನೂ ಹೊರತರುತ್ತಿರುವುದು ಈ ಅಕಾಡೆಮಿಯ ಕಾರ್ಯವ್ಯಾಪ್ತಿಯ ವೈವಿಧ್ಯ ಮತ್ತು ಹೊಸ ಆಯಾಮಗಳ ಪ್ರತೀಕವೇ ಆಗಿದೆ ಎಂದು ನಂಬಿದ್ದೇನೆ. ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರದ ೧೦೦ಕ್ಕೂ ಹೆಚ್ಚು ಮೇರು ಕೃತಿಗಳನ್ನು ಹೊರತರುವ ಕಾರ್ಯವನ್ನು ಅದು ಹಮ್ಮಿಕೊಂಡಿದೆ ಎಂಬುದು ನನಗೆ ವಿಶೇಷ ಸಂತೋಷವನ್ನುಂಟುಮಾಡಿದೆ. ಇವೆಲ್ಲಕ್ಕೂ ತಲೆವಣಿಯಾಗಿ ವಿಲ್ ಡ್ಯೂರಾಂಟ್ ಅವರ 'ನಾಗರಿಕತೆಯ ಕಥೆ'ಯ ಸಂಪುಟಗಳನ್ನು ಹೊರತರುವ ಯೋಜನೆಯನ್ನು ಹಾಕಿಕೊಂಡಿದ್ದು, ಈಗಾಗಲೇ ಆದರ್ಶಪ್ರಾಯವಾದ ರೀತಿಯಲ್ಲಿ ಅದರ ಮೊದಲ ಸಂಪುಟವನ್ನು ಹೊರತಂದಿರುವುದು ನಮ್ಮ ನಾಡಿಗೇ ಗೌರವಪ್ರಾಯವಾದ ಸಂಗತಿ ಎಂದು ನಾನು ಭಾವಿಸಿ, ಇದರ ಮುಂದಿನ ಸಂಪುಟಗಳೂ ಶೀಘ್ರವಾಗಿ ಹೊರಬರಲಿ ಎಂದು ಹಾರೈಸುತ್ತೇನೆ. ಹಾಗೆಯೇ ಇದಕ್ಕಾಗಿ ಅನುವಾದ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ. ಪ್ರಧಾನ್ ಗುರುದತ್ತ ಅವರನ್ನು ಹಾಗೂ ಅವರ ಸಿಬ್ಬಂದಿಯನ್ನು ಹೃದಯಾರೆ ಅಭಿನಂದಿಸುತ್ತೇನೆ.

ಅಕಾಡೆಮಿ ಚರಿತ್ರಾರ್ಹವಾದ ಇನ್ನೂ ಕೆಲವು ಯೋಜನೆಗಳನ್ನು ಹಮ್ಮಿಕೊಳ್ಳಲಿದೆ – ಉದಾ : ಜೆ.ಡಿ.ಬರ್ನಾಲ್ ಅವರ 'ಸೈನ್ ಇನ್ ಹಿಸ್ಟರಿ'ಯ ಸಂಪುಟಗಳ ಅನುವಾದ – ಎಂದು ನನಗೆ ತಿಳಿದು ಬಂದಿದೆ. ಅಕಾಡೆಮಿಯ ಇಂಥ ಕೆಲಸ–ಕಾರ್ಯಗಳು ಕನ್ನಡಿಗರಿಗೆ ಪ್ರಿಯವಾಗುತ್ತವೆಂದೂ ನಂಬಿದ್ದೇನೆ. ಇಂಥ ಕಾರ್ಯಗಳಿಗೆ ಜನತೆ ಮತ್ತು ಸರ್ಕಾರ ಖಂಡಿತವಾಗಿಯೂ ಬೆಂಬಲವಾಗಿ ನಿಲ್ಲುತ್ತವೆಂಬುದರಲ್ಲಿಯೂ ಅನುಮಾನವಿಲ್ಲ. ಭಾಷಾಂತರಕ್ಕೆ ಉಜ್ವಲ ಭವಿಷ್ಯವಿರುವ ಲಕ್ಷಣಗಳು ಗೋಚರಿಸುತ್ತಿರುವ ಹಿನ್ನಲೆಯಲ್ಲಿ ಅಕಾಡೆಮಿಯ ಕೆಲಸ–ಕಾರ್ಯಗಳು ಇನ್ನೂ ಅತಿಶಯವಾಗಿ, ನಾಡು–ನುಡಿಗಳಿಗೆ ಪ್ರೇರಕವೂ, ಪೋಷಕವೂ ಆಗುವಂತೆ ಮುಂದುವರಿಯಲಿ ಎಂದು ಹಾರೈಸುತ್ತೇನೆ.

ಮನು ಬಳಿಗಾರ್

**(ಶ್ರೀ ಮನು ಬಳಿಗಾರ್)**

# ಪರಿಚಯ

ಭಾರತದಲ್ಲಿ ಯಾವುದೇ ರಾಜ್ಯವೊಂದರಲ್ಲಿ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಮೊಟ್ಟಮೊದಲ ಬಾರಿಗೆ ಸ್ಥಾಪಿಸಿದ ಹಿರಿಮೆ ಕರ್ನಾಟಕ ಸರ್ಕಾರದ್ದಾಗಿದೆ. ಜನವರಿ ೬, ೨೦೦೬ರಂದು ಅಂದಿನ ಮಾನ್ಯ ಮುಖ್ಯಮಂತ್ರಿಗಳಾಗಿದ್ದ ಶ್ರೀ ಧರ್ಮಸಿಂಗ್ ಅವರು ವಿಧ್ಯುಕ್ತವಾಗಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಉದ್ಘಾಟಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳೂ ಹಾಗೂ ಭಾಷಾಂತರವನ್ನು ವಿಶ್ವವಿದ್ಯಾಲಯದ ಹಂತದಲ್ಲಿ ಶಿಕ್ಷಣ ವಿಷಯವಾಗಿ ಅಳವಡಿಸಿದ ಭಾಷಾಂತರ ಕ್ಷೇತ್ರದ ಭೀಷ್ಮಾಚಾರ್ಯರೂ ಆದ ಪ್ರೊ॥ ದೇ. ಜವರೇಗೌಡ ಅವರೂ, ಹಿರಿಯ ವಿದ್ವಾಂಸರಾದ ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಅವರೂ ಅಕಾಡೆಮಿಯ ಕಾರ್ಯಚಟುವಟಿಕೆಗಳ ದಿಕ್ಕು–ದೆಸೆಗಳನ್ನು ನಿರ್ದೇಶಿಸಿದರು.

ನಮ್ಮ ನಾಡಿನಲ್ಲಿರುವ ವಿಚಿತ್ರ ಪರಿಸ್ಥಿತಿ ಎಂದರೆ ವಿದೇಶೀಯ ಭಾಷಾಸಾಹಿತ್ಯಗಳ ಅಷ್ಟಿಷ್ಟು ಪರಿಚಯವಾದರೂ ಇರುವ ನಮಗೆ ನಮ್ಮ ನಾಡಿನ ನೆರೆಹೊರೆಯ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯದ, ಶ್ರೇಷ್ಠ ಸಾಹಿತಿಗಳ ಪರಿಚಯ ಬಹುಮಂದಿಗೆ ಇಲ್ಲವೇ ಇಲ್ಲದಂತಾಗಿದೆ. ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಇತರ ಕೆಲವು ರಾಷ್ಟ್ರೀಯ ಸಂಸ್ಥೆಗಳು ತಮ್ಮ ಕಾರ್ಯಚಟುವಟಿಕೆಗಳಲ್ಲಿ ಅನುವಾದಗಳನ್ನು ಹೊರತರುವ ಕೆಲವು ಯೋಜನೆಗಳನ್ನು ಕೈಗೊಳ್ಳುತ್ತಿರುವುದುಂಟು. ಆದರೆ, ಈ ಕಾರ್ಯಗಳು ಅಪೇಕ್ಷಣೀಯ ಪ್ರಮಾಣದಲ್ಲಿ ಹಾಗೂ ಪರಸ್ಪರ ಪೂರಕವಾಗುವ ರೀತಿಯಲ್ಲಿ ಆಗುತ್ತಿಲ್ಲ. ಮೇಲಾಗಿ ಈ ಕಾರ್ಯಕ್ರಮಗಳು ಬಹುಮಟ್ಟಿಗೆ ಸಾಹಿತ್ಯ ಕ್ಷೇತ್ರಕ್ಕೆ ಮಾತ್ರವೇ ಸೀಮಿತವಾಗಿವೆ. ಹೀಗಾಗಿ, ಪರಸ್ಪರ ಕೊಳು–ಕೊಡೆಯ ಕಾರ್ಯಕ್ರಮಗಳು ಹೆಚ್ಚು–ಹೆಚ್ಚಾಗಿ ಹಾಗೂ ವೈವಿಧ್ಯಮಯವಾಗಿ ಆಗಬೇಕಾದ ಅಗತ್ಯವೂ ಇದೆ.

ಭಾರತೀಯ ಭಾಷಾಸಾಹಿತ್ಯಗಳು ಸಮೃದ್ಧವಾಗಿ ಬೆಳೆಯಬೇಕಾದರೆ, ಎರಡು ಮುಖಗಳಲ್ಲಿ ಕಾರ್ಯಗಳು ಆಗಬೇಕಾಗಿದೆ: (೧) ರಾಷ್ಟ್ರೀಯ ಮಟ್ಟದಲ್ಲಿ; (೨) ಅಂತಾರಾಷ್ಟ್ರೀಯ ಮಟ್ಟದಲ್ಲಿ. ರಾಷ್ಟ್ರೀಯ ಸ್ತರದಲ್ಲಿ ನಮ್ಮ ಭಾಷಾ ಸಾಹಿತ್ಯವನ್ನು ಬಿಂಬಿಸುವ ಕೆಲಸ ಎಷ್ಟು ಮುಖ್ಯವೋ, ಇತರ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಅಷ್ಟೇ ಮುಖ್ಯ. ರಾಷ್ಟ್ರೀಯ–ಅಂತಾರಾಷ್ಟ್ರೀಯ ಮಹತ್ವದ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಹಾಗೂ ಕನ್ನಡ ಸಾಹಿತ್ಯವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಬಿಂಬಿಸುವುದೂ ಅಷ್ಟೇ ಮುಖ್ಯ. ಈ ದೃಷ್ಟಿಯಿಂದ ನೊಬೆಲ್ ಪ್ರಶಸ್ತಿ, ಬೂಕರ್ ಪ್ರಶಸ್ತಿ, ಜ್ಞಾನಪೀಠ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿ ಮೊದಲಾದ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದುಕೊಂಡಿರುವ ಲೇಖಕರ ಮಹತ್ವದ ಕೃತಿಗಳನ್ನು ಇತರ ಭಾಷೆಗಳಲ್ಲಿ ಹೊರತರುವ ಯೋಜನೆಗಳನ್ನು ಅನುವಾದ ಸಾಹಿತ್ಯ ಅಕಾಡೆಮಿ ತನ್ನ ಮುಂದಿರಿಸಿಕೊಂಡಿದೆ. ಅಷ್ಟೇ ಅಲ್ಲದೆ, ವಿಜ್ಞಾನ–ತಂತ್ರಜ್ಞಾನ, ವೈದ್ಯಕೀಯ, ಮಾನವಿಕ ಮೊದಲಾದ ಕ್ಷೇತ್ರಗಳಲ್ಲಿನ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ತರುವ ಯೋಜನೆಗಳೂ

ಅಕಾಡೆಮಿಯ ಮುಂದಿವೆ. ಇತರ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚಿಸಿ, ಅಂತೆಯೇ, ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ವಿಭಾಗ, ಕೇಂದ್ರೀಯ ಹಿಂದೀ ನಿರ್ದೇಶನಾಲಯ, ವೈಜ್ಞಾನಿಕ ಮತ್ತು ತಾಂತ್ರಿಕ ಪಾರಿಭಾಷಿಕ ಪದಾವಲೀ ಆಯೋಗ ಇತ್ಯಾದಿ ಸಂಸ್ಥೆಗಳೊಂದಿಗೆ ಸಂಪರ್ಕಿಸಿ ಈ ದಿಕ್ಕಿನಲ್ಲಿ ಸಹಕಾರವನ್ನು ಪಡೆದುಕೊಳ್ಳುವ ಆಲೋಚನೆಯನ್ನೂ ಅಕಾಡೆಮಿ ಇರಿಸಿಕೊಂಡಿದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳ ಅಂಗವಾಗಿ ಕಾರ್ಯಶಿಬಿರಗಳನ್ನು ಆಯೋಜಿಸಿ, ಅನುವಾದದ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಸುವ, ಸಮರ್ಥ ಭಾಷಾಂತರಕಾರರನ್ನು ಗುರುತಿಸುವ ಪ್ರಯತ್ನಗಳನ್ನು ಅಕಾಡೆಮಿ ಮಾಡುತ್ತಿದೆ. ಈಗಾಗಲೇ ಕನ್ನಡ–ತೆಲುಗು, ಕನ್ನಡ–ಹಿಂದೀ, ಯಂತ್ರಾನುವಾದ, ವಿಜ್ಞಾನ ಸಾಹಿತ್ಯ ಅನುವಾದ ಇವುಗಳಿಗೆ ಸಂಬಂಧಿಸಿದಂತೆ ರಾಜ್ಯದ ಬೇರೆ–ಬೇರೆ ಕೇಂದ್ರಗಳಲ್ಲಿ ಹಾಗೂ ಹೊರ ರಾಜ್ಯಗಳಲ್ಲಿ ಕಾರ್ಯಶಿಬಿರಗಳನ್ನೂ, ವಿಚಾರಗೋಷ್ಠಿಗಳನ್ನೂ ನಡೆಸಲಾಗಿದೆ. ಉರ್ದು ಮತ್ತು ತಮಿಳು ಭಾಷೆಗಳ ಕಾರ್ಯಶಿಬಿರಗಳನ್ನು ಆಯೋಜಿಸಲಾಗುತ್ತಿದೆ.

ಭಾಷಾಂತರ ಕ್ಷೇತ್ರದಲ್ಲಿನ ಇತ್ತೀಚಿನ ಬೆಳವಣಿಗೆಗಳನ್ನು ಗಮನಕ್ಕೆ ತೆಗೆದುಕೊಂಡು ಆ ದಿಕ್ಕಿನಲ್ಲಿ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವ ಆಲೋಚನೆಯೂ ಇದೆ. ಇತ್ತೀಚೆಗೆ ಸ್ಯಾಮ್ ಪಿಟ್ರೋಡಾ ಅವರು 'ರಾಷ್ಟ್ರೀಯ ಅನುವಾದ ಮಿಷನ್' (National Translation Mission) ಅನ್ನು ಸ್ಥಾಪಿಸುವ ಬಗ್ಗೆ ಕೇಂದ್ರ ಸರ್ಕಾರಕ್ಕೆ ಯೋಜನೆಯೊಂದನ್ನು ಸಲ್ಲಿಸಿದ್ದು, ಕೇಂದ್ರ ಸರ್ಕಾರ ಆ ಯೋಜನೆಯನ್ನು ಒಪ್ಪಿಕೊಂಡಿರುವ ವಿಚಾರ ಪತ್ರಿಕೆಗಳಲ್ಲಿ ವರದಿಯಾಗಿದೆ. ಈ ಯೋಜನೆ ಕಾರ್ಯರೂಪಕ್ಕೆ ಬಂದಲ್ಲಿ, ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳು ಜನಸಾಮಾನ್ಯರ ವರೆಗೂ ಯಶಸ್ವಿಯಾಗಿ ಮುಟ್ಟುವುದು ಸಾಧ್ಯವಾಗುತ್ತದೆ ಹಾಗೂ ರಾಷ್ಟ್ರದ ಪ್ರಗತಿಯೂ ಅಭೂತಪೂರ್ವ ರೀತಿಯಲ್ಲಿ ಆಗುತ್ತದೆ ಎಂದು ಆಶಿಸಲಾಗಿದೆ. ಈ ಯೋಜನೆ ಉದ್ಯೋಗಸೃಷ್ಟಿಯ ಮಹತ್ತರ ಯೋಜನೆಯೂ ಆಗಲಿದೆ. ಇಂಥ ಸಂದರ್ಭದಲ್ಲಿ ಅಗತ್ಯವಾಗುವ ಲಕ್ಷಾಂತರ ಮಂದಿ ಅನುವಾದಕರ ಪಡೆಯನ್ನು ಸಿದ್ಧಪಡಿಸುವುದು ಇಂಥ ಸಂಸ್ಥೆಗಳ ಮತ್ತು ವಿಶ್ವವಿದ್ಯಾನಿಲಯಗಳ ಹೊಣೆಯೇ ಆಗಿರುತ್ತದೆ. ರಾಜ್ಯದ ಹಾಗೂ ಹೊರಗಿನ ವಿಶ್ವವಿದ್ಯಾನಿಲಯಗಳಲ್ಲಿ ಈಗಾಗಲೇ ಭಾಷಾಂತರ ವಿಭಾಗಗಳು ಸ್ಥಾಪಿತವಾಗಿದ್ದು, ಅವು ಕಾರ್ಯಶೀಲವಾಗುತ್ತಿರುವುದು ಶುಭಸೂಚಕವಾಗಿದೆ.

ಇದುವರೆಗೆ ವಿದ್ವಾಂಸರ ವೈಯಕ್ತಿಕ ಪಾಂಡಿತ್ಯ, ವ್ಯುತ್ಪತ್ತಿ ಮತ್ತು ಒಲವನ್ನು ಆಧರಿಸಿ ಅನುವಾದ ಕಾರ್ಯಗಳು ನಡೆಯುತ್ತಾ ಬಂದಿವೆ. ಆದರೆ ಇಂಥ ಕಾರ್ಯಗಳು ವ್ಯವಸ್ಥಿತವಾಗಿ ಹಾಗೂ ಉತ್ತಮ ಗುಣಮಟ್ಟದೊಂದಿಗೆ ನಡೆಯಬೇಕಾದ್ದು ಅಪೇಕ್ಷಣೀಯವಾಗಿರುವ ಹಿನ್ನೆಲೆಯಲ್ಲಿ, ಭಾಷಾಂತರ ಸಂಬಂಧವಾದ ಶಿಕ್ಷಣ–ಕ್ರಮಗಳನ್ನು ರೂಪಿಸುವುದು ಹಾಗೂ ದ್ವಿಭಾಷಾ ಮತ್ತು ಬಹುಭಾಷಾ ನಿಘಂಟುಗಳನ್ನು, ನುಡಿಗಟ್ಟುಗಳ ಮತ್ತು ಗಾದೆಗಳ ಕೋಶಗಳು, ಸಮಾನಾರ್ಥಕ ಮತ್ತು ಭಿನ್ನಾರ್ಥಕ ಕೋಶಗಳು ಹಾಗೂ ವಾಕ್ಯರಚನಾ ಕೈಪಿಡಿಗಳನ್ನು ಹೊರತರುವುದು – ಇವೇ ಮೊದಲಾದ ಕಾರ್ಯಗಳು ಆದ್ಯತೆಯ ಮೇರೆಗೆ ನಡೆಯಬೇಕಾಗಿವೆ.

ಕರ್ನಾಟಕ ಸರ್ಕಾರ ಅನುವಾದ ಅಕಾಡೆಮಿಯ ವಿಷಯದಲ್ಲಿ ವಿಶೇಷವಾದ ಆಸಕ್ತಿಯನ್ನು

ತೋರಿ ಅಗತ್ಯವಾದ ನೆರವನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ವಿಶೇಷ ಸಂತೋಷದ ವಿಚಾರವೇ ಆಗಿದೆ. ಅದರಲ್ಲಿಯೂ ಈ ಬಾರಿ ಸುವರ್ಣ ಕರ್ನಾಟಕ ಕಾರ್ಯಕ್ರಮಗಳ ಅಂಗವಾಗಿ ವಿಶೇಷ ಧನಸಹಾಯ ನೀಡಿರುವುದರಿಂದ ಪ್ರಸಿದ್ಧ/ಅಲಭ್ಯ ಅನುವಾದಗಳ ಮರುಪ್ರಕಟಣೆ ಕಾರ್ಯವನ್ನು ಕೈಗೊಳ್ಳುವುದು, ಮತ್ತಿತರ ಮಹತ್ವದ ಪ್ರಕಟಣೆಗಳನ್ನು ಕೈಗೊಳ್ಳುವುದು ಸಾಧ್ಯವಾಗಿದೆ. ಈ ದಿಕ್ಕಿನಲ್ಲಿ ನಾಡಿನ ವಿದ್ವಾಂಸರು ವಿಶೇಷವಾದ ಸಹಾಯ–ಸಹಕಾರಗಳನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ಗೌರವದ, ಸಂತೋಷದ ಹಾಗೂ ಹೆಮ್ಮೆಯ ವಿಚಾರವೇ ಆಗಿದೆ. ಈ ಸಂದರ್ಭದಲ್ಲಿ ವಿಲ್ ಡ್ಯೂರಾಂಟ್ ಅವರ ಜಗತ್–ಪ್ರಸಿದ್ಧವಾಗಿರುವ ಹಾಗೂ ಭಾರತದ ಬೇರಾವ ಭಾಷೆಯಲ್ಲೂ ಇನ್ನೂ ಬೆಳಕು ಕಾಣದಿರುವ 'ದಿ ಸ್ಟೋರಿ ಆಫ್ ಸಿವಿಲಿಜೇಷನ್' ಸಂಪುಟಗಳ ಕನ್ನಡ ಅನುವಾದವನ್ನು ಹೊರತರುವಲ್ಲಿ ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಅವರೂ, ಬಹಳ ಹಿಂದೆಯೇ ಇಂಗ್ಲಿಷ್‌ನಲ್ಲಿ ೧೦ ಸಂಪುಟಗಳಲ್ಲಿ ಪ್ರಕಟಣೆಗೊಂಡಿರುವ ಸಂಸ್ಕೃತ ಸಾಹಿತ್ಯದ ವಿಶಿಷ್ಟ ಕೃತಿಯಾದ ಸೋಮದೇವನ 'ಕಥಾಸರಿತ್ಸಾಗರ'ದ ಕನ್ನಡ ಅನುವಾದವನ್ನು ನೇರವಾಗಿ ಸಂಸ್ಕೃತದಿಂದ ಅನುವಾದಿಸಿ ಹೊರತರುವಲ್ಲಿ ಡಾ॥ ಪಿ.ಎಸ್.ರಾಮಾನುಜಮ್ ಅವರೂ ನೆರವು ನೀಡುತ್ತಿರುವುದು ವಿಶೇಷವಾಗಿ ಸ್ಮರಣೀಯವಾಗಿದೆ. ಕನ್ನಡ ಸಹೃದಯಲೋಕ ಅಕಾಡೆಮಿಯ ಈ ಕಾರ್ಯಚಟುವಟಿಕೆಗಳ ವಿಷಯದಲ್ಲಿ ತನ್ನ ಸಹೃದಯತೆಯನ್ನು ಮೆರೆಯುತ್ತದೆ ಎಂದು ಆಶಿಸಿದ್ದೇನೆ.

ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯ ಸ್ಥಾಪನೆಗೆ ಕಾರಣರಾದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಧರ್ಮಸಿಂಗ್ ಅವರಿಗೂ, ಅಕಾಡೆಮಿಯ ಕಾರ್ಯಚಟುವಟಿಕೆಗಳ ವಿಷಯದಲ್ಲಿ ವಿಶೇಷ ಆಸಕ್ತಿಯನ್ನು ತೋರಿ, ಎಲ್ಲ ನೆರವನ್ನು ನೀಡುತ್ತಿರುವ ಇಂದಿನ ಮಾನ್ಯ ಮುಖ್ಯಮಂತ್ರಿಗಳು ಹಾಗೂ ಕನ್ನಡ ಮತ್ತು ಸಾಹಿತ್ಯ ಇಲಾಖೆಯ ಜವಾಬ್ದಾರಿಯನ್ನು ನೋಡಿಕೊಳ್ಳುತ್ತಿರುವ ಶ್ರೀ ಬಿ.ಎಸ್.ಯಡಿಯೂರಪ್ಪ ಅವರಿಗೆ ಅಕಾಡೆಮಿ ವಿಶೇಷ ಕೃತಜ್ಞತೆಗಳನ್ನು ಸಲ್ಲಿಸಬಯಸುತ್ತದೆ. ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಬಗೆಯ ಸಹಾಯ–ಸಹಕಾರ–ಮಾರ್ಗದರ್ಶನ ನೀಡುತ್ತಿರುವ ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಸುಬೀರ್ ಹರಿಸಿಂಗ್ ಅವರಿಗೂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಈಗಿನ ನಿರ್ದೇಶಕರಾಗಿರುವ ಶ್ರೀ ಮನು ಬಳಿಗಾರ್ ಅವರಿಗೂ ಅಕಾಡೆಮಿ ವಿಶೇಷ ವಂದನೆಗಳನ್ನು ಸೂಚಿಸಬಯಸುತ್ತದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಸಹಾಯ, ಸಹಕಾರ ಮತ್ತು ಮಾರ್ಗದರ್ಶನ ಮಾಡುತ್ತಿರುವ ಅಕಾಡೆಮಿಯ ಎಲ್ಲ ಗೌರವಾನ್ವಿತ ಸದಸ್ಯರಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಮಹಾಕವಿ ಸೋಮದೇವಭಟ್ಟನ 'ಕಥಾಸರಿತ್ಸಾಗರ' ಸಂಸ್ಕೃತ ಕಥಾಸಾಹಿತ್ಯದ ಅಪೂರ್ವ ಕೃತಿಗಳಲ್ಲಿ ಒಂದು. ಭಾರತೀಯ ಧರ್ಮ, ಸಂಸ್ಕೃತಿ, ನೀತಿಶಾಸ್ತ್ರ, ರಾಜಕೀಯ ಚಿಂತನೆ, ಸಾಮಾಜಿಕ ಕಳಕಳಿ, ಸಾಹಿತ್ಯ ಪ್ರೀತಿ, ಕಥಾನಿರೂಪಣೆಯ ಕಲೆಗಾರಿಕೆ ಮತ್ತು ಸ್ವಾರಸ್ಯ – ಇವುಗಳೆಲ್ಲದರಿಂದ ಅದು ಭಾರತೀಯ ಸಾಹಿತ್ಯದ ವಿಶಿಷ್ಟ ಕೃತಿಗಳಲ್ಲಿ ಒಂದಾಗಿದೆ. ಜೀವನದ ಬಗೆಗಿನ ಎಲ್ಲ ಭಾರತೀಯ ಆದರ್ಶಗಳು ಇಲ್ಲಿಯ ಕಥೆಗಳಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಮೈದಳೆದಿವೆ. ನಮ್ಮ ಪ್ರಾಚೀನ

ಕಥಾಪರಂಪರೆಯ ಪ್ರತೀಕವಾಗಿರುವಂತೆಯೇ, ತನ್ನ ಕಾವ್ಯಮಯ ನಿರೂಪಣೆಯಿಂದಲೂ ಅದು ಸಾಹಿತ್ಯಪ್ರಿಯರನ್ನು ತನ್ನತ್ತ ಸೆಳೆದುಕೊಂಡಿದೆ. ಇಂಥ ಕೃತಿಯ ಓದು ನಮ್ಮ ಮಕ್ಕಳಲ್ಲಿ, ಜನತೆಯಲ್ಲಿ ಸತ್–ಸಂಸ್ಕೃತಿಯನ್ನು ಮೂಡಿಸಲು ಖಂಡಿತವಾಗಿಯೂ ನೆರವಾಗುತ್ತದೆ. ಇದರ ಮಹತ್ವವನ್ನು ಅರಿತ ಸಿ.ಎಚ್. ಥಾನಿ ಎಂಬ ಪಾಶ್ಚಾತ್ಯ ವಿದ್ವಾಂಸ ಕಳೆದ ಶತಮಾನದಲ್ಲಿಯೇ (ಸು. ೧೯೨೩) ಹನ್ನೊಂದು ಸಂಪುಟಗಳಲ್ಲಿ ಇದನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದನೆಂಬ ಸಂಗತಿ ಇದರ ವೈಶಿಷ್ಟ್ಯ–ಮಹತ್ವಗಳಿಗೆ ಸಾಕ್ಷಿಯಾಗಿದೆ. ಟಿ. ಚಿದಂಬರ ಪಂಡಿತರು 'ಕರ್ಣಾಟಕ ಕಥಾಸರಿತ್ಸಾಗರ' (೧೯೨೨) ಎಂಬ ಹೆಸರಿನಲ್ಲಿಯೂ, ಎ. ಆರ್. ಕೃಷ್ಣಶಾಸ್ತ್ರಿಗಳು 'ಕಥಾಮೃತ' (೧೯೫೭, ೬೮) ಎಂಬ ಹೆಸರಿನಲ್ಲಿಯೂ ಇದರ ಸಂಕ್ಷಿಪ್ತ ಆವೃತ್ತಿಗಳನ್ನು ಹೊರತಂದಿದ್ದರು. ದೇವುಡು ಅವರ ವಿ. ರಾಘವನ್ ಅವರಿಂದ ಸಂಕಲಿತವಾದ ಇದರ ೧೬–ಕಥೆಗಳನ್ನು ಕನ್ನಡಕ್ಕೆ ತಂದಿರುವುದೂ (೧೯೫೮) ಗಮನಿಸಬೇಕಾದ ಸಂಗತಿಯೇ ಆಗಿದೆ. ಆದರೆ ಸಮಗ್ರವಾಗಿ ಹಾಗೂ ಸಮೂಲವಾಗಿ ಇದರ ಕನ್ನಡ ಆವೃತ್ತಿ ಹೊರಬರುತ್ತಿರುವುದು ಇದೇ ಮೊದಲು. 'ನಿರ್ಣಯ ಸಾಗರ'ದ ವತಿಯಿಂದ ಪ್ರಕಟವಾಗಿರುವ ಪಂಡಿತ ದುರ್ಗಾ ಪ್ರಸಾದ್ ಮತ್ತು ಕಾಶೀನಾಥ ಪಾಂಡುರಂಗ ಪರಬ್ ಅವರಿಂದ ಸಂಪಾದಿತವಾದ ಹಾಗೂ ವಾಸುದೇವ ಲಕ್ಷ್ಮಣಶಾಸ್ತ್ರೀ ಪಣಶೀಕರ ಅವರಿಂದ ಪರಿಶೋಧಿತವಾಗಿರುವ ೧೯೧೫ರ ಆವೃತ್ತಿಯನ್ನು ಇದಕ್ಕೆ ಆಧಾರವಾಗಿ ಇರಿಸಿಕೊಳ್ಳಲಾಗಿದೆ. ನಾಡಿನ ಅನೇಕ ಖ್ಯಾತ ಸಂಸ್ಕೃತ ವಿದ್ವಾಂಸರು ಅಕಾಡೆಮಿಯ ಈ ಯೋಜನೆಯಲ್ಲಿ ಸಹಕರಿಸಿದ್ದಾರೆ. ಡಾ. ಪಿ.ಎಸ್. ರಾಮಾನುಜಂ ಅವರಂಥ ಅಪರೂಪದ ಸಾಹಿತಿ, ವಿದ್ವಾಂಸರು ಈ ಯೋಜನೆಯ ಸಂಪಾದಕರಾಗಿ ಕಾರ್ಯನಿರ್ವಹಿಸಲು ಒಪ್ಪಿರುವುದಂತೂ ಅಕಾಡೆಮಿಗೆ ಗೌರವಪ್ರಾಯವಾದ ಸಂಗತಿಯಾಗಿದೆ ಎಂದು ನಂಬಿದ್ದೇನೆ. ಅನುವಾದಗಳಿಗೆ ಶಿಷ್ಟತೆ, ಸಾಹಿತ್ಯಸೌಷ್ಠವ ಮತ್ತು ಲಾಲಿತ್ಯಗಳನ್ನು ತಂದುಕೊಟ್ಟಿರುವುದಲ್ಲದೆ, ಕನ್ನಡ ಗದ್ಯದ ಸಹಜಗುಣಗಳು ಅಳವಡುವಂತೆ ಅವರು ನೋಡಿಕೊಂಡಿದ್ದಾರೆ. ಜೊತೆಗೆ ವಿದ್ವತ್ ಪೂರ್ಣವಾಗಿರುವ ಪೀಠಿಕೆಯನ್ನು ಬರೆದುಕೊಟ್ಟು ಈ ಸಂಪುಟಗಳ ಶೋಭೆ ಮತ್ತು ಮಹತ್ವವನ್ನು ಹೆಚ್ಚಿಸಿದ್ದಾರೆ. ಇವೆಲ್ಲ ಕನ್ನಡದ ಬಗೆಗಿನ ಅವರ ಪ್ರೀತಿ–ಗೌರವಗಳಿಗೆ ನಿದರ್ಶನವಾಗಿವೆಯೆಂದು ನಂಬಿದ್ದೇನೆ. ಅವಿರತವಾಗಿ ಶ್ರಮಿಸಿ, ನಮ್ಮ ಈ ಯೋಜನೆ ಕಾಲಬದ್ಧವಾಗಿ ಕೈಗೂಡುವಂತೆ ಮಾಡುವಲ್ಲಿ ಅವರು ನೀಡಿರುವ ಸಹಾಯ–ಸಹಕಾರ–ಮಾರ್ಗದರ್ಶನಗಳು ಅವಿಸ್ಮರಣೀಯವಾಗಿರುವಂಥವು.

ಇನ್ನೊಂದು ಮಾತು : ಇದರ ಮಹತ್ವವನ್ನು ಮನಗಂಡ ಕನ್ನಡ ನಾಡಿನ ಅನೇಕ ಗಣ್ಯ ವಿದ್ವಾಂಸರು ಥಾನಿಯವರು ಸಂಪಾದಿಸಿರುವ *'The Ocean of Story'* ಆವೃತ್ತಿಯ ಕನ್ನಡ ಅವತರಣಿಕೆಯನ್ನು ಹೊರತರಬೇಕೆಂಬ ಪ್ರಸ್ತಾಪವನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಮುಂದೆ ಇರಿಸಿದ್ದರು. ಹೀಗಾಗಿ ಇದು ಮೂಲತಃ ಕನ್ನಡ ಪುಸ್ತಕ ಪ್ರಾಧಿಕಾರದವರ ಯೋಜನೆ, ಅವರು ಈ ದಿಕ್ಕಿನಲ್ಲಿ ಕ್ರಮ ಕೈಗೊಂಡು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಅನುವಾದ ಅಕಾಡೆಮಿಯ ಸ್ಥಾಪನೆಯಾದ ಹಿನ್ನೆಲೆಯಲ್ಲಿ, ಅಂದಿನ ಪ್ರಧಾನ ಕಾರ್ಯದರ್ಶಿಗಳು ಇದನ್ನು ಅಕಾಡೆಮಿಗೆ ವರ್ಗಾಯಿಸಿದರು. ಬೇಸರಪಟ್ಟುಕೊಳ್ಳದೆ ಇದಕ್ಕೆ ಒಪ್ಪಿಗೆ ನೀಡಿದ ಪುಸ್ತಕ ಪ್ರಾಧಿಕಾರದ ಹಿಂದಿನ ಅಧ್ಯಕ್ಷರಾದ ಪ್ರೊ॥ ಎಸ್. ಜಿ. ಸಿದ್ಧರಾಮಯ್ಯನವರಿಗೆ ಅನುವಾದ ಅಕಾಡೆಮಿ ಕೃತಜ್ಞವಾಗಿದೆ.

ಅಕಾಡೆಮಿ ಈ ಯೋಜನೆಯಲ್ಲಿ ಒಂದು ಬದಲಾವಣೆ ಮಾಡಿಕೊಂಡಿದೆ. ಮೂಲ ಸಂಸ್ಕೃತ ಗ್ರಂಥದ ಇಂಗ್ಲಿಷ್ ಆವೃತ್ತಿಯನ್ನು ಕನ್ನಡಕ್ಕೆ ತಂದುಕೊಳ್ಳುವ ಬದಲಿಗೆ ನೇರವಾಗಿ ಸಮೂಲವಾಗಿ ಸಂಸ್ಕೃತದಿಂದಲೇ ಅನುವಾದಿಸಿಕೊಂಡಿರುವುದೇ ಆ ಬದಲಾವಣೆ. ಕನ್ನಡ ಓದುಗರಿಗೆ ನೇರವಾಗಿ ಕಥೆಯನ್ನು ಓದಿಕೊಂಡು ಹೋಗಲು ಅನುಕೂಲವಾಗುವಂತೆ ಕನ್ನಡಾನುವಾದವನ್ನು ಪುಟದ ಮೇಲು ಅರ್ಧದಲ್ಲಿ ಕೊಟ್ಟು, ಮೂಲವನ್ನು ಕೆಳ ಅರ್ಧದಲ್ಲಿ ಅಳವಡಿಸಲಾಗಿದೆ. ಇದು ಕನ್ನಡ–ಸಹೃದಯರಿಗೆ ಪ್ರಿಯವಾಗುತ್ತದೆಂದು ನಂಬಿದ್ದೇವೆ.

ಈ ಲಂಬಕವನ್ನು ಅನುವಾದಿಸಿಕೊಟ್ಟಿರುವ ಡಾ. ಬಿ.ಎಸ್. ರಾಮಕೃಷ್ಣರಾವ್ ಅವರಿಗೆ ನಾನು ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸಬಯಸುತ್ತೇನೆ. ಈ ಸಂಪುಟಗಳು ಹೊರಬರುವ ಮೊದಲೇ ಅವರು ವಿಧಿವಶರಾದದ್ದು ನಮಗೆ ತುಂಬ ವಿಷಾದವನ್ನುಂಟು ಮಾಡಿದೆ. ಈ ಯೋಜನೆಯಲ್ಲಿ ಅವರು ತೋರುತ್ತಿದ್ದ ಆಸಕ್ತಿ–ಉತ್ಸಾಹಗಳನ್ನು, ನೀಡುತ್ತಿದ್ದ ಸಹಾಯ–ಸಹಕಾರಗಳನ್ನು ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಮೊದಲ ಕಂತಿನಲ್ಲಿ, 'ಕಥಾಸರಿತ್ಸಾಗರ'ದ ಮೂರು ಸಂಪುಟಗಳನ್ನು ಬಿಡುಗಡೆ ಮಾಡಲಾಗಿತ್ತು. ಈ ಎರಡನೆಯ ಕಂತಿನಲ್ಲಿ ಇನ್ನೆರಡು ಸಂಪುಟಗಳನ್ನು – 'ಮದನ ಮಂಚುಕಾ' ಮತ್ತು 'ರತ್ನಪ್ರಭಾ' ಲಂಬಕಗಳನ್ನು ಬಿಡುಗಡೆ ಮಾಡಲಾಗುತ್ತಿದೆ. ಉಳಿದ ಸಂಪುಟಗಳನ್ನು ಮುಂದಿನ ಒಂದೆರಡು ವರ್ಷಗಳಲ್ಲಿ ಕನ್ನಡ ಜನಸಮುದಾಯಕ್ಕೆ ಒಪ್ಪಿಸಲು ಸಾಧ್ಯವಾದೀತೆಂದೂ ನಂಬಿದ್ದೇವೆ. ಇದು ಸಾಧ್ಯವಾದಾಗ ಕನ್ನಡದ ಸಾಧನೆಗೆ ಇನ್ನೊಂದು ಹೆಮ್ಮೆಯ ಗರಿ ಸೇರಿದಂತಾಗುತ್ತದೆಂದು ನಂಬಿದ್ದೇನೆ.

ಅನುವಾದ ಅಕಾಡೆಮಿಯ ಕೆಲಸ–ಕಾರ್ಯಗಳಲ್ಲಿ ಹಾಗೂ ಪ್ರಕಟಣೆಯ ವಿಚಾರದಲ್ಲಿ ಹೃತ್ಪೂರ್ವಕವಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಅಕಾಡೆಮಿಯ ರಿಜಿಸ್ಟ್ರಾರ್ ಪಿ. ನಾರಾಯಣಸ್ವಾಮಿ ಮತ್ತು ಇತರ ಸಿಬ್ಬಂದಿವರ್ಗದವರಿಗೆ ಹಾಗೂ ಸುಂದರವಾಗಿ ಮುದ್ರಿಸುವಲ್ಲಿ ಸಹಕರಿಸಿರುವ ಮೆ॥ ಮಯೂರ ಪ್ರಿಂಟ್ ಆಡ್ಸ್‌ನ ಶ್ರೀ ಬಿ.ಎಲ್. ಶ್ರೀನಿವಾಸ ಮತ್ತು ಅವರ ಸಿಬ್ಬಂದಿವರ್ಗದವರಿಗೆ ನಮ್ಮ ವಂದನೆಗಳು.

**ಪ್ರಧಾನ್ ಗುರುದತ್ತ**
ಅಧ್ಯಕ್ಷ

# ಪ್ರಸ್ತಾವನೆ

ಇದು ಕಥಾಸರಿತ್ಸಾಗರದ ರತ್ನಪ್ರಭಾಲಂಬಕ ಎಂಬ ಏಳನೆಯ ಲಂಬಕ. ಇದರಲ್ಲಿ ಒಂಭತ್ತು ತರಂಗಗಳಿವೆ. ಇವುಗಳಲ್ಲಿ ಏಳನೆಯದರಲ್ಲಿ ಕೇವಲ ೬೧ ಶ್ಲೋಕಗಳಿದ್ದು ಇದು ಅತ್ಯಂತ ಚಿಕ್ಕದಾದ ತರಂಗ. ಒಂಭತ್ತನೆಯ ತರಂಗದಲ್ಲಿ ೨೬೫ ಶ್ಲೋಕಗಳಿದ್ದು ಅದು ಅತ್ಯಂತ ದೀರ್ಘವಾದ ತರಂಗವಾಗಿದೆ.

ಈ ಲಂಬಕವು ಪ್ರಾರಂಭವಾಗುವುದು ನರವಾಹನದತ್ತನು ಸರ್ವಾಂಗ ಸುಂದರಿಯಾದ ರತ್ನಪ್ರಭೆಯನ್ನು ಮೊದಲಬಾರಿಗೆ ಸಂಧಿಸುವ ಸಂದರ್ಭದಿಂದ. ಅದು ವಸಂತೋತ್ಸವದ ಸಮಯ. ಮತ್ತೇರಿದ ಕೋಗಿಲೆಗಳ ಇಂಚರವು ಕಾಡನ್ನು ತುಂಬಿರುತ್ತದೆ. ಮಲಯಮಾರುತವು ಬಳ್ಳಿಗಳನ್ನು ನೃತ್ಯಮಾಡಿಸುತ್ತಾ ಬೀಸುತ್ತಿರುತ್ತದೆ. ಆ ಸಮಯ 'ಪ್ರೀತ ಭೃಂಗಸುಭಗ'ವಾಗಿರುತ್ತದೆ. ಆ ಸಂದರ್ಭದಲ್ಲಿ ಅವನ ಸ್ನೇಹಿತ ವಸಂತಕನು ಬಂದು 'ತರುಣಿಯೋರ್ವಳು ಅಂತರಿಕ್ಷದಿಂದ ಇಳಿದು ಬಂದು ಅಶೋಕವೃಕ್ಷದ ಅಡಿಯಲ್ಲಿ ಕುಳಿತಿದ್ದಾಳೆ. ಅವಳು ನಿನ್ನನ್ನು ಕರೆಕಳುಹಿಸಿದ್ದಾಳೆ' ಎಂದಾಗ ನರವಾಹನದತ್ತನು ಅಲ್ಲಿಗೆ ಹೋಗಿ 'ಲೋಲಲೋಚನಷಟ್ಪದೆ'ಯಾದ 'ಪರಾಗಪುಂಜಗೌರಾಂಗಿ'ಯಾದ, ನೆರಳು ತಗುಲಿದರೂ ತಾಪವನ್ನು ಹೋಗಲಾಡಿಸುವಂತಹ, ಉಪವನದೇವತೆಯೋ ಎಂಬಂತಿದ್ದ ಆ ತರುಣಿಯನ್ನು ನೋಡಿ ಪರವಶನಾಗುತ್ತಾನೆ. ಅವಳು ತನ್ನ ಕಥೆಯನ್ನು ಹೇಳುತ್ತಾಳೆ.

ಹಿಮಾಲಯದ ಕಾಂಚನಶೃಂಗವೆಂಬ ಪಟ್ಟಣದ ವಿದ್ಯಾಧರರಾಜ ಹೇಮಪ್ರಭನಿಗೆ ಮಕ್ಕಳಿರಲಿಲ್ಲ. ಅದರಿಂದ ಒಮ್ಮೆ ಅವನು ದುಗುಡಗೊಂಡಿದ್ದುದನ್ನು ನೋಡಿ ರಾಣಿ ಅಲಂಕಾರಪ್ರಭೆಯು ಕಾರಣ ಹೇಳಿದಾಗ ಮಕ್ಕಳಿಲ್ಲದ ಸತ್ವವಂತನೊಬ್ಬನ ಕಥೆ ನೆನಪಿಗೆ ಬಂದು ದುಃಖವಾಯಿತೆನ್ನುತ್ತಾನೆ. ಮತ್ತೆ ದಾನವನ್ನೇ ಹವ್ಯಾಸವಾಗಿಸಿಕೊಂಡು ಮಕ್ಕಳಿಲ್ಲದ ವ್ಯಥೆಯನ್ನು ನೀಗಿಕೊಂಡ ಆ ಸತ್ವವಂತನ ಕಥೆಯನ್ನು ರಾಜನು ಹೇಳುತ್ತಾನೆ.

ರಾಣಿಯು ಅದನ್ನು ಕೇಳಿ 'ಸತ್ವಶೀಲರಿಗೆ ವಿಧಿಯು ಸಹಾಯ ಮಾಡುತ್ತದೆ. ನಿನಗೂ ಇಷ್ಟಾರ್ಥ ಸಿದ್ಧಿಯಾಗುತ್ತದೆ' ಎಂದು ಹೇಳಿ ವಿಕ್ರಮತುಂಗನೆಂಬ ಸತ್ವಶಾಲಿಯಾದ ರಾಜನೊಬ್ಬನ ಕಥೆಯನ್ನು ಹೇಳುತ್ತಾಳೆ. ಅದರಲ್ಲಿ ಅಗ್ನಿಯನ್ನು ಪ್ರತ್ಯಕ್ಷ ಮಾಡಿಕೊಂಡು ಚಿನ್ನದ ಬಿಲ್ವಫಲಗಳನ್ನು ಪಡೆಯಲು ಹೋಮಮಾಡುತ್ತಿದ್ದ ಒಬ್ಬ ಬ್ರಾಹ್ಮಣನು ಎಷ್ಟು ಬಿಲ್ವಹೋಮ ಮಾಡಿದರೂ ಚಿನ್ನದ ಫಲಗಳು ಬರದಿದ್ದಾಗ ರಾಜನು ತನ್ನ ತಲೆಯನ್ನೇ ಆಹುತಿ ಮಾಡುತ್ತೇನೆ ಎಂದು ಹೇಳಿ ಬಿಲ್ವವನ್ನು ಅಗ್ನಿಯಲ್ಲಿ ಹೋಮ ಮಾಡಿದಾಗ ಅಗ್ನಿ ಪ್ರತ್ಯಕ್ಷನಾಗುತ್ತಾನೆ. ತೀವ್ರ ಸತ್ವವುಳ್ಳವರಿಗೆ ಎಲ್ಲವೂ ಸಿದ್ಧಿಸುತ್ತದೆ. ತೀವ್ರಸತ್ವಸ್ಯ ನ ಚಿರಾತ್ ಭವಂತ್ಯೇವ ಸಿದ್ಧಯಃ ಎಂದು ಅಗ್ನಿಯೇ ಆ ಬ್ರಾಹ್ಮಣನಿಗೆ ಹೇಳಿ ಮಂದಪರಾಕ್ರಮಿಗಳಿಗೆ ಅವು ತಡವಾಗಿ ಸಿಗುತ್ತವೆ ಎನ್ನುತ್ತಾನೆ.

ಮುಂದೆ ವಿಕ್ರಮತುಂಗನ ಆತ್ಮಶಕ್ತಿಯ ಪರಾಕ್ರಮದ ಮತ್ತೊಂದು ಕಥೆ ಬರುತ್ತದೆ. ತಾಮ್ರವನ್ನು ಚಿನ್ನವಾಗಿಸುವ ವಿದ್ಯೆಯನ್ನು ಕಲಿತ ವಟುವೊಬ್ಬನು ಬಂದು ತನ್ನ ವಿದ್ಯೆಯನ್ನು ತೋರಿಸಲು ತೊಡಗುತ್ತಾನೆ.

ಆದರೆ ಯಕ್ಷನೊಬ್ಬ ಚಿನ್ನ ಮಾಡುವ ಪುಡಿಯನ್ನು ಅಪಹರಿಸಿ ಬಿಡುತ್ತಾನೆ. ಆಗ ತಾಮ್ರವು ಚಿನ್ನವಾಗುವುದೇ ಇಲ್ಲ. ಆದರೆ ರಾಜನಿಗೆ ಮಾತ್ರ ಅದು ಗೊತ್ತಾಗಿ ತಾನೇ ಪುಡಿಯನ್ನು ಕರಗಿದ ತಾಮ್ರದೊಳಕ್ಕೆ ಹಾಕುತ್ತಾನೆ. ಆಗ ಅದು ಚಿನ್ನವಾಗುತ್ತದೆ.

ಅಲಂಕಾರಪ್ರಭೆಯ ಮಾತುಗಳಿಂದ ಅರಸನಿಗೆ ಸಮಾಧಾನವಾಗುತ್ತದೆ. ಮುಂದೆ ಈಶ್ವರನನ್ನು ಕುರಿತು ರಾಜನು ತಪಸ್ಸು ಮಾಡುತ್ತಾನೆ. ಈ ಸಂದರ್ಭದಲ್ಲಿ ಭಗವಂತನ ಗುಣಾತಿಶಯಗಳು ಸಂಕ್ಷೇಪವಾಗಿ ವರ್ಣಿತವಾಗಿರುವುದನ್ನು ನೋಡಬಹುದು. ಪರಮಾತ್ಮನು ದಿವ್ಯಪ್ರಕಾಶವುಳ್ಳವನು, ನಿರ್ಮಲ, ವಿಶುದ್ಧಮಾನಸಾವಾಸಕಲಹಂಸ, ಜಗತ್ತಿನ ಸೃಷ್ಟಿ ಸ್ಥಿತಿಸಂಹಾರಹೇತು, ವ್ಯೋಮಾದಿಭಿನ್ನ ಅಷ್ಟಮೂರ್ತಿ, ಹೃತ್ಕುಶೇಶಯಶಾಯಿ, ನಿರ್ದುಷ್ಟರಿಗೆ ಕಾಣಿಸುವವನು, ಕೇವಲಬ್ರಹ್ಮಚಾರಿ, ಅರ್ಧನಾರೀಶ್ವರ, ವಿಶ್ವಾತ್ಮಕ. ಈ ಪ್ರಪಂಚ ಅವನ ಇಚ್ಛಾನಿರ್ಮಿತ.

ಈಶ್ವರನ ಕರುಣೆಯಿಂದ ರಾಜನಿಗೆ ಒಬ್ಬ ಮಗನೂ ಒಬ್ಬಳು ಮಗಳೂ ಹುಟ್ಟುತ್ತಾರೆ. ಆ ಮಗಳು ನರವಾಹನದತ್ತನ ಮಡದಿಯಾಗುವವಳು ಎಂದು ಅಶರೀರವಾಣಿ ಹೇಳುತ್ತದೆ. ಅವಳೇ ರತ್ನಪ್ರಭೆ. ಅವಳಿಗೆ ಗೌರಿಯು ಕನಸಿನಲ್ಲಿ ಬಂದು 'ನೀನು ಕೌಶಾಂಬೀನಗರಕ್ಕೆ ಹೋಗಿ ನಿನ್ನ ಪತಿಯಾಗುವ ವತ್ಸರಾಜನ ಮಗನನ್ನು ಕಾಣು.' ಎಂದು ಆದೇಶಿಸುತ್ತಾಳೆ.

ಅದರ ಪ್ರಕಾರ ಅವಳು ಕೌಶಾಂಬಿಗೆ ಹೋಗಿ ಉದ್ಯಾನದಲ್ಲಿ ನರವಾಹನದತ್ತನನ್ನು ಸಂಧಿಸುತ್ತಾಳೆ. ಬ್ರಹ್ಮ ನನ್ನ ಶರೀರವನ್ನೆಲ್ಲ ಕಿವಿಕಣ್ಣುಗಳಿಂದಲೇ ಏಕೆ ಮಾಡಲಿಲ್ಲ ಎಂದುಕೊಳ್ಳುತ್ತಾನೆ ಅವನು. ಅವಳ ರೂಪ ಅಂತಹುದು. ಅವರಿಬ್ಬರಿಗೂ ಪ್ರೇಮಾಂಕುರವಾಗುತ್ತದೆ. ಆಗ ಅವಳ ತಂದೆ ಹೇಮಪ್ರಭನು ಆಕಾಶಮಾರ್ಗದಿಂದ ಬಂದು ವತ್ಸರಾಜನೊಡನೆ ಮಾತನಾಡುತ್ತಾನೆ. ಅದರಿಂದಾಗಿ ರತ್ನಪ್ರಭೆಗೂ ನರವಾಹನದತ್ತನಿಗೂ ವಿವಾಹಮಂಗಳವು ನೆರವೇರುತ್ತದೆ.

ಇಲ್ಲಿಗೆ ಈ ತರಂಗ ಸಮಾಪ್ತವಾಗುತ್ತದೆ. ರತ್ನಪ್ರಭೆಯ ಪರಿಣಯವೇ ಈ ತರಂಗದ ಮುಖ್ಯ ಕಥಾಭಾಗ.

ಎರಡನೆಯ ತರಂಗವು ಪ್ರಾರಂಭವಾಗುವುದು ಸ್ತ್ರೀಯರ ಮನಸ್ಸಿನ ನಿಯಂತ್ರಣವು ಅಂತರಂಗದಿಂದ ಆಗಬೇಕೇ ವಿನಾ ಬಹಿರಂಗದ ಸುರಕ್ಷಾವ್ಯವಸ್ಥೆಯಿಂದಲ್ಲ ಎಂಬ ನೀತಿಯನ್ನು ರತ್ನಪ್ರಭೆಯು ಪ್ರತಿಪಾದಿಸುವ ಸಂದರ್ಭದಿಂದ.

ನರವಾಹನದತ್ತನನ್ನು ನೋಡಲು ಗೋಮುಖ ಮುಂತಾದ ಸಚಿವರು ಬಂದಾಗ ದ್ವಾರಪಾಲಕೆಯು ಅವರನ್ನು ಒಂದು ಕ್ಷಣ ತಡೆದು ಒಳಗೆ ಹೋಗಿ ಹೇಳಿ ಅನುಮತಿ ಪಡೆದು ಬಂದು ಅವರನ್ನು ಒಳಗೆ ಬಿಡುತ್ತಾಳೆ. ಇವರೆಲ್ಲ ಆರ್ಯಪುತ್ರನ ಗೆಳೆಯರು, ಇವರು ನಮ್ಮ ಶರೀರದಂತೆ. ಅಂತಃಪುರದೊಳಗೆ ಇಂತಹ ಸುರಕ್ಷೆಯ ವ್ಯವಸ್ಥೆ ನನಗೆ ಇಷ್ಟವಾಗುವುದಿಲ್ಲ ಎಂದು ರತ್ನಪ್ರಭೆಯು ಹೇಳಿ ಸ್ತ್ರೀಯನ್ನು ಹತೋಟಿಯಲ್ಲಿಡುವುದೆಂಬುದು ಒಂದು ನೀತಿ ಮಾತ್ರ. ಶ್ರೇಷ್ಠಮಟ್ಟದ ಶೀಲವೇ ಅವರನ್ನು ಕಾಪಾಡುವುದು. ಅವರಿಗೆ ಅಸೂಯೆ ಅಥವಾ ಮೋಹದಿಂದ ಬಹಿರಂಗ ವ್ಯವಸ್ಥೆ ಮಾಡುವುದು ವ್ಯರ್ಥ. ಉಕ್ಕೇರಿದ ನದಿಯನ್ನೂ ಸೊಕ್ಕೇರಿದ ಹೆಣ್ಣನ್ನೂ ರಕ್ಷಿಸಲು ಯಾರಿಗೆ ಸಾಧ್ಯ ಎಂದು ಹೇಳಿ ಆ ಸಂದರ್ಭದಲ್ಲಿ

ರತ್ನಾಧಿಪತಿಯೆಂಬ ರಾಜನ ಕಥೆ ಹೇಳುತ್ತಾಳೆ. ಸಮುದ್ರ ಮಧ್ಯದಲ್ಲಿರುವ ರತ್ನಕೂಟವೆಂಬ ದ್ವೀಪದಲ್ಲಿ ಪರಮವೈಷ್ಣವನಾದ ರತ್ನಾಧಿಪತಿಯೆಂಬ ರಾಜನಿರುತ್ತಾನೆ. ಅವನು ಜಗತ್ತನ್ನೇ ಜಯಿಸಲು ವಿಷ್ಣುವನ್ನು ಆರಾಧಿಸುತ್ತಾನೆ. ವಿಷ್ಣುವು 'ಶಾಪಗ್ರಸ್ತ ಗಂಧರ್ವನೊಬ್ಬ ಬಿಳಿಯ ಆನೆಯಾಗಿ ಹುಟ್ಟಿದ್ದಾನೆ. ಅದು ಗಗನಗಾಮಿ. ಅದು ನಿನ್ನ ಬಳಿ ಬರುತ್ತದೆ. ಅದನ್ನೇರಿ ಯಾರನ್ನು ಎದುರಿಸಿದರೂ ನೀನು ಗೆಲ್ಲುತ್ತೀಯೆ. ಹೀಗೆ ಗೆದ್ದು ೮೦,೦೦೦ ರಾಜಕುಮಾರಿಯರನ್ನು ಪಡೆಯುತ್ತೀಯೆ' ಎಂದು ವರ ಕೊಡುತ್ತಾನೆ. ಎಲ್ಲವೂ ಅದರಂತೆಯೇ ನಡೆಯುತ್ತದೆ.

ಒಮ್ಮೆ ಆ ಆನೆಯಮೇಲೆ ಆಕಾಶಮಾರ್ಗವಾಗಿ ಹೋಗುತ್ತಿದ್ದಾಗ ಒಂದು ಗರುಡಪಕ್ಷಿ ಅದರ ನೆತ್ತಿಗೆ ಕೊಕ್ಕಿನಿಂದ ಬಡಿಯಲು ಆ ಆನೆ ಪ್ರಜ್ಞೆ ತಪ್ಪಿ ಬೀಳುತ್ತದೆ. ಪ್ರಜ್ಞೆ ಬಂದರೂ ಏಳಲಾಗುವುದಿಲ್ಲ. ಹೀಗೆ ಐದು ದಿನಗಳು ಕಳೆಯುತ್ತವೆ. ನಿರಾಹಾರವಾಗಿ ಆ ಆನೆ ಅದೇ ಸ್ಥಿತಿಯಲ್ಲಿರುತ್ತದೆ, ರಾಜನು ಲೋಕಪಾಲಕರನ್ನು ಬೇಡಿಕೊಂಡು ಆನೆಯ ಸ್ಥಿತಿ ಸರಿ ಹೋಗದಿದ್ದರೆ ತಲೆ ಕಡಿದುಕೊಳ್ಳುವುದಾಗಿ ಹೇಳಿ ಸಿದ್ಧನಾಗಲು ಅಶರೀರವಾಣಿಯೊಂದು ಮೊಳಗಿ ಪತಿವ್ರತೆಯು ಆನೆಯನ್ನು ಮುಟ್ಟಿದರೆ ಅದು ಏಳುತ್ತದೆ ಎನ್ನುತ್ತದೆ. ಆದರೆ ಎಂಭತ್ತು ಸಾವಿರ ರಾಣಿಯರು ಮುಟ್ಟಿದರೂ ಅದು ಏಳುವುದಿಲ್ಲ. ಎಲ್ಲರೂ ಅಸತಿಯರೇ.

ಆಗ ತಾಮ್ರಲಿಪ್ತಿಯಿಂದ ಬಂದ ವ್ಯಾಪಾರಿಯೊಬ್ಬನ ಸೇವಕಿ ಶೀಲವತಿ ಎಂಬುವಳು ಆನೆಯನ್ನು ಮುಟ್ಟಿದಾಗ ಅದು ಮೇಲೆದ್ದು ಆಹಾರ ತಿನ್ನುತ್ತದೆ. ರಾಜನು ಅವಳನ್ನು ಅಪಾರರತ್ನರಾಶಿಯಿಂದ ಗೌರವಿಸುತ್ತಾನೆ. ಮತ್ತೆ, ಅವಳಂತಹ ಶೀಲವತಿ ಅವಳ ತಂದೆಯ ಕುಲದಲ್ಲಿದ್ದರೆ ತನಗೆ ವಿವಾಹ ಮಾಡಿಸು ಎನ್ನುತ್ತಾನೆ. ಅವಳು ತನ್ನ ತಂಗಿ ರಾಜದತ್ತೆಯ ಹೆಸರನ್ನು ಸೂಚಿಸುತ್ತಾಳೆ. ರಾಜನು ಅವಳ ಊರಿಗೆ ಹೋಗಿ ಒಪ್ಪಿಸಿ ಮುಹೂರ್ತವನ್ನು ಸೂಚಿಸಿದಾಗ ಮೂರು ತಿಂಗಳ ನಂತರ ಲಗ್ನವಿದ್ದು ಅದಕ್ಕೆ ಮೊದಲು ಮಾಡಿದರೆ ಅವಳೂ ಅಸತಿಯಾಗುತ್ತಾಳೆ ಎನ್ನುತ್ತಾರೆ. ರಾಜನು ವಿಳಂಬ ಸಹಿಸದೆ ಕೂಡಲೇ ಅವಳನ್ನು ಮದುವೆಯಾಗಿ ಕರೆತಂದು ಯಾರೂ ಪ್ರವೇಶಿಸಲಾಗದ ಸಮುದ್ರಮಧ್ಯದ ಮನೆಯಲ್ಲಿರಿಸುತ್ತಾನೆ.

ಆದರೆ ಒಮ್ಮೆ ಇಬ್ಬರೂ ಮಧುಪಾನ ಮಾಡಿ ರಾಜನು ರಾಜಕಾರ್ಯಕ್ಕಾಗಿ ಹಿಂದಿರುಗಿ ಹೋಗಿದ್ದಾಗ ಹಡಗು ಮುಳುಗಿ ಹೋಗಿ ಅಲ್ಲಿಂದ ತಪ್ಪಿಸಿಕೊಂಡು ಅಲ್ಲಿಗೇ ಬಂದ ವರ್ಮಸೇನನೆಂಬ ವ್ಯಾಪಾರಿಯುವಕನನ್ನು ನೋಡಿ ಮತ್ತೇರಿದ ರಾಣಿ ಅವನೊಡನೆ ಸಮಾಗಮ ಹೊಂದುತ್ತಾಳೆ. ಹಿಂದಿರುಗಿದ ರಾಜ ಈ ಅನನ್ಯ ಸನ್ನಿವೇಶವನ್ನು ನೋಡಿ ವೈರಾಗ್ಯ ಹೊಂದುತ್ತಾನೆ. ಮಾರಮೋಹಿತೆಯೂ ಮದ್ಯದಿಂದ ಮತ್ತೇರಿದವಳೂ ಆದ ಸ್ತ್ರೀಯು ಪತಿವ್ರತೆಯಾಗಲು ಹೇಗೆ ಸಾಧ್ಯ ಎಂದುಕೊಂಡು ರಾಜ್ಯಾರ್ಧವನ್ನು ಶೀಲವತಿಗೆ ಕೊಟ್ಟು ಉಳಿದರ್ಧವನ್ನು ರಕ್ಷಿಸಲು ಸಜ್ಜನವಿಪ್ರನಿಗೆ ಕೊಟ್ಟು ರಾಜನು ಕಾಡಿಗೆ ತೆರಳುವಾಗ ಗಗನಗಾಮಿಯಾದ ಬಿಳಿಯಾನೆಯು ಗಂಧರ್ವನ ರೂಪದಲ್ಲಿ ಬರುತ್ತದೆ. ರಾಜನೂ ತಾನು ಶಾಪಗ್ರಸ್ತ ಗಂಧರ್ವರೆಂದು ಹೇಳಿ ಶಾಪದಿಂದಲೇ ರಾಜನು ತನ್ನ ಹೆಂಡತಿಯು ಪರಪುರುಷನೊಡನೆ ಇರುವುದನ್ನು ನೋಡಬೇಕಾಗುತ್ತದೆ ಹಾಗೂ ವೈರಾಗ್ಯ ಬಂದಾಗ ಶಾಪವಿಮೋಚನೆ ಎಂದು ಹೇಳುತ್ತಾನೆ.

ರಾಜದತ್ತೆಯೂ ಅಂದಿನ ಜನ್ಮದ ರಾಜವತೀ. ಮೂವರೂ ಶಾಪವಿಮುಕ್ತರಾಗಿ ಶರೀರಗಳನ್ನು ಬಿಟ್ಟು ಗಂಧರ್ವರಾಗಿ ಗಗನಕ್ಕೆ ಹಾರಿ ತಮ್ಮ ಲೋಕಕ್ಕೆ ಹೋಗುತ್ತಾರೆ.

ಇದರ ನೀತಿಸಾರ ಇದೇ. ಯಾರೂ ಒತ್ತಾಯದಿಂದ ನಾರಿಯನ್ನು ಕಾಪಾಡಲು ಸಾಧ್ಯವಿಲ್ಲ. ಕುಲಸ್ತ್ರೀಯರನ್ನು ಅವರ ಶುದ್ಧಸತ್ವದ ಪಾಶದ ಕಟ್ಟು ಯಾವಾಗಲೂ ಕಾಪಾಡುತ್ತದೆ.

ಈ ಇಡೀ ತರಂಗದ ಶ್ರುತಿಯು ಇದೇ. ಸ್ತ್ರೀಯರ ಶೀಲವನ್ನು ಕಾಪಾಡುವುದು ಅವರ ಶೀಲವೇ ವಿನಾ ಬಹಿರಂಗ ಸುರಕ್ಷಾವ್ಯವಸ್ಥೆಯಲ್ಲ, ಅಂತರಂಗದ ಸುರಕ್ಷೆ ಬಹಳ ಮುಖ್ಯ.

ರತ್ನಪ್ರಭೆಯು ಹೇಳಿದ ಈ ಕಥೆಯೊಂದಿಗೆ ಈ ತರಂಗವು ಮುಕ್ತಾಯವಾಗುತ್ತದೆ.

ಮೂರನೆಯ ತರಂಗವು ಸಚಿವ ಗೋಮುಖನು ಹೇಳಿದ ಕಥಾವಾಹಿನಿ. ಎಂದಿನಂತೆ ಉಪಕಥೆಗಳ ಉಪನದಿಗಳ ತರಂಗಗಳ ಲಾಸ್ಯ. ಈ ಕಥೆಗಳ ಮೂಲಭೂತ ವಿಷಯವೆಂದರೆ ಪತಿವ್ರತೆಯರು ವಿರಳ ಹಾಗೂ ಅಸತಿಯರು ಚಂಚಲೆಯರು ಹಾಗೂ ವಿಶ್ವಾಸಕ್ಕೆ ಅನರ್ಹರು ಎಂಬುದೇ.

ಇದರಲ್ಲಿ ನಿಶ್ಚಯದತ್ತನೆಂಬುವನು ಅನುರಾಗವತಿಯೆಂಬ ವಿದ್ಯಾಧರಿಯ ಮೋಹಕ್ಕೆ ಒಳಗಾಗುತ್ತಾನೆ. ಅವನು ನಿತ್ಯವೂ ವಿಲೇಪನಮಾಡಿಕೊಳ್ಳುವಾಗ ಬೆನ್ನಿಗೆ ವಿಲೇಪನೆ ಮಾಡಿಕೊಳ್ಳಲು ಸ್ಮಶಾನಕ್ಕೆ ಹೋಗಿ ಅಲ್ಲಿರುವ ಕಂಭವೊಂದಕ್ಕೆ ವಿಲೇಪನ ಹಚ್ಚಿ ಅದಕ್ಕೆ ಬೆನ್ನನ್ನು ಉಜ್ಜಿಕೊಳ್ಳುತ್ತಾನೆ. ಹಾಗೆ ನುಣ್ಣಗಾಗಿದ್ದ ಆ ಕಂಭದಲ್ಲಿ ಒಮ್ಮೆ ಸೇರಿಕೊಂಡಿದ್ದ ವಿದ್ಯಾಧರಿಯೊಬ್ಬಳು ಇವನು ಬೆನ್ನಿಗೆ ಉಜ್ಜಿಕೊಳ್ಳುವ ಕಷ್ಟವನ್ನು ನೋಡಲಾರದೆ ಹೊರಗಡೆ ಕೈಚಾಚಿ ತಾನೇ ಬೆನ್ನಿಗೆ ವಿಲೇಪನ ಹಚ್ಚುತ್ತಾಳೆ. ಈ ಅಂಗರಾಗದಿಂದ ಅನುರಾಗ ಹುಟ್ಟುತ್ತದೆ. ಅವಳ ಕೈಯನ್ನು ಇವನು ಹಿಡಿದು ನೀನು ಪ್ರತ್ಯಕ್ಷಳಾದರೆ ಬಿಡುತ್ತೇನೆಂದಾಗ ಅವಳು ಹೊರಬಂದು ತನ್ನ ಕಥೆ ಹೇಳುತ್ತಾಳೆ. ಹಿಮಾಚಲದ ಪುಷ್ಕರಾವತಿಗೆ ಬಂದು ನನ್ನನ್ನು ಸೇರು ಎಂದು ಹೇಳಿ ಅವಳು ಹೋಗಿಬಿಡುತ್ತಾಳೆ. ಇವನ ಪ್ರಣಯ ಪ್ರಯಾಣ ಆರಂಭವಾಗುತ್ತದೆ. ಇದು ಒಮ್ಮೆ ಚರಿತ್ರೆಯ ಒಂದು ಪುಟದಂತೆ, ಮತ್ತೆ ಶಾಕಿನಿಡಾಕಿನಿಯರ ಭಯಂಕರವಾದ ಕಥೆಯಾಗಿ ಸಾಗುತ್ತದೆ. ಹಿಮಾಚಲದ ಕಡೆ ಹೊರಟ ನಿಶ್ಚಯದತ್ತನನ್ನು ದಾರಿಯಲ್ಲಿ ತಾಜಕರೆಂಬ ಮ್ಲೇಚ್ಛರು ಗುಲಾಮನಾಗಿಸಿ ಮುರವಾರನೆಂಬ ತುರುಷ್ಕನಿಗೆ ಮಾರಿಬಿಡುತ್ತಾರೆ. ಅವನು ದೇವಿಯನ್ನು ಸ್ತುತಿಸಿ ಹೇಗೋ ತಪ್ಪಿಸಿಕೊಂಡು ಪುಷ್ಕರಾವತಿಯ ಕಡೆ ಹೊರಡುತ್ತಾನೆ.

ಮುಂದೆ ರೋಚಕವಾದ ಹಾಗೂ ಭಯಂಕರವಾದ ದೃಶ್ಯಾವಳಿ ಅನಾವರಣಗೊಳ್ಳುತ್ತದೆ. ನಡುವೆ ನಾಲ್ವರು ಮಹಾವ್ರತಿಗಳನ್ನು ಸಂಧಿಸಿದ ನಿಶ್ಚಯದತ್ತನು ಅವರೊಡನೆ ಪ್ರಯಾಣಮಾಡಿ ವಿತಸ್ತಾನದಿಯನ್ನು ದಾಟಿ ಒಂದು ಕಾಡನ್ನು ಹೊಕ್ಕು ಅಲ್ಲಿದ್ದ ಶಿವಾಲಯವೊಂದರ ಬಳಿ ಬೂದಿಯ ಮಂಡಲ ಮಾಡಿ ಅದರೊಳಗೆ ಬೆಂಕಿಯುರಿಸಿ ಅಲ್ಲಿ ಎಲ್ಲರೂ ಕೂರುತ್ತಾರೆ. ಆಗ ಶೃಂಗೋತ್ಪಾದಿನಿಯೆಂಬ ಯಕ್ಷಿಣಿ ಬಂದು ಕಿನ್ನರಿ ನುಡಿಸಿ ಮಂತ್ರ ಹಾಕಿ ಒಬ್ಬೊಬ್ಬರಾಗಿ ಅವರ ತಲೆಯಲ್ಲಿ ಕೋಡುಮೂಡಿಸಿ ಮೋಹಗೊಳಿಸಿ ಅವರು ಬೆಂಕಿಗೆ ಬೀಳುವಂತೆ ಮಾಡಿ ತಿಂದುಬಿಡುತ್ತಾಳೆ. ಕೊನೆಯವನನ್ನು ತಿನ್ನುವಾಗ ಕಿನ್ನರಿಯನ್ನು ಕೆಳಗೆ ಇಟ್ಟ ಸಮಯ ನೋಡಿ ನಿಶ್ಚಯದತ್ತನು ಅದನ್ನು ತೆಗೆದು ತಾನೇ ನುಡಿಸಿ ಕೇಳಿ ಕೇಳಿ ಹೃದ್ಗತವಾಗಿದ್ದ ಮಂತ್ರವನ್ನು ಪಠಿಸಿ ಯಕ್ಷಿಣಿಗೆ ಕೋಡುಮೂಡಿಸಿ ಅವಳು ಪ್ರಾಣಭಿಕ್ಷೆ ಕೇಳುವಂತೆ ಮಾಡುತ್ತಾನೆ.

ಅವಳು ಅನುರಾಗವತಿಯ ಬಳಿ ಅವನನ್ನು ಕರೆದೊಯ್ಯುವುದಾಗಿ ಮಾತು ಕೊಟ್ಟು ಅದರಂತೆ ಕರೆದೊಯ್ಯುತ್ತಾಳೆ. ದಾರಿಯಲ್ಲಿ ಬೆಳಗಾದುದರಿಂದ ಅವನನ್ನು ಕೆಳಗಿಳಿಸಿ ಮತ್ತೆ ಬರುತ್ತೇನೆಂದು ಹೇಳಿ ಹೋಗುತ್ತಾಳೆ. ನೀರನ್ನು ಹುಡುಕುತ್ತಾ ಹೋದಾಗ ನಿಶ್ಚಯದತ್ತನಿಗೆ ಫಳಫಳನೆ ಹೊಳೆಯುತ್ತಿದ್ದ ಎರಡು ಮಣಿಗಳು ಕಾಣಿಸಿ ಅಲ್ಲಿ ಅಗೆದಾಗ ಹೂತುಹೋಗಿದ್ದ ಒಂದು ಕಪಿಯು ಕಾಣಿಸಿತು. ಆ ಮಣಿಗಳು ಅದರ ಕಣ್ಣುಗಳೇ . ಜೀವಂತವಾಗಿದ್ದ ಆ ಕಪಿಯು ಸೋಮಸ್ವಾಮಿಯೆಂಬ ಒಬ್ಬ ಮನುಷ್ಯನಾಗಿದ್ದು ಅವನು ಬಂಧುದತ್ತೆಯೆಂಬ ವ್ಯಾಪಾರಿಯ ಹೆಂಡತಿಯ ಮೇಲೆ ಮೋಹಗೊಂಡು ಅವಳೊಡನೆ ಸಮಾಗಮ ಹೊಂದುತ್ತಾನೆ. ಅವಳು ತಂದೆಯ ಮನೆಯಿಂದ ಗಂಡನಮನೆಗೆ ಹೊರಡುವಾಗ ಸೋಮಸ್ವಾಮಿಯನ್ನು ಯೋಗಿನಿಯ ಸಹಾಯದಿಂದ ಕಪಿಯಾಗಿಸಿ ಕರೆದೊಯ್ಯುತ್ತಾಳೆ. ದಾರಿಯಲ್ಲಿ ಕಪಿಗಳ ಒಂದು ದೊಡ್ಡ ಹಿಂಡು ಆಕ್ರಮಣ ಮಾಡಿದಾಗ ಈ ಕಪಿಯು ತಪ್ಪಿಸಿಕೊಂಡು ಕಾಡೊಳಕ್ಕೆ ಹೋಗುತ್ತದೆ. ಆದರೆ ಅಲ್ಲೊಂದು ಆನೆ ಅದನ್ನು ಹುತ್ತದ ಕೆಸರಿನೊಳಕ್ಕೆ ಎಸೆಯುತ್ತದೆ. ಅದನ್ನೇ ನಿಶ್ಚಯದತ್ತನು ಕಾಪಾಡಿದುದು.

ಆ ಕಪಿಯು ನಿಶ್ಚಯದತ್ತನಿಗೆ ಬುದ್ಧಿವಾದ ಹೇಳುತ್ತದೆ. ಸ್ತ್ರೀವ್ಯಾಮೋಹವನ್ನು ಬಿಡಬೇಕು. ಸ್ತ್ರೀಯರು ಸಂಧ್ಯಾಸಮಯದಂತೆ ಕ್ಷಣಿಕವಾದ ರಾಗವುಳ್ಳವನು. ನದಿಯಂತೆ ಕುಟಿಲಾಶಯವುಳ್ಳವರು. ನಾಗಿಯಂತೆ ವಿಶ್ವಾಸಕ್ಕೆ ಯೋಗ್ಯವಿಲ್ಲದವರು, ವಿದ್ಯುತ್ತಿನಂತೆ ಚಪಲೆಯರು ಎಂದೆಲ್ಲ ಹೇಳುತ್ತದೆ.

ಈ ಸಂದರ್ಭದಲ್ಲಿ ಭವಶರ್ಮನೆಂಬ ಅದರ ಸ್ನೇಹಿತನು ಹೇಳಿದ ಕಥೆಯನ್ನು ಹೇಳುತ್ತದೆ. ಅದರಲ್ಲಿ ಭವಶರ್ಮನು ವಾರಾಣಸಿಯಲ್ಲಿ ಸೋಮದೆ ಎಂಬ ಚಪಲೆಯಾದ ಗುಪ್ತಯೋಗಿನಿಯೊಡನೆ ಸಮಾಗಮವನ್ನು ಹೊಂದುತ್ತಾನೆ. ಅವಳ ಮೇಲೆ ಅಪಾರ ಪ್ರೀತಿಯನ್ನು ಹೊಂದಿದ್ದ ಅವನು ಒಮ್ಮೆ ಕೋಪದಿಂದ ಅವಳನ್ನು ಹೊಡೆದಾಗ ಅವಳು ಇವನ ಕತ್ತಿಗೆ ಒಂದು ಸೂತ್ರವನ್ನು ಕಟ್ಟಿ ಬಸವನನ್ನಾಗಿ ಮಾಡಿ ಮಾರಿಬಿಡುತ್ತಾಳೆ. ಆಗ ಬಂಧಮೋಚನೀ ಎಂಬ ಯೋಗಿನಿಯು ಕರುಣೆಯಿಂದ ರಹಸ್ಯವಾಗಿ ಇವನ ಕಂಠಸೂತ್ರವನ್ನು ಬಿಡಿಸಿ ಪುನಃ ಮನುಷ್ಯನನ್ನಾಗಿ ಮಾಡುತ್ತಾಳೆ. ಇದನ್ನು ತಿಳಿದ ಸೋಮದೆಯು ಮರುದಿನ ಕಪ್ಪು ಕುದುರೆಯ ರೂಪದಲ್ಲಿ ಯೋಗಿನಿಯ ಮೇಲೆ ಆಕ್ರಮಣ ಮಾಡುತ್ತಾಳೆ. ಬಂಧಮೋಚನಿಯು ಕೆಂಪು ಕುದುರೆಯ ರೂಪದಲ್ಲಿ ಸೋಮದೆಯೊಡನೆ ಹೋರಾಡುತ್ತಾಳೆ. ಅವಳು ಮೊದಲೇ ಹೇಳಿಕೊಟ್ಟಂತೆ ಭವಶರ್ಮನು ಕತ್ತಿಯಿಂದ ಸೋಮದೆಯನ್ನು ಹೊಡೆಯುತ್ತಾನೆ. ಸೋಮದೆಯು ಸಾಯುತ್ತಾಳೆ. ಆದ್ದರಿಂದ ಕುಸ್ತ್ರೀಸಂಗವನ್ನು ಮನಸ್ಸಿನಲ್ಲಿಯೂ ಯೋಚನೆ ಮಾಡಬಾರದು ಎಂದು ಭವಶರ್ಮನು ತನಗೆ ಹೇಳಿದರೂ ಶಾಕಿನೀಸಖಿಯಾದ ಬಂಧುದತ್ತೆಯ ಹಿಂದೆ ಹೋಗಿ ತಾನು ಈ ದುಸ್ಥಿತಿಗೆ ಬಂದೆ ಎನ್ನುತ್ತಾನೆ. ಮತ್ತೆ ಅನುರಾಗಪರೆಯ ಹಿಂದೆ ಹೋಗಬೇಡ. ತನ್ನ ವರ್ಗದವನು ಸಿಕ್ಕರೆ ಅವನ ಹಿಂದೆ ಓಡಿಹೋದಾಳು ಎನ್ನುತ್ತಾನೆ. ಆದರೆ ರಾಗನಿರ್ಭರವಾದ ನಿಶ್ಚಯದತ್ತನ ಮನಸ್ಸಿಗೆ ಈ ಬುದ್ಧಿವಾದ ಹೋಗಲಿಲ್ಲ. ಅವನು ಶೃಂಗೋತ್ಪಾದಿನಿಯೊಡನೆ ಹೊರಟು ಅನುರಾಗಪರೆಯನ್ನು ಸಂಧಿಸಿ ಅವಳನ್ನು ವಿವಾಹವಾಗುತ್ತಾನೆ. ಆದರೆ ಅವಳು ಮುಂದೆ ವಿದ್ಯಾಧರನೊಬ್ಬನನ್ನು ನೋಡಿ ಅವನೊಡನೆ ಸಮಾಗಮ ಹೊಂದಿರುವುದನ್ನು ಕಪಿಯು ತನ್ನ ದಿವ್ಯದೃಷ್ಟಿಯಿಂದ ನೋಡಿ ಇವನಿಗೂ ತೋರಿಸುತ್ತದೆ. ನಿಶ್ಚಯದತ್ತನು ವಿರಕ್ತಿ ಹೊಂದಿ ಶಿವನಿಗೆ

ಶರಣಾಗಿ ತಪಸ್ಸಿನಲ್ಲಿ ನಿರತನಾಗುತ್ತಾನೆ. ಬಳಿಕ ಮೋಕ್ಷದೆಯೆಂಬ ತಪಸ್ವಿನಿಯು ಬಂದು ಕಪಿಯನ್ನು ಮತ್ತೆ ಮನುಷ್ಯರೂಪಕ್ಕೆ ತರುತ್ತಾಳೆ. ನಿಶ್ಚಯದತ್ತ ಸೋಮಸ್ವಾಮಿಗಳಿಬ್ಬರೂ ಕ್ರಮೇಣ ತಪಸ್ಸಿನಿಂದ ಮೋಕ್ಷವನ್ನು ಹೊಂದುತ್ತಾರೆ.

ಈ ಕಥೆಯ ಭರತವಾಕ್ಯ ಇದು.

ಸ್ತ್ರೀಯರು (ಅಸತಿಯರು) ನಿಸರ್ಗಚಪಲೆಯರು. ವೈರಾಗ್ಯವನ್ನು ಉಂಟುಮಾಡುವಂತಹ ಬಹುದುಶ್ಚರಿತಗಳನ್ನು ಆಚರಿಸುವವರು. ಆದರೆ ಯಾರೋ ಒಬ್ಬಳು ಪತಿವ್ರತೆ ಎಲ್ಲೋ ಇರುತ್ತಾಳೆ. ಅವಳು ಆಕಾಶವನ್ನು ಅಭಿನವವಾದ ಚಂದ್ರಲೇಖೆಯು ಅಲಂಕರಿಸುವಂತೆ ತನ್ನ ಕುಲವನ್ನು ಅಲಂಕರಿಸುತ್ತಾಳೆ.

ವಂಚಿಸುವ ಅಸತಿಯರ ಕಥೆಗಳನ್ನು ಹೇಳುವುದೇ ಗೋಮುಖನ ಉದ್ದೇಶ. ಈ ಕಥೆಗಳಲ್ಲಿ ಕೋಡುಮೂಡಿಸುವ ಯಕ್ಷಿಣಿ, ಗುಲಾಮರನ್ನು ಮಾರುವ ತಾಜಿಕರು, ತುರುಷ್ಕರು, ಮನುಷ್ಯನನ್ನು ಪ್ರಾಣಿಗಳಾಗಿಸುವ ಯೋಗಿನಿಯರು ಎಲ್ಲವೂ ಬಂದು ಕೊನೆಗೆ ವೈರಾಗ್ಯದಲ್ಲಿ ಮುಗಿಯುತ್ತದೆ. ಕಾಮದ ವಿಜೃಂಭಣೆಯನ್ನು ತೋರಿಸಿ ಅದರಿಂದ ಉಂಟಾಗುವ ವಿರಕ್ತಿಯನ್ನು ತೋರಿಸುತ್ತದೆ. ಅಬ್ಬರದಿಂದ ನಿಶ್ಶಬ್ದ, ಶಬ್ದದಿಂದ ಮೌನ, ತಮಸ್ಸಿನಿಂದ ಜ್ಯೋತಿ–ಹೀಗೆ ಈ ಕಥೆಗಳ ಆರಂಭ ಮತ್ತು ಕೊನೆ.

ಎಂದಿನಂತೆ ಹಿತಮಿತವಾದ ವರ್ಣನೆ, ಅಲ್ಲಲ್ಲಿ ಹಾರವನ್ನು ಪದಕವು ಅಲಂಕರಿಸುವಂತೆ ವರ್ಣನೆಯು ಕಥೆಗಳಿಗೆ ಕಾವ್ಯತ್ವವನ್ನು ಕೊಡುತ್ತದೆ.

ನಾಲ್ಕನೆಯ ತರಂಗದಲ್ಲಿ ಗೋಮುಖನ ಕಥೆಯನ್ನು ಕೇಳಿ ನರವಾಹನದತ್ತನು ಸಂತುಷ್ಟನಾಗಿರುವುದನ್ನು ನೋಡಿ ಮರುಭೂತಿಯು ಸ್ಪರ್ಧೆಯಿಂದಲೆಂಬಂತೆ ತಾನೂ ಒಂದು ಕಥೆಯನ್ನು ಹೇಳುತ್ತಾನೆ. ಅವನು ಸ್ತ್ರೀಯರ ಬಗೆಗೆ ಗೋಮುಖನು ಹೊಂದಿರುವ ಅಭಿಪ್ರಾಯವನ್ನು ಪೂರ್ಣವಾಗಿ ಒಪ್ಪುವುದಿಲ್ಲ. ಸ್ತ್ರೀಯರೆಲ್ಲ ಚಪಲೆಯರೆಂದು ಸಾಧಾರಣೀಕರಣ ಮಾಡುವುದು ಸರಿಯಲ್ಲ. ವೇಶ್ಯೆಯರೂ ಸತ್ವಶಾಲಿಗಳಾಗಿರುವುದು ಕಂಡುಬರುವಾಗ ಉಳಿದವರ ಮಾತೇನು ಎಂದು ಹೇಳಿ ಮರುಭೂತಿಯು ಮದನಮಾಲಾ ಎಂಬ ವೇಶ್ಯೆಯ ಕಥೆಯನ್ನು ಹೇಳುತ್ತಾನೆ.

ವಿಕ್ರಮಾದಿತ್ಯನೆಂಬ ರಾಜನು ನರಸಿಂಹನೆಂಬ ರಾಜನ ಮೇಲೆ ವಿವೇಕವಿಲ್ಲದೆ ಯುದ್ಧಕ್ಕೆ ಹೋಗಿ ಸೋತು ಅವನನ್ನು ಉಪಾಯದಿಂದ ಗೆಲ್ಲಬೇಕೆಂದು ನರಸಿಂಹನ ಪ್ರತಿಷ್ಠಾನಪುರಕ್ಕೆ ವೇಷಾಂತರದಿಂದ ಹೋಗಿ ಗಣಿಕೆ ಮದನಮಾಲೆಯ ಭವನಕ್ಕೆ ಹೋಗಿ ತಂಗುತ್ತಾನೆ. ಅವಳು ಇವನ ಗಂಭೀರವಾದ ನಡವಳಿಕೆಯನ್ನು ನೋಡಿ ಅನುರಾಗಪರಳಾಗುತ್ತಾಳೆ. ಅವನಿಗಾಗಿ ತನ್ನ ಸರ್ವಸ್ವವನ್ನೂ ಅರ್ಪಿಸುತ್ತಾಳೆ. ಅವನನ್ನು ಆರಾಧಿಸುತ್ತಾಳೆ. ಇದನ್ನು ನೋಡಿ ಅವಳಿಗೇನು ಪ್ರತ್ಯುಪಕಾರ ಮಾಡುವುದೆಂದು ಅವನು ತನ್ನ ಸಹಚರ ಬುದ್ಧಿವರನನ್ನು ಕೇಳಿದಾಗ ಪ್ರಪಂಚಬುದ್ಧಿಯೆಂಬ ಭಿಕ್ಷು ತಂದುಕೊಟ್ಟ ಮಹಾರತ್ನಗಳಲ್ಲಿ ಕೆಲವನ್ನು ಕೊಡು ಎಂದು ಹೇಳುತ್ತಾನೆ. ಅವೇನೂ ಸಾಲದು ಎಂದು ಆ ಭಿಕ್ಷುವಿನ ವೃತ್ತಾಂತವನ್ನು ಹೇಳುತ್ತಾನೆ.

ಭಿಕ್ಷು ಪ್ರಪಂಚಬುದ್ಧಿಯು ಪ್ರತಿದಿನವೂ ಒಂದೊಂದು ಸಂಪುಟವನ್ನು ತಂದು ರಾಜನಿಗೆ ಕೊಡುತ್ತಿದ್ದು ರಾಜನು ಅದನ್ನು ಹಾಗೆಯೇ ಇಡುತ್ತಿದ್ದನು. ಒಮ್ಮೆ ಅದು ಕೈಜಾರಿ ಕೆಳಗೆ ಬಿದ್ದು ಒಡೆದು

ಅದರೊಳಗಿನಿಂದ ಒಂದು ಮಹಾರತ್ನವು ಹೊರಬೀಳುತ್ತದೆ. ಅದನ್ನು ನೋಡಿ, ಹಾಗೆ ತರುವುದರ ಉದ್ದೇಶವೇನೆಂದು ಕೇಳಿದಾಗ ಆ ಭಿಕ್ಷುವು ತಾನೊಂದು ಸಿದ್ಧಿಗಾಗಿ ಪ್ರಯತ್ನಪಡುತ್ತಿರುವುದಾಗಿಯೂ, ಅದಕ್ಕಾಗಿ ಕೃಷ್ಣಚತುರ್ದಶಿಯಂದು ರಾಜನು ಸ್ಮಶಾನಕ್ಕೆ ತನಗೆ ಸಹಾಯಕನಾಗಿ ಬರಬೇಕೆಂದೂ ಕೇಳುತ್ತಾನೆ. ರಾಜನು ಒಪ್ಪುತ್ತಾನೆ.

ಚತುರ್ದಶಿಯಂದು ಆಹ್ನಿಕಾದಿಗಳನ್ನು ಮಾಡಿ ಪ್ರದೋಷಕ್ಕಾಗಿ ರಾಜನು ಕಾಯುತ್ತಿದ್ದಾಗ ಸ್ವಲ್ಪ ನಿದ್ರೆ ಬರುತ್ತದೆ. ಆಗ ಸ್ವಪ್ನದಲ್ಲಿ ಗರುಡಾರೂಢನಾದ ವಿಷ್ಣುವು ಪ್ರತ್ಯಕ್ಷನಾಗಿ 'ಅವನು ನಿನ್ನನ್ನು ಬಲಿ ಕೊಡಲು ನಿರ್ಧರಿಸಿದ್ದಾನೆ. ಅವನು ಮಾಡು ಎಂದುದನ್ನು ನೀನು ಮಾಡಬೇಡ. ಮೊದಲು ನೀನೇ ತೋರಿಸಿಕೊಡು. ನಂತರ ಹಾಗೆಯೇ ಮಾಡುತ್ತೇನೆ ಎನ್ನು. ಅವನು ಮಾಡಿ ತೋರಿಸಿದಾಗ, ಸಮಯ ಸಾಧಿಸಿ ಅವನನ್ನು ಕೊಲ್ಲು. ಆಗ ಅವನ ಸಿದ್ಧಿ ನಿನಗೆ ಬರುತ್ತದೆ' ಎನ್ನುತ್ತಾನೆ. ನಂತರ ಹಾಗೆಯೇ ಮಾಡಿ ಭಿಕ್ಷುವನ್ನು ರಾಜನು ಕೊಂದು ಹಾಕುತ್ತಾನೆ. ಆಗ ಆಕಾಶಗಮನ ಸಿದ್ಧಿಯು ರಾಜನಿಗೆ ಬರುತ್ತದೆ. ಕುಬೇರನು ಪ್ರತ್ಯಕ್ಷನಾಗಿ ಮತ್ತೊಂದು ವರ ಕೇಳಿಕೋ ಎಂದಾಗ ಸಮಯ ಬಂದಾಗ ಕೇಳುತ್ತೇನೆ'ಎಂದು ಬಿಡುತ್ತಾನೆ.

'ಈಗ ಸಮಯ ಬಂದಿದೆ' ಎನ್ನುತ್ತಾ ಆ ರಾತ್ರಿ ಕಳೆದು ಬೆಳಿಗ್ಗೆ ಕುಬೇರನನ್ನು ಸ್ಮರಿಸಿ ಅವನು ಪ್ರತ್ಯಕ್ಷನಾದಾಗ ಐದು ಚಿನ್ನದ ಪುರುಷವಿಗ್ರಹಗಳನ್ನು ಮದನಮಾಲೆಯ ಮನೆಯಲ್ಲಿರಿಸು. ಅವುಗಳನ್ನು ಕತ್ತರಿಸಿದಷ್ಟೂ ಅವು ಬೆಳೆಯುತ್ತಿರಬೇಕು' ಎಂಬ ವರ ಕೇಳುತ್ತಾನೆ. ಆ ವರವನ್ನು ಕೊಟ್ಟಮೇಲೆ ರಾಜನು ಆ ಊರು ಬಿಟ್ಟು ತನ್ನ ರಾಜ್ಯಕ್ಕೆ ಹಿಂದಿರುಗುತ್ತಾನೆ. ಅತ್ತ ಮದನಮಾಲೆಯು ರಾಜನನ್ನೇ ಮನಸ್ಸಿನಲ್ಲಿಟ್ಟು ಚಿನ್ನದ ವಿಗ್ರಹಗಳಿಂದ ಭಾಗಗಳನ್ನು ಕತ್ತರಿಸಿ ಉದಾರವಾಗಿ ದಾನ ಮಾಡುತ್ತಾ ಕೀರ್ತಿಶಾಲಿನಿಯಾಗುತ್ತಾಳೆ. ಅದನ್ನು ತಿಳಿದ ವಿಕ್ರಮಾದಿತ್ಯನು ಮತ್ತೆ ಅವಳಲ್ಲಿಗೆ ಬಂದು ಅವಳ ಸಹಾಯದಿಂದ, ತಂತ್ರವನ್ನು ಹೂಡಿ ರಾಜ ನರಸಿಂಹನು ಬಾಗಿಲಲ್ಲಿ ಕಾಯುವಂತೆ ಮಾಡಿ 'ನರಸಿಂಹ ರಾಜನು ವಿಕ್ರಮಾದಿತ್ಯನ ಭಕ್ತ ನಿನ್ನಲ್ಲಿ ಅನುರಾಗವುಳ್ಳವನು' ಎಂದು ವಂದಿಗಳು ಮತ್ತೆ ಮತ್ತೆ ಹೇಳುವಂತೆ ಮಾಡುತ್ತಾನೆ. ಆಗ ನರಸಿಂಹನು ತನ್ನನ್ನು ಉಪಾಯದಿಂದ ಸೋಲಿಸಿರುವುದನ್ನು ಅರಿಯುತ್ತಾನೆ. ಇಬ್ಬರೂ ಸ್ನೇಹಿತರಾಗುತ್ತಾರೆ.

ಇದರ ಭರತವಾಕ್ಯ ಇದು. ವಿಲಾಸಿನಿಯರು ಕೂಡ ಕೆಲವರು ಹೀಗೆ ಉದಾರಸತ್ವವುಳ್ಳವರಾಗಿ ಸ್ವಸ್ತ್ರೀಯರಂತೆ ಗಾಢಾನುರಾಗವುಳ್ಳವರಾಗಿ ನಿಷ್ಠೆಯಿಂದ ಇರುತ್ತಾರೆ. ಇನ್ನು ಪತಿವ್ರತೆಯರ ಬಗ್ಗೆ ಹೇಳುವುದೇನಿದೆ ?

ಇದು ವಾಸ್ತವವಾಗಿ ಮದನಮಾಲೆಯ ತರಂಗ. ಚಂಚಲಸ್ತ್ರೀಯರ ಮನಸ್ಸನ್ನು ವಿಶ್ಲೇಷಿಸುತ್ತಾ ಅವರ ಸಾತ್ವಿಕ ಮುಖವನ್ನು ತೋರಿಸುವ ಕಥೆ ಇದರದ್ದು. ಯಾವುದೋ ಒಂದೆರಡು ಅನುಭವಗಳ ಸಾಧಾರಣೀಕರಣ ತಪ್ಪು, ಅತಾರ್ಕಿಕ ಎಂಬುದನ್ನು ಇದು ತೋರಿಸುತ್ತದೆ.

ಎಂದಿನಂತೆ ಕಥೆಯ ನಡುವೆ ಸುಂದರವಾದ ವರ್ಣನೆಗಳು ಬರುತ್ತವೆ. ಮದನಮಾಲೆಯ ಭವನದ ವೈಭವದ ವರ್ಣನೆ ಇವುಗಳಲ್ಲೊಂದು. ಅದು ಒಂದೆಡೆ 'ಪ್ರವಿತತಾನೇಕವರಾಶ್ವಶ್ರೇಣಿಶೋಭಿತ'. ಒಂದೆಡೆ 'ಆಬದ್ಧಮಾತಂಗ,' ಘಟಾಸಂಘಟ್ಟಸಂಚರ: ಒಂದೆಡೆ

'ಆಯುಧಸಂದರ್ಭಗಂಭೀರಾಕಾರಗುಂಫಿತ'. ಒಂದೆಡೆ 'ಪತದ್ವಂದಿವೃಂದಕೋಲಾಹಲಾಕುಲ', ಮತ್ತೊಂದೆಡೆ 'ನಿಬದ್ಧಸಂಗೀತ ಮೃದಂಗಧ್ವನಿನಾದಿತ'– ಹೀಗೆ ಪ್ರವಾಹದಂತೆ ವರ್ಣನೆ ಸಾಗುತ್ತದೆ.

ವಿರಹದಿಂದ ಕೃಶಳಾದ ಮದನಮಾಲೆಯನ್ನು ಕವಿ ವರ್ಣಿಸುವುದು ಹೀಗೆ. ಅವಳು 'ದಾನತೋಯಾರ್ದ್ರಿತಕರೆ, ಅನಾಹಾರ ಕೃಶೆ, ಮಿಲಿತಾಲಿಕುಲಾಕುಲೆ,' ಮುಂತಾಗಿ ಅವಳ ವಿಪ್ರಲಂಭದ ಸ್ಥಿತಿ ವರ್ಣಿತವಾಗುತ್ತದೆ.

ಗೋಮುಖ ಮರುಭೂತಿಯರು ಕಥೆಗಳನ್ನು ಹೇಳಿ ಮುಗಿಸಿದ ಮೇಲೆ ಐದನೆಯ ತರಂಗದಲ್ಲಿ ಸೇನಾಪತಿಯಾದ ಹರಿಶಿಖನು ಕಥೆ ಹೇಳಲು ಪ್ರಾರಂಭಿಸುತ್ತಾನೆ. ಇವನು ಹೇಳುವುದು ಪತಿಪರಾಯಣೆಯರಾದ ಸತಿಯರ ಬಗ್ಗೆ. ಒಳ್ಳೆಯ ಸ್ತ್ರೀಯರಿಗೆ ಪತಿಯನ್ನು ಬಿಟ್ಟು ಬೇರೆ ಯಾರೂ ಇರುವುದಿಲ್ಲ ಎನ್ನುತ್ತಾ ವೀರಭುಜನೆಂಬ ರಾಜನ ಹಾಗೂ ಅವನಿಗೆ ಅತ್ಯಂತ ಪ್ರೀತಿ ಪಾತ್ರೆಯಾದ ಗುಣವರೆ ಎಂಬ ರಾಣಿಯ ಬಗ್ಗೆಯೂ ಹೇಳಲು ಪ್ರಾರಂಭಿಸುತ್ತಾನೆ. ಗುಣವರೆಯು ಮಹಾಪತಿವ್ರತೆ. ರಾಜನಿಗೆ ಒಟ್ಟು ನೂರು ರಾಣಿಯರಿದ್ದರೂ ಇವಳೇ ಅವನಿಗೆ ಅತ್ಯಂತ ಪ್ರೀತಿಪಾತ್ರೆ. ಇವರಲ್ಲಿ ಯಾರಿಗೂ ಮಕ್ಕಳಾಗದಿದ್ದಾಗ ವೈದ್ಯನೊಬ್ಬನು ಮಾಡಿಕೊಟ್ಟ ವಿಶೇಷವಾದ ಔಷಧವನ್ನು ಗುಣವರೆಗೆ ಕೊಡದೆ ಉಳಿದವರೇ ಕುಡಿದುಬಿಡುತ್ತಾರೆ. ಆದರೂ ಅದಕ್ಕೊಂದು ಪರಿಹಾರ ಕಂಡುಹಿಡಿದು ವೈದ್ಯನು ಮತ್ತೊಮ್ಮೆ ಔಷಧ ಮಾಡಿಕೊಡುತ್ತಾನೆ. ಅದನ್ನು ಗುಣವರೆ ಸೇವಿಸುತ್ತಾಳೆ. ಎಲ್ಲರಿಗೂ ಒಂದೊಂದು ಮಗುವಾಗುತ್ತದೆ. ಇತರ ರಾಣಿಯರಿಗೋ ಇವಳ ಮೇಲೆ ಮಾತ್ಸರ್ಯ. ಅವಳ ಮೇಲೆ ಚಾಡಿ ಹೇಳಿ ಗುಣವರೆಯನ್ನು ಭೂಗೃಹದಲ್ಲಿ ಇರಿಸಿಬಿಡುತ್ತಾರೆ. ರಾಜನ ಒಳ್ಳೆಯದಕ್ಕೆಂದು ನಂಬಿ ಅವಳು ಸಂತೋಷದಿಂದ ಅಲ್ಲಿರುತ್ತಾಳೆ. 'ಸ್ವಸುಖಂ ನಾಸ್ತಿ ಸಾಧ್ವೀನಾಂ ತಾಸಾಂ ಭರ್ತೃಸುಖಂ ಸುಖಂ'. ಸಾಧ್ವಿಯರಿಗೆ ಸ್ವಸುಖವೆಂಬುದೇ ಇಲ್ಲ. ಪತಿಯ ಸುಖವೇ ಅವರ ಸುಖ.

ಗುಣವತಿಯ ಮಗ ಶೃಂಗಭುಜ ಮಹಾಪರಾಕ್ರಮಿ, ರೂಪವಂತ ಹಾಗೂ ಗುಣವಂತ. ಅವನನ್ನು ದೂರಮಾಡಲು ಇತರ ರಾಣಿಯರು ಉಪಾಯ ಹೂಡುತ್ತಾರೆ. ಅಗ್ನಿಶಿಖನೆಂಬ ರಾಕ್ಷಸನಿಗೆ ಹೊಡೆದ ಬಾಣವನ್ನು ತರಲು ಶೃಂಗಭುಜ ಹೊರಟು ಧೂಮಪುರದಲ್ಲಿ ಅಗ್ನಿಶಿಖೆಯ ಮಗಳು ರೂಪಶಿಖೆಯನ್ನು ಸಂಧಿಸುತ್ತಾನೆ. ಅವಳು ವಿರಹದಲ್ಲಿ ಜೀವಿತಹರೆ, ಸಂಗಮದಲ್ಲಿ ಪ್ರಾಣದಾಯಿನೀ. ಆದ್ದರಿಂದ ಅವಳು ವಿಷ ಹಾಗೂ ಅಮೃತಮಯಳಾದ ಬ್ರಹ್ಮನ ವಿಚಿತ್ರ ಸೃಷ್ಟಿ. ಇಬ್ಬರಿಗೂ ಅನುರಾಗ ಹುಟ್ಟುತ್ತದೆ. ಮುಂದೆ ನಡೆಯುವುದು ಮಾಯ, ಮಂತ್ರಗಳ ಮಹಾಭಿಯೋಗ. ಅಗ್ನಿಶಿಖನ ಹಾಗೂ ಅವನ ಸಹೋದರ ಧೂಮಶಿಖನ ಮಂತ್ರತಂತ್ರವನ್ನು ರೂಪಶಿಖೆಯ ಸಹಾಯದಿಂದ ಜಯಿಸಿ ಅವಳನ್ನು ಕರೆತರುತ್ತಾನೆ. ಈ ಘಟನೆಗಳಲ್ಲಿ ಅಗ್ನಿಶಿಖನ ಪೆದ್ದುತನಗಳು ವಿನೋದವನ್ನುಂಟುಮಾಡುತ್ತವೆ. ಅವನು ಇವರಿಬ್ಬರನ್ನು ಅಟ್ಟಿಸಿಕೊಂಡು ಬಂದಾಗ ರೂಪಶಿಖೆಯು ಕಟ್ಟಿಗೆ ಒಡೆಯುವವವ ರೂಪ ಧರಿಸುತ್ತಾಳೆ. ಅಗ್ನಿಶಿಖನು ಇಲ್ಲಿ ಸ್ತ್ರೀಪುರುಷರಿಬ್ಬರು ಹೋದರೆ, ಎಂದು ಕೇಳಿದಾಗ 'ಇಲ್ಲ, ಅಗ್ನಿಶಿಖನು ಸತ್ತಿದ್ದಾನೆ. ಅದಕ್ಕಾಗಿ ಕಟ್ಟಿಗೆ ಕಡಿಯುತ್ತಿದ್ದೇವೆ' ಎನ್ನುತ್ತಾಳೆ. 'ನಾನು ಸತ್ತಿದ್ದೇನೆಯೇ? ಹಿಂದಿರುಗಿ ಕೇಳಿಕೊಂಡು ಬರುತ್ತೇನೆ' ಎಂದು ಅರಮನೆಗೆ ಹೋಗಿ ಕೇಳುತ್ತಾನೆ. ನೀನು ಬದುಕಿದ್ದೀಯೆ ಎಂದು ಅವರು ಹೇಳಿದಾಗ ಸಂತೋಷದಿಂದ ಹಿಂದಿರುಗಿ ಪುನಃ ಅವಳನ್ನು ಅಟ್ಟಿಸಿಕೊಂಡು

ಹೋಗುತ್ತಾನೆ. ಪೆದ್ದು ರಾಕ್ಷಸನ ಈ ಹಾಸ್ಯಾಸ್ಪದ ನಡವಳಿಕೆ ಕಥೆಗೆ ಒಂದು ಹಾಸ್ಯರಸದ ಲೇಪನವನ್ನು ಕೊಡುತ್ತದೆ.

ಈ ಕಥೆಯಲ್ಲಿ ಗುಣವರೆ ಹಾಗೂ ರೂಪಶಿಖೆ, ಅಂದರೆ ಅತ್ತೆಸೊಸೆಯಂದಿರಿಬ್ಬರೂ ಪತಿವ್ರತೆಯರು. ಅನನ್ಯಾಃ ಪತಿಂ ಸಾಧ್ವ್ಯಃ ಸರ್ವಾಕಾರಮುಪಾಸತೇ ಎಂಬುದೇ ಇದರ ಪ್ರತಿಪಾದನೆ.

ಈ ತರಂಗದಲ್ಲಿ ಮಾನವದಾನವವೈವಾಹಿಕ ಸಂಬಂಧ, ಮಂತ್ರತಂತ್ರಗಳ ಸೆಣಸಾಟ, ವಿನೋದ, ಸವತಿಯರ ಮಾತ್ಸರ್ಯದ ದುಷ್ಪರಿಣಾಮಗಳು, ಸತಿಯರ ಪಾತಿವ್ರತ್ಯ, ತ್ಯಾಗ, ಮುಂತಾದ ಎಲ್ಲ ವಿಷಯಗಳೂ ಅಂತರ್ಗತವಾಗಿವೆ.

ಆರನೆಯ ತರಂಗವು ಒಂದು ವಿನೋದಕರ ಸನ್ನಿವೇಶದಿಂದ ಆರಂಭವಾಗುತ್ತದೆ. ಕುಡಿದು ಬಂದ ಮರುಭೂತಿಯನ್ನು ನೋಡಿ ಗೋಮುಖನು ಕುಡಿದೇ ಒಡೆಯನ ಬಳಿಗೆ ಬರುವ ಧೈರ್ಯ ಮಾಡಿದನಲ್ಲ ಎಂದು ಆಕ್ಷೇಪಿಸಲು, ಒಬ್ಬರಿಗೊಬ್ಬರು ಏಟಿಗೆ ಎದಿರೇಟು ಕೊಡುತ್ತಾ ಹಾಸ್ಯ ಮಾಡಿಕೊಳ್ಳುತ್ತಾರೆ. ನೀನು ಕೊಂಬಿಲ್ಲದ ಗೂಳಿ ಎಂದು ಗೋಮುಖನೆಂದರೆ ನೀನೇ ಗೂಳಿ, ನಿನ್ನ ಹೆಸರಿಗೆ ಸರಿಯಾಗಿದ್ದೀಯೆ ಎಂದು ಮರುಭೂತಿ ಉತ್ತರಿಸುತ್ತಾನೆ. ಹೀಗೆ ಸಂವಾದ ಸಾಗುತ್ತದೆ.

ಗೋಮುಖನು 'ಈ ಮರುಭೂತಿಯು ಒಂದು ವಜ್ರ. ನೂರಾರು ಸಲ ಪ್ರಯತ್ನಗಳನ್ನು ಮಾಡಿದರೂ ಅದನ್ನು ಭೇದಿಸಿ ಗುಣವನ್ನು (ದಾರವನ್ನು) ತುಂಬಲು ಸಾಧ್ಯವೇ ಇಲ್ಲ ಎನ್ನುತ್ತಾ ಸುಲಭಸಾಧ್ಯನಾದ ತಪೋಧನನ ವೃತ್ತಾಂತವನ್ನು ಹೇಳುತ್ತಾನೆ. ವಿದ್ಯಾವಂತನಾಗಬೇಕೆಂದು ತಪಸ್ಸು ಮಾಡುತ್ತಿದ್ದ ಅವನಿಗೆ ಇಂದ್ರ ಬುದ್ಧಿ ಕಲಿಸುತ್ತಾನೆ. ಅಧ್ಯಯನವಿಲ್ಲದೆ ವಿದ್ಯೆ ಬರುವುದಿಲ್ಲ ಎಂದು ಮನದಟ್ಟು ಮಾಡುತ್ತಾನೆ. ಮರಳನ್ನು ತೆಗೆದು ತೆಗೆದು ಗಂಗೆಗೆ ಹಾಕುತ್ತಿದ್ದ ವಿಪ್ರವೇಷದ ಇಂದ್ರನನ್ನು ನೋಡಿ ಇದೇನು ಮಾಡುತ್ತಿದ್ದೀಯೆ ಎಂದಾಗ ಗಂಗೆಯನ್ನು ದಾಟಲು ಸೇತುವೆ ಕಟ್ಟುತ್ತಿದ್ದೇನೆ ಎನ್ನುತ್ತಾನೆ. ಇದು ಹೇಗೆ ಸಾಧ್ಯ ಎಂದಾಗ 'ಅಧ್ಯಯನವಿಲ್ಲದ ವ್ರತೋಪವಾಸಾದಿಗಳಿಂದ ವಿದ್ಯೆಯನ್ನು ಸಾಧಿಸಲು ಹೊರಟಿದ್ದೀಯಲ್ಲವೇ? ಹಾಗೆಯೇ ಇದೂ. ಇದು ಮೊಲದಕೊಂಬಿನ ಆಸೆ, ಆಕಾಶದಲ್ಲಿ ಬರೆದ ಚಿತ್ರಕಲ್ಪನೆ, ಅಕ್ಷರವಿಲ್ಲದ ಲಿಪಿನ್ಯಾಸ. ಅಧ್ಯಯನವಿಲ್ಲದೆ ವಿದ್ಯೆ ಕಲಿಯುವುದೂ ಹಾಗೆಯೇ.' ತಪೋಧನನು ಬುದ್ಧಿ ಕಲಿಯುತ್ತಾನೆ. ತಪಸ್ಸನ್ನು ಬಿಟ್ಟು ಅಧ್ಯಯನ ಮಾಡಲು ಹೊರಡುತ್ತಾನೆ. ಬುದ್ಧಿಯುಳ್ಳವನಿಗೆ ಹೇಳುವುದು ಸುಲಭ. ಮರುಭೂತಿಯು ದುರ್ಮತಿ. ಅವನಿಗೆ ಹೇಳಿದರೆ ಕೋಪಿಸಿಕೊಳ್ಳುತ್ತಾನೆ ಎಂದು ಗೋಮುಖ ಮುಗಿಸುತ್ತಾನೆ.

ಆಗ ಇದನ್ನು ಅನುಮೋದಿಸುತ್ತಾ ಹರಿಶಿಖನೆಂಬುವನು ಒಂದು ಕಥೆ ಹೇಳುತ್ತಾನೆ. ವಿರೂಪಶರ್ಮನೆಂಬ ಕುರೂಪಿ, ನಿರ್ಧನನು. ರೂಪವನ್ನೂ, ಧನವನ್ನೂ ಸಂಪಾದಿಸಲು ತಪಸ್ಸು ಮಾಡುತ್ತಾನೆ. ಆಗ ಇಂದ್ರನು ಪರಮ ವಿಕಾರರೂಪದ ಹಾಗೂ ವ್ಯಾಧಿಗ್ರಸ್ತವಾದ ಹುಳುಗಳಿಂದ ತುಂಬಿದ ವ್ರಣಗಳುಳ್ಳ ನರಿಯ ರೂಪದಲ್ಲಿ ಬರುತ್ತಾನೆ. ಅದನ್ನು ನೋಡಿ ಅದಕ್ಕಿಂತ ನನ್ನ ಸ್ಥಿತಿಯೇ ವಾಸಿ ಎಂದುಕೊಂಡು ಮನೆಗೆ ತೆರಳುತ್ತಾನೆ.

ಹೀಗೆ ವಿವೇಕಿಗಳು ಸ್ವಲ್ಪವಾದ ಯತ್ನದಿಂದಲೇ ತಿಳಿದುಕೊಂಡುಬಿಡುತ್ತಾರೆ. ಇದನ್ನು ಕೇಳಿ ಮರುಭೂತಿಯು ಗೋಮುಖನಿಗೆ ನಿಮ್ಮಂತಹವರಿಗೆ ಬಲ ಇರುವುದು ಬರಿಯ ಮಾತಿನಲ್ಲಿ,

ಬಾಹುಗಳಲ್ಲಿಲ್ಲ. ನಿಮ್ಮಂತಹ ವಾಚಾಳಿಸಂಗದ ಹಾಗೂ ನಪುಂಸಕರ ಸಂಗಡ ಹೋರಾಡುವುದು ಬಾಹುಶಾಲಿಗಳಿಗೆ ಅಪಮಾನಕರ ಎನ್ನುತ್ತಾನೆ. ಆಗ ನರವಾಹನದತ್ತನು ಎಲ್ಲರನ್ನೂ ಸಮಾಧಾನಪಡಿಸುತ್ತಾನೆ.

ಮರುದಿನ ರತ್ನಪ್ರಭೆಯು ನೀವೆಲ್ಲರೂ ಸ್ನೇಹಿತರಾಗಿರುವುದು ನಿಮ್ಮ ಒಳ್ಳೆಯ ಪೂರ್ವಕರ್ಮದಿಂದ, ನಿಮ್ಮ ಅದೃಷ್ಟದಿಂದ ಎನ್ನುತ್ತಾಳೆ. ಅದನ್ನು ಅನುಮೋದಿಸುತ್ತಾ ಪೂರ್ವಕರ್ಮವಶದಿಂದಲೇ ಎಲ್ಲವೂ ಆಗುವುದು ಎನ್ನುತ್ತಾ ನರ್ಮಸಚಿವನಾದ ತಪಂತಕನು ಅದಕ್ಕೊಂದು ಕಥೆ ಹೇಳುತ್ತಾನೆ. ವಿನಯಶೀಲನೆಂಬ ರಾಜನು ಸರ್ವಸುಖಭೋಗಗಳನ್ನು ಅನುಭವಿಸಿ ಕೊನೆಗೆ ಮುಪ್ಪು ಬಂದಾಗ ತನ್ನನ್ನು ತರುಣನನ್ನಾಗಿಸಲು ತರುಣಚಂದ್ರನೆಂಬ ವೈದ್ಯನನ್ನು ಕರೆಸುತ್ತಾನೆ. ಅವನು ರಾಜನನ್ನು ಭೂಗೃಹದಲ್ಲಿರಿಸಿ ಚಿಕಿತ್ಸೆ ಮಾಡಿದಂತೆ ಮಾಡಿ ಕೊನೆಗೆ ಅವನನ್ನು ಕೊಂದು ಅವನಂತೆಯೇ ಇರುವ ತರುಣನೊಬ್ಬನನ್ನು ಅದೇ ರಾಜನು ತನ್ನ ಚಿಕಿತ್ಸೆಯಿಂದ ಯುವಕನಾಗಿದ್ದಾನೆಂದು ತೋರಿಸಿ ಅವನನ್ನು ರಾಜನನ್ನಾಗಿ ಮಾಡುತ್ತಾನೆ. ತಾನೇ ಅವನನ್ನು ರಾಜನನ್ನಾಗಿ ಮಾಡಿದುದು ಎಂದು ಗರ್ವ ತೋರಿಸಿದ ವೈದ್ಯನಿಗೆ ರಾಜನು ಎಲ್ಲವೂ ತನ್ನ ಪೂರ್ವಕರ್ಮದ ಪರಿಣಾಮ ಎಂಬುದನ್ನು ನಿದರ್ಶನಪೂರ್ವಕ ತೋರಿಸುತ್ತಾನೆ. ಇದರಲ್ಲಿ ಅಸ್ಥಿಪಂಜರದಿಂದ ಬೀಳುವ ಮಳೆನೀರಿನ ಹನಿಗಳು ನದಿಯಲ್ಲಿ ಚಿನ್ನದ ಕಮಲಗಳಾಗುವುದು ಮುಂತಾದ ಆಶ್ಚರ್ಯಕರ ಘಟನಾವಳಿಗಳು ಬಂದು ಕಥೆಯನ್ನು ರೋಚಕವಾಗಿಸುತ್ತವೆ. ಒಟ್ಟಿನಲ್ಲಿ ಪೂರ್ವಜನ್ಮದ ಕರ್ಮವೇ ಎಲ್ಲಕ್ಕೂ ಕಾರಣ ಪ್ರಾಕ್ಕರ್ಮೋಪಾರ್ಜಿತಂ ಜಂತೋಃ ಸರ್ವಮೇವ ಶುಭಾಶುಭಂ ಎಂಬುದನ್ನು ಈ ಕಥೆ ಪ್ರತಿಪಾದಿಸುತ್ತದೆ.

ಏಳನೆಯ ತರಂಗ ಪ್ರಾರಂಭವಾಗುವುದು ಜನರನ್ನು ಮುಪ್ಪು ಸಾವಿಲ್ಲದವರನ್ನಾಗಿ ಏಕೆ ಮಾಡಲಿಲ್ಲವೋ ಎಂದು ರತ್ನಪ್ರಭೆಯು ಕೇಳುವ ಸಂದರ್ಭದಿಂದ. ನರವಾಹನದತ್ತ, ರತ್ನಪ್ರಭೆಯರು ಸಚಿವರೊಡನೆ ಕುಳಿತಿದ್ದಾಗ ಹೊರಗೆ ಯಾರೋ ಆಕ್ರಂದನ ಮಾಡುವುದು ಕೇಳಿಸುತ್ತದೆ. ವಿಚಾರಿಸಿದಾಗ ತೀರ್ಥಯಾತ್ರೆಗೆ ಹೋಗಿದ್ದ ಕಂಚುಕಿಯ ಸಹೋದರ ದೇಶಾಂತರದಲ್ಲಿ ಮೃತನಾದನೆಂದು ಕೇಳಿ ಕಂಚುಕಿಯು ಅಳುತ್ತಿದ್ದಾನೆಂದು ತಿಳಿಯಿತು. ಆಗ ರತ್ನಪ್ರಭೆಯು ಮುಪ್ಪುಸಾವಿಲ್ಲದಂತೆ ಮನುಷ್ಯರನ್ನು ಏಕೆ ಮಾಡಲಿಲ್ಲವೋ, ಬಂಧುವಿಯೋಗದಿಂದಾಗುವ ದುಃಖ ಬಹಳ ಕಷ್ಟಕರ ಎನ್ನುತ್ತಾಳೆ.

ಆಗ ಮರುಭೂತಿಯು ಮನುಷ್ಯರಲ್ಲಿ ಅಜರಾಮರತ್ವ ಸಾಧ್ಯವಿಲ್ಲವೆಂದು ಹೇಳಿ ಅದಕ್ಕೊಂದು ಕಥೆ ಹೇಳುತ್ತಾನೆ. ಚಿರಾಯುವೆಂಬ ನಗರದಲ್ಲಿ ಚಿರಾಯುವೆಂಬ ರಾಜನಿರುತ್ತಾನೆ. ಅವನನ್ನು ಅವನ ಮಂತ್ರಿ ನಾಗಾರ್ಜುನನೆಂಬವನು ಸರ್ವೌಷಧಿಯುಕ್ತವಾದ ಸಿದ್ಧರಸಾಯನವೊಂದನ್ನು ಮಾಡಿ ತನ್ನನ್ನೂ ರಾಜನನ್ನೂ ಚಿರಾಯುಗಳನ್ನಾಗಿ ಮಾಡುತ್ತಾನೆ. ಒಮ್ಮೆ ಮಂತ್ರಿಯ ಕಿರಿಯ ಪುತ್ರ ತೀರಿಕೊಂಡಾಗ ಮನುಷ್ಯರನ್ನೆಲ್ಲ ಮೃತ್ಯುಮುಕ್ತರನ್ನಾಗಿ ಮಾಡುತ್ತೇನೆಂದು ಅಮೃತವನ್ನು ಸಿದ್ಧಗೊಳಿಸಿ ಅದಕ್ಕೆ ಕೊನೆಯ ಔಷಧವನ್ನು ಸೇರಿಸಲು ಮುಹೂರ್ತಕ್ಕಾಗಿ ಕಾಯುತ್ತಿದ್ದಾಗ ಇಂದ್ರನು ಅಶ್ವಿನೀ ದೇವತೆಗಳನ್ನು ಕಳುಹಿಸಿ ಅವನ ಪ್ರಯತ್ನವನ್ನು ಬಿಡುವಂತೆ ಹೇಳಿಸುತ್ತಾನೆ. ದೇವಮಾನವರೆಲ್ಲ ಅಮರರಾಗಿ ಬಿಟ್ಟರೆ ಯಷ್ಟವ್ಯ ಯಾಜಕಭಾವವೇ ಇಲ್ಲದಾಗಿ ಜಗತ್ತು ಏರುಪೇರಾಗುತ್ತದೆ ಎಂದು ಹೇಳಿ ಶಾಪಭೀತಿಯನ್ನು ತೋರಿಸುತ್ತಾನೆ. ಮಂತ್ರಿಯು ತನ್ನ ಪ್ರಯತ್ನವನ್ನು ಕೈಬಿಡುತ್ತಾನೆ.

ನಂತರ ರಾಜನು ತನ್ನ ಮಗ ಜೀವಹರನನ್ನು ಯುವರಾಜನಾಗಿ ಮಾಡುತ್ತಾನೆ. ಆದರೆ ಅವನ ತಾಯಿ ದುರ್ಬೋಧನೆ ಮಾಡುತ್ತಾಳೆ. 'ನಿನ್ನ ತಂದೆ ಚಿರಾಯು. ಅವನ ಮಕ್ಕಳೆಲ್ಲ ಯುವರಾಜರಾಗಿಯೇ ಸಾಯುತ್ತಾರೆ. ಅವನು ರಾಜನಾಗಿಯೇ ಬದುಕಿರುತ್ತಾನೆ. ಆದ್ದರಿಂದ ಮಂತ್ರಿಯು ದಾನ ಮಾಡುವಾಗ ನೀನು ಅವನ ತಲೆಯನ್ನು ಕೇಳು. ಅವನು ಏನು ಕೇಳಿದರೂ ಕೊಡುತ್ತಾನೆ' ಎಂದು ಹೇಳಿಕೊಡುತ್ತಾಳೆ. ಅವನು ಹಾಗೆಯೇ ಮಾಡುತ್ತಾನೆ. ಜಾತಿಸ್ಮರನಾದ ಮಂತ್ರಿಯು ಹಿಂದಿನ ತೊಂಭತ್ತೊಂಭತ್ತು ಜನ್ಮಗಳಲ್ಲಿ ತಲೆಯನ್ನು ಅರ್ಪಿಸಿದ್ದು ಇದು ನೂರನೆಯದಾದ್ದರಿಂದ ತನ್ನ ತಲೆಯನ್ನು ಅರ್ಪಿಸುತ್ತಾನೆ. ರಾಜನು ದುಃಖದಿಂದ ಕಾಡಿಗೆ ಹೋಗಿಬಿಡುತ್ತಾನೆ. ಜೀವಹರ ರಾಜನಾಗುತ್ತಾನೆ. ಆದರೆ ಅವನ ಸೋದರರು ಜೀವಹರನೇ ಎಲ್ಲ ಅನರ್ಥಕ್ಕೂ ಕಾರಣವೆಂದು ಅವನನ್ನು ಕೊಲ್ಲುತ್ತಾರೆ. ಅವನ ತಾಯಿ ದುಃಖದಿಂದ ಸಾಯುತ್ತಾಳೆ. ಅನಾರ್ಯಜುಷ್ಟೇನ ಪಥಾ ಪ್ರವೃತ್ತಾನಾಂ ಶಿವಂ ಕುತಃ. ಅಪಾಮಾರ್ಗದಲ್ಲಿ ಹೋಗುವವರಿಗೆ ಒಳ್ಳೆಯದು ಹೇಗೆ ಆದೀತು? ಆದ್ದರಿಂದ ಈ ಲೋಕವನ್ನು ದುರ್ವಾರದುಃಖಭರಿತವಾಗಿ, ಅನಿತ್ಯವಾದದ್ದನ್ನಾಗಿ ಬ್ರಹ್ಮನು ಮಾಡಿದ್ದಾನೆ. ವಿಧಾತನಿಗೆ ಇಷ್ಟವಿಲ್ಲದ್ದನ್ನು ಯಾರೂ ಮಾಡಲು ಸಾಧ್ಯವಿಲ್ಲ ಎಂಬ ಹೇಳಿಕೆಯೊಂದಿಗೆ ಈ ತರಂಗ ಮುಗಿಯುತ್ತದೆ.

ಕರ್ಪೂರಿಕೆ ಎಂಬ ರಾಜಕನ್ಯೆಯನ್ನು ನರವಾಹನದತ್ತನು ಅರಸಿಕೊಂಡು ಹೊರಡುವ ಪ್ರಣಯ ಪ್ರಯತ್ನವೇ ಎಂಟನೆಯ ತರಂಗದ ಅಂತರಂಗ. ಕರ್ಪೂರಿಕೆಯ ಈ ಕಥೆಯು ಒಂಭತ್ತನೆಯ ತರಂಗದಲ್ಲೂ ಮುಂದುವರಿಯುತ್ತದೆ. ನರವಾಹನದತ್ತನು ಬೇಟೆಯಾಡಿ ನಂತರ ಅವನು ಆಡುತ್ತಿದ್ದ ಚೆಂಡು ತಾಪಸಿಯೊಬ್ಬಳ ಮೇಲೆ ಬಿದ್ದಾಗ ಅವಳು ನಕ್ಕು 'ಹೀಗಿರುವಾಗಲೇ ಇಷ್ಟು ಮದ ನಿನಗೆ. ಇನ್ನು ಕರ್ಪೂರಿಕೆ ಸಿಕ್ಕಿದರೆ ಇನ್ನು ಹೇಗೆ ಆಡುತ್ತೀಯೋ' ಎಂದುದನ್ನು ಕೇಳಿ ಅವಳನ್ನು ಪ್ರಾರ್ಥಿಸಿ ಕರ್ಪೂರಿಕೆಯ ಬಗ್ಗೆ ತಿಳಿದು ಅವಳನ್ನು ಅರಸಿ ಗೋಮುಖನೊಡನೆ ಹೊರಡುತ್ತಾನೆ. ರಾತ್ರಿ ಕಾಡಿನಲ್ಲಿ ಅವರ ಕುದುರೆಗಳನ್ನು ಸಿಂಹವೊಂದು ಕೊಂದು ತಿಂದುಬಿಡುತ್ತದೆ. ಮುಂದೆ ಅವರು ನಡೆದು ಹೋಗುತ್ತಿದ್ದು ಗೋಮುಖನು ಪರಿತ್ಯಾಗಸೇನನ ಕಥೆಯನ್ನು ಹೇಳುತ್ತಾನೆ. ಅದು ಅವನ ಇಬ್ಬರ ರಾಣಿಯರ ನಡುವಣ ಮಾತ್ಸರ್ಯದ ಕಥೆ.

ಮೋಸ ಹೋದ ರಾಣಿಯು ಮೋಸ ಮಾಡಿದವಳ ಮಕ್ಕಳನ್ನು ಕೊಲ್ಲಿಸುವ ಪ್ರಯತ್ನದಲ್ಲಿ ವಿಫಲಳಾದುದೇ ಈ ಕಥೆಯ ಸಾರಾಂಶ. ಮಲತಾಯಿಯ ಷಡ್ಯಂತ್ರದಿಂದ ತಪ್ಪಿಸಿಕೊಂಡು ಸೋದರರಾದ ಇಂದೀವರಸೇನ ಹಾಗೂ ಅನಿಚ್ಛಾಸೇನರು ಹೊರಟಾಗ ದೇವಿಯ ಕೃಪೆಯಿಂದ ಇಂದೀವರ ಸೇನನಿಗೆ ಖಡ್ಗವೊಂದು ಸಿಗುತ್ತದೆ. ಅದರಿಂದ ರಾಕ್ಷಸ ಯಮದಂಷ್ಟ್ರನನ್ನು ಕೊಂದು ಅವನ ತಂಗಿಯನ್ನು ಮದುವೆಯಾಗುತ್ತಾನೆ. ಮುಂದೆ ಜಾತಿಸ್ಮರನಾಗಿ ತನ್ನ ಹಿಂದಿನ ವಿದ್ಯಾಧರ ಜನ್ಮವನ್ನು ಸ್ಮರಿಸಿ ವಿದ್ಯಾಧರ ಲೋಕಕ್ಕೆ ಹೋಗುವ ಈ ಕಥೆಯಲ್ಲೂ ರಾಕ್ಷಸರು, ವಿಮಾನಯಾನ, ದೇವೀಪ್ರಸಾದ, ಜಾತಿಸ್ಮರಣೆ ಮುಂತಾದ ರೋಚಕ ವಿಷಯಗಳು ಬರುತ್ತವೆ.

ಮುಂದೆ ಕರ್ಪೂರಿಕೆಯ ಅನ್ವೇಷಣೆ ಮುಂದುವರಿಯುತ್ತದೆ. ರಾತ್ರಿಯಾದಾಗ ಅಲ್ಲಿದ್ದ ಸರಸ್ತೀರದಲ್ಲಿ ಸ್ನಾನ, ಪೂಜೆ, ಆಹಾರಗಳನ್ನು ಮಾಡಿ ಮಲಗಿ ಶ್ರಮ ಪರಿಹಾರ ಮಾಡಿಕೊಳ್ಳುತ್ತಾರೆ. ಆ ಸರಸ್ಸಿನ ವರ್ಣನೆ ಚಿತ್ತಾಕರ್ಷಕವಾಗಿದೆ. ಆ ಸರಸ್ಸಿನಲ್ಲಿ ಕಲಕೂಜಿತರಾಜಹಂಸಗಳಿವೆ.

ಸುಧಾಸರಸಶೀತಲಭೂರಿವಾರಿಯುಳ್ಳದ್ದು ಅದು. ಆಮ್ರಾವಲೀ ಪನಸದಾಡಿಮ ತರುಗಳಿಂದ ಅದರ ತೀರ ರಮ್ಯವಾಗಿದೆ. ಅದರಲ್ಲಿ ಕಮಲಗಳು ಅರಳಿದ್ದು ಚಿತ್ತಾಕರ್ಷಕವಾಗಿದೆ. ಅಲ್ಲಿ ಮೃದುಕಿಸಲಯಾಸ್ತೀರ್ಣಶಯ್ಯೆಯಲ್ಲಿ ನರವಾಹನದತ್ತನೂ ಗೋಮುಖನೂ ಮಲಗಿ ರಾತ್ರಿಯನ್ನು ಕಳೆಯುತ್ತಾರೆ.

ಒಂಭತ್ತನೆಯ ತರಂಗದಲ್ಲಿ ಕರ್ಪೂರಿಕೆಯ ಅನ್ವೇಷಣೆ ಮುಂದುವರಿಯುತ್ತದೆ. ಈ ತರಂಗವು ೨೭೫ ಶ್ಲೋಕಗಳಿರುವ ದೀರ್ಘವಾದ ತರಂಗ. ಇದರಲ್ಲಿ ಬಹಳ ಸ್ವಾರಸ್ಯಕರವಾದ ಕಥೆಗಳಿದ್ದು ವೈಜ್ಞಾನಿಕ ಆವಿಷ್ಕಾರಗಳಂತಿರುವ ಒಂದು ಕಾಲ್ಪನಿಕ ಜಗತ್ತು ಸೃಷ್ಟವಾಗಿದೆ. ರವಿ ಕಾಣದುದನ್ನು ಕವಿ ಕಂಡ ಎನ್ನುವಂತೆ ಮನುಷ್ಯನ ಜಗತ್ತು ತನ್ನದೇ ಅದ್ಭುತವಾದ ಚಮತ್ಕಾರದ ಸಾಧನೆಗಳನ್ನು ಕಲ್ಪಿಸಿಕೊಂಡು ಅದಕ್ಕೆ ಕಥಾರೂಪವನ್ನು ಕೊಡುತ್ತದೆ.

ನರವಾಹನದತ್ತನು ಕರ್ಪೂರಿಕೆಯನ್ನು ವಿವಾಹ ಮಾಡಿಕೊಳ್ಳುವ ಘಟನೆಯೇ ಈ ತರಂಗದ ಮುಖ್ಯಕಥಾಭಾಗ. ಕರ್ಪೂರಿಕೆಯನ್ನು ಹುಡುಕುತ್ತಾ ಹೊರಟ ನರವಾಹನದತ್ತನು ಯಂತ್ರನಗರಿಯೊಂದನ್ನು ಪ್ರವೇಶಿಸುತ್ತಾನೆ. ಅದರಲ್ಲಿ ರಾಜನೊಬ್ಬನೇ ಬದುಕಿರುವವನು. ಉಳಿದ ಎಲ್ಲವೂ ಯಂತ್ರಗಳೇ. ಆನೆಗಳು, ಕುದುರೆಗಳು, ಮಾನವರು ಎಲ್ಲವೂ ಯಂತ್ರಗಳೇ. ಎಲ್ಲವೂ ಎಷ್ಟು ತದ್ರೂಪವಾಗಿದ್ದುವೆಂದರೆ ಈ ಮನುಷ್ಯರು ಮಾತನಾಡದಿರುವುದನ್ನು ನೋಡಿ ಅವು ಯಂತ್ರಗಳೆಂದು ತಿಳಿಯಬೇಕಷ್ಟೇ. ಎಲ್ಲವೂ ಜೀವಂತವಾಗಿರುವಂತೆ ವರ್ತಿಸುತ್ತಿದ್ದು ಎಲ್ಲ ವ್ಯವಹಾರಗಳೂ ಮನುಷ್ಯವ್ಯವಹಾರದಂತೆಯೇ ಹಾಗೂ ಪ್ರಾಣಿಗಳದ್ದು ಪ್ರಾಣಿವ್ಯವಹಾರದಂತೆಯೇ ನಡೆಯುತ್ತಿದ್ದವು. ಆ ನಗರಿಯನ್ನು ಸೃಷ್ಟಿಸಿದವನು ಒಬ್ಬ ಯಂತ್ರ ವಿಜ್ಞಾನಿ. ಅವನು ಮಯನಿರ್ಮಿತಮಾಯಾಯಂತ್ರಶಾಸ್ತ್ರದಲ್ಲಿ ನಿಪುಣ. ಅವನ ಅಣ್ಣನೂ ಯಂತ್ರವಿಜ್ಞಾನಿಯಾಗಿದ್ದು ಅವನು ಅದರ ದುರುಪಯೋಗಮಾಡಿಕೊಂಡು ಯಂತ್ರಹಂಸಗಳ ಮೂಲಕ ರಾಜನ ಖಜಾನೆಯನ್ನು ಕೊಳ್ಳೆ ಹೊಡೆಯುತ್ತಿದ್ದ. ಆಗ ಒಮ್ಮೆ ರಕ್ಷಕರು ಅವನ ಹಂಸಗಳನ್ನು ಹಿಡಿದಾಗ ಅವನು ತಾನೇ ನಿರ್ಮಿಸಿದ್ದ ವಿಮಾನದಲ್ಲಿ ಆ ಊರನ್ನು ಬಿಡುತ್ತಾನೆ. ಅವನ ತಮ್ಮನೂ ತನ್ನ ವಿಮಾನದಲ್ಲಿ ಹೊರಟು ಆ ನಿರ್ಜನವಾದ ಆದರೆ ರಾಜಭೋಗದಿಂದ ಕೂಡಿದ್ದ ಅರಮನೆಯಿದ್ದ ಊರಿಗೆ ಬರುತ್ತಾನೆ. ಅಲ್ಲಿ ಅವನಿಗೆ ದಿವ್ಯರೂಪದ ವ್ಯಕ್ತಿಯೊಬ್ಬ ಪ್ರತ್ಯಕ್ಷನಾಗಿ ಹೇಳಿದ ಪ್ರಕಾರ ಆ ಊರಲ್ಲಿಯೇ ನೆಲೆಸುತ್ತಾನೆ. ತನ್ನ ಏಕಾಂತತನವನ್ನು ನೀಗಿಕೊಳ್ಳಲು ಯಂತ್ರನಗರಿಯನ್ನು ನಿರ್ಮಿಸುತ್ತಾನೆ. ಅಲ್ಲಿಗೆ ಅವನೇ ರಾಜ. ಆ ನಗರವೇ ಅವನ ಆಡುಂಬೊಲ.

ಮುಂದೆ ನರವಾಹನದತ್ತನಿಗೆ ಹಾಗೂ ಗೋಮುಖನಿಗೆ ಸ್ನಾನಾದಿಗಳ ವ್ಯವಸ್ಥೆ ಮಾಡಿ ದೇವದುರ್ಲಭವಾದ ಆಹಾರವನ್ನು ಒದಗಿಸಲಾಯಿತು. ರಾತ್ರಿ ಮಲಗಿದಾಗ ನರವಾಹನದತ್ತನಿಗೆ ನಿದ್ದೆ ಬಾರದಿದ್ದುದನ್ನು ನೋಡಿ ಕರ್ಪೂರಿಕೆಯ ವಿಷಯವನ್ನು ಅವನಿಂದಲೇ ತಿಳಿದಿದ್ದ ಯಂತ್ರವಿಜ್ಞಾನಿ ರಾಜ್ಯಧರನು 'ನಿನಗೆ ಅವಳು ಲಭ್ಯವಾಗುತ್ತಾಳೆ. ಉದಾರಸತ್ತ್ವವನ್ನು ಐಶ್ವರ್ಯ ವರಿಸುವಂತೆ ಅಂಗನೆಯು ತಾನೇ ವರಿಸುತ್ತಾಳೆ ಎಂದು ಹೇಳಿ ಅರ್ಥಲೋಭನೆಂಬವನ ಕಥೆಯನ್ನು ಹೇಳುತ್ತಾನೆ. ಅವನು ರಾಜ ಬಾಹುಬಲನ ಪ್ರತೀಹಾರ. ಅವನ ಹೆಂಡತಿ ಮಾನಪರೆ. ಅವನು ಧನಲೋಭದಿಂದ ಭೃತ್ಯರನ್ನು

ನಂಬದೆ ಹೆಂಡತಿಯನ್ನೇ ವ್ಯಾಪಾರದಲ್ಲಿ ನಿಯೋಜಿಸಿದ್ದನು. ಧನದಾಸೆಯಿಂದ ಅವಳನ್ನೇ ವ್ಯಾಪಾರಿಯೊಬ್ಬನಿಗೆ ಒಂದು ದಿನಕ್ಕೆ ಮಾರುತ್ತಾನೆ. ಅವಳು ಆ ವ್ಯಾಪಾರಿಯೊಡನೆಯೇ ಇರುವನೆಂದು ಹೇಳಿಬಿಡುತ್ತಾಳೆ. ಆಗ ರಾಜನ ಬಳಿ ದೂರು ಹೋದಾಗ ಅವಳು ಸತ್ಯವನ್ನು ಹೇಳುತ್ತಾಳೆ. ಕೊನೆಗೆ ಅರ್ಥಲೋಭನು ಮಹಾಶೂರನಾದ ಆ ವ್ಯಾಪಾರಿಯ ಬಳಿ ದ್ವಂದ್ವ ಯುದ್ಧ ಮಾಡಿ ಕುದುರೆಯಿಂದ ಬಿದ್ದು ನಿಶ್ಚೇಷ್ಟನಾಗುತ್ತಾನೆ. ಹಾಗೆ ಉದಾರಸತ್ವವನ್ನು ಲಕ್ಷ್ಮಿಯು ಆಶ್ರಯಿಸುವಂತೆ ಸುಂದರಿಯು ತಾನೇ ನಿನ್ನನ್ನು ವರಿಸುತ್ತಾಳೆ. ಕರ್ಪೂರಿಕೆ ನಿನಗೆ ಸಿಗುತ್ತಾಳೆ ಎಂದು ಸಾಂತ್ವನಗೊಳಿಸುತ್ತಾನೆ.

ಮುಂದೆ ನರವಾಹನದತ್ತನು, ಕರ್ಪೂರಸಂಭವನಗರಕ್ಕೆ ಹೋಗಿ ಒಂದು ಅಜ್ಜಿಯ ಮುಖಾಂತರ ಪುರುಷದ್ವೇಷಿಣಿಯಾದ ಕರ್ಪೂರಿಕೆಯ ಪೂರ್ವಜನ್ಮರಹಸ್ಯವನ್ನು ತಿಳಿಯುತ್ತಾನೆ. ಜಾತಿಸ್ಮರೆಯಾದ ಕರ್ಪೂರಿಕೆಯು ಹಿಂದಿನ ಜನ್ಮದಲ್ಲಿ ಒಂದು ಹಂಸಿಯಾಗಿದ್ದು ಸಮುದ್ರತೀರದಲ್ಲಿ ಹಂಸದೊಡನೆ ವಾಸವಿರುತ್ತಾಳೆ. ಅದು ಹಾಕಿದ ಮೊಟ್ಟೆಗಳನ್ನು ಸಮುದ್ರ ನುಂಗಿಬಿಡುತ್ತದೆ. ಹಂಸವು, ಹೋದರೆ ಹೋಯಿತು, ಮತ್ತೆ ಮೊಟ್ಟೆಗಳನ್ನು ಹಾಕಬಹುದು ಎಂದಾಗ ಈ ಗಂಡಸರೇ ಕ್ರೂರರು, ಪಾಪಿಗಳು ಎಂದು ವೈರಾಗ್ಯವಾಗಿ ಸಮುದ್ರಕ್ಕೆ ಬಿದ್ದು ಪ್ರಾಣ ಕಳೆದುಕೊಳ್ಳುತ್ತದೆ. ಈ ಜನ್ಮದಲ್ಲಿ ಪುರುಷದ್ವೇಷದಿಂದ ಕರ್ಪೂರಿಕೆಯಾಗಿ ಹುಟ್ಟುತ್ತಾಳೆ.

ಈ ರಹಸ್ಯ ತಿಳಿದ ನರವಾಹನದತ್ತನು ಹಂಸೀ ಹಂಸೀ ಎಂದು ಆಕ್ರಂದಿಸುತ್ತಾ ಅರಮನೆಯ ಮುಂದೆ ಓಡಾಡುತ್ತಾನೆ. ಕರ್ಪೂರಿಕೆಯು ಅವನನ್ನು ಕರೆಕಳಿಸಿ ವಿಚಾರಿಸಿದಾಗ ಗೋಮುಖನು ಈತನು ಪೂರ್ವಜನ್ಮದಲ್ಲಿ ಹಂಸವಾಗಿದ್ದನೆಂದೂ ಆತನ ಪತ್ನಿ ಹಂಸಿಯು ಮೊಟ್ಟೆಗಳನ್ನು ಕಳೆದುಕೊಂಡು ಪ್ರಾಣತ್ಯಾಗ ಮಾಡಿಕೊಂಡಳೆಂದೂ ಇವನೂ ಪ್ರಾಣಕಳೆದುಕೊಂಡನೆಂದೂ ನಂಬುವಂತೆ ಹೇಳಿದಾಗ ಅವನೇ ಸತ್ತ ಪತಿಯೆಂದು ಕರ್ಪೂರಿಕೆಯು ಅವನನ್ನು ವರಿಸುತ್ತಾಳೆ. ಅವಳು ಅವನ ಮೂರನೆಯ ರಾಣಿಯಾಗುತ್ತಾಳೆ.

ಈ ತರಂಗದಲ್ಲಿ ಕಥೆಗಳು ರೋಮಾಂಚಕರ. ಇವುಗಳಲ್ಲಿ ಸ್ವಾರಸ್ಯ ಹೆಚ್ಚು. ವಿಮಾನಯಾನ, ಯಂತ್ರಮಾನವರು, ಮುಂತಾದ ರೋಚಕ ವಿಷಯಗಳು ಬರುತ್ತವೆ. ಸ್ತ್ರೀಯರು ಲಕ್ಷ್ಮಿಯಂತೆ ಸತ್ವವಂತರನ್ನು ತಾವೇ ವರಿಸುತ್ತಾರೆ ಎಂಬುದನ್ನು ಬಿಂಬಿಸುವುದು ಈ ತರಂಗದ ಲಕ್ಷ್ಯ.

ಎಂದಿನಂತೆ ಅಲ್ಲಲ್ಲಿ ಬರುವ ವರ್ಣನೆಗಳ ಶಬ್ದಾರ್ಥಗಳ ವೈಭವವು ಕವಿಯ ಅನನ್ಯಪ್ರತಿಭೆಯನ್ನು ಸಾರುತ್ತವೆ. ಸಮುದ್ರತೀರದಲ್ಲಿದ್ದ ನಗರದ ವರ್ಣನೆಯು ನಗರವನ್ನು ಕಣ್ಣಮುಂದೆ ತಂದಿರಿಸುತ್ತದೆ.

ಅದ್ರಿಕೂಟನಿಭಾಟ್ಟಾಲ ಪ್ರತೋಲೀಗೋಪುರಾನ್ವಿತಂ
ಮೇರ್ವಾಭಸರ್ವಸೌವರ್ಣರಾಜಮಂದಿರರಾಜಿತಂ.
ನಗರಂ ವಿಪುಲಾಭೋಗಂ ಭೂಮಂಡಲಮಿವಾಪರಂ

ಕಾಂಚೀಪುರವು ವಸುಧಾವಧುವಿನ ಕಾಂಚಿಯಂತೆ ಅಂದರೆ ವಡ್ಯಾಣದಂತೆ ಇತ್ತೆಂದು ಕವಿಯು ವರ್ಣಿಸುತ್ತಾನೆ. ಒಂದೇ ಸಾಲಿನಲ್ಲಿ ಕಾಂಚೀಪುರವು ಕಣ್ಣಿಗೆ ಕಟ್ಟುತ್ತದೆ.

ಕರ್ಪೂರಿಕೆಯು ಹುಟ್ಟಿದಾಗ 'ಸರ್ವಾಂಗ ಸುಂದರವಾದ ಆ ಮಗುವಿನ ಕಾಂತಿಗೆ ಬಾಣಂತಿ ಕೋಣೆಯ ದೀಪಗಳೆಲ್ಲ ಸೋತು ಮಂಕಾಗಿ ಕಾಡಿಗೆಯನ್ನು ಬಿಡುವ ನೆಪದಿಂದ ನಿಟ್ಟುಸಿರು ಬಿಡುವಂತೆ

ಕಾಣುತ್ತಿದ್ದುವಂತೆ. ಆ ಮಗುವು ಬೆಳೆದು ದೊಡ್ಡವಳಾದಾಗ ಲೋಕಲೋಚನಚಂದ್ರಿಕೆಯಾಗಿ ಜನರ ಕಣ್ಣುಗಳಿಗೆ ಬೆಳುದಿಂಗಳಾದಳಂತೆ.

ನರವಾಹನದತ್ತನು ಕರ್ಪೂರಿಕೆಯನ್ನು ಉಪಾಯದಿಂದ ತನ್ನ ಕಥೆಯಿಂದ ವಶಮಾಡಿಕೊಳ್ಳಲು ಪ್ರಯತ್ನಿಸಿದಾಗ ಗೋಮುಖನು 'ಇದಾನೀಂ ತ್ವನ್ಮುಖೋದಾರ ರಾಕಾರಮಣ ದರ್ಶನಾತ್ । ಅಸಂಖ್ಯದುಃಖಸಾನ್ನಿಧ್ಯತಮೋಪಹ್ನುತಿಮಶ್ನುತೇ । ತದ್ದೃಷ್ಟಿನೀಲನಲಿನಸ್ರಜಾರ್ಚಯ ಮಹಾತಿಥಿಂ' ಎಂದು ಹೇಳುತ್ತಾನೆ.

'ನಿನ್ನ ಮುಖವೆಂಬ ವಿಶಾಲವಾದ ಹುಣ್ಣಿಮೆಯ ಚಂದ್ರನನ್ನು ಕಂಡಮೇಲೆ ಅಪಾರದುಃಖದ ಸಾನ್ನಿಧ್ಯವೆಂಬ ಕತ್ತಲೆಯ ವಿನಾಶವನ್ನು ಅನುಭವಿಸುತ್ತಿದ್ದಾನೆ. ಆದ್ದರಿಂದ ನಿನ್ನ ದೃಷ್ಟಿಯೆಂಬ ನೀಲಕಮಲಗಳ ಹಾರದಿಂದ ಮಹಾತಿಥಿಯನ್ನು ಪೂಜಿಸು ಎಂದು ಹೇಳುವ ಈ ಮಾತು ಅವನು ಹೇಳುವ ಕಥೆಗೆ ಕಾವ್ಯಮಯವಾದ ಮುಕ್ತಾಯ.

ಈ ವರ್ಣನೆಗಳೆಲ್ಲ ಕಥೆಯ ಶರೀರವನ್ನು ಸಿಂಗರಿಸುವ ಕಾವ್ಯಾಭರಣಗಳಾಗಿವೆ. ಒಟ್ಟಿನಲ್ಲಿ ಈ ಲಂಬಕವೂ ರೋಚಕ ಸನ್ನಿವೇಶಗಳು, ಅತಿಮಾನುಷ ಘಟನೆಗಳು, ಯಂತ್ರನಗರಿಯಂತಹ ವಿಚಿತ್ರ ದೃಶ್ಯಾವಳಿಗಳ ಒಂದು ಕಾವ್ಯಮಯ ಸೃಷ್ಟಿಯಾಗಿದೆ.

**ಡಾ.ಪಿ.ಎಸ್. ರಾಮಾನುಜಂ**
ಸಂಪಾದಕರು

# ಪರಿವಿಡಿ



## ಕಥಾಸರಿತ್ಸಾಗರ

ಮಹಾಕವಿ ಶ್ರೀ ಸೋಮದೇವಭಟ್ಟನಿಂದ

ವಿರಚಿತವಾದ

# ಕಥಾಸರಿತ್ಸಾಗರ

(ಸಂಪುಟ ೫)

(ಲಂಬಕ: ರತ್ನಪ್ರಭಾ)

ಮಹಾಕವಿ ಶ್ರೀ ಸೋಮದೇವಭಟ್ಟನಿಂದ

ವಿರಚಿತವಾದ

# ಕಥಾಸರಿತ್ಸಾಗರ

## 'ರತ್ನಪ್ರಭಾ' ಎಂಬ ಏಳನೆಯ ಲಂಬಕ

ಇದು ಬಹಳ ಹಿಂದೆ ಪರಶಿವ ಮತ್ತು ಪಾರ್ವತಿಯರ ಪ್ರಣಯವೆಂಬ ಮಂದರಪರ್ವತವನ್ನು ಕಡೆದದ್ದರಿಂದ ಶಿವನ ಮುಖ ಸಮುದ್ರದಿಂದ ಹೊರಹೊಮ್ಮಿದ ಕಥಾಮೃತ. ಯಾರು ಪ್ರಯತ್ನಪಟ್ಟು ಇದರ ರಸವನ್ನು ಸವಿಯುವರೋ ಅವರು ಶಿವನ ಅನುಗ್ರಹದಿಂದಾಗಿ ಯಾವುದೇ ವಿಘ್ನವಿಲ್ಲದೆ ಸಮೃದ್ಧಿಯನ್ನು ಪಡೆದು ಭೂಲೋಕದಲ್ಲಿ ಜ್ಞಾನಮಾರ್ಗದ ಧುರಂಧುರರಾಗುತ್ತಾರೆ.

## ಮೊದಲನೆಯ ತರಂಗ

೧ ಆಟದಲ್ಲಿ ಕುಪಿತಳಾದ ಗೌರಿಯು ಶಂಕರನ ತಲೆಗೂದಲನ್ನು ಹಿಡಿದಿದ್ದರಿಂದ ಅವಳ ಉಗುರುಗಳಿಂದ ಆವೃತವಾಗಿ ಅನೇಕ ಚಂದ್ರರಿಂದ ಒಡಗೂಡಿರುವಂತೆ ಶೋಭಿಸಿದ ಶಿವನ ಮುಡಿಯು ನಿಮಗೆ ಮಂಗಳವುಂಟುಮಾಡಲಿ.

---

ಮಹಾಕವಿ ಶ್ರೀ ಸೋಮದೇವಭಟ್ಟ ವಿರಚಿತ :

ಕಥಾಸರಿತ್ಸಾಗರ:

ರತ್ನಪ್ರಭಾ ನಾಮ ಸಪ್ತಮೋ ಲಂಬಕಃ

ಇದಂ ಗುರುಗಿರೀಂದ್ರಜಾಪ್ರಣಯಮಂದರಾಂದೋಲನಾತ್
ಪುರಾ ಕಿಲ ಕಥಾಮೃತಂ ಹರಮುಖಾಂಬುಧೇರುದ್ಗತಮ್ ।
ಪ್ರಸಹ್ಯ ರಸಯಂತಿ ಯೇ ವಿಗತವಿಘ್ನಲಬ್ಧರ್ಧಯೋ
ಧುರಂ ದಧತಿ ವೈಬುಧೀಂ ಭುವಿ ಭವಪ್ರಸಾದೇನ ತೇ ॥

## ಪ್ರಥಮಸ್ತರಂಗಃ

ಕೇಲಿಕೇಶಗ್ರಹವ್ಯಗ್ರಗೌರೀಕರನಖಾವೃತಮ್ ।
ಶಿವಾಯಾನೇಕಚಂದ್ರಾಢ್ಯಮಿವ ಶಾರ್ವಂ ಶಿರೋಽಸ್ತು ವಃ ॥ ೧

೧. ಮದೋದಕದಿಂದ ಒದ್ದೆಯಾಗಿರುವ ತುದಿಯಲ್ಲಿ ಬಾಗಿರುವ ಸೊಂಡಿಲನ್ನು ಚಾಚುತ್ತ ಸಿದ್ಧಿಯನ್ನು ನೀಡುತ್ತಿರುವಂತೆ ತೋರಿಬರುವ ಗಜಮುಖನು ನಿಮ್ಮನ್ನು ಕಾಪಾಡಲಿ.

೩. ಹೀಗೆ ಆ ಕೌಶಾಂಬಿಯಲ್ಲಿ ವತ್ಸೇಶ್ವರನ ಯುವ ಪುತ್ರನಾದ ನರವಾಹನದತ್ತನು ಪ್ರಾಣಪ್ರಿಯೆಯಾದ ಮದನಮಂಚುಕೆಯನ್ನು ಮದುವೆಯಾಗಿ,

೪. ಅವನು ತನ್ನ ಇಷ್ಟಾರ್ಥಗಳನ್ನು ನೆರವೇರಿಸಿಕೊಂಡವನಾಗಿ ತನ್ನ ಮಂತ್ರಿಗಳಾದ ಗೋಮುಖ ಮುಂತಾದವರೊಡನೆ ತನ್ನಿಷ್ಟಬಂದಂತೆ ಸುಖವಾಗಿ ಇರುತ್ತಿದ್ದನು.

೫–೬ ಒಮ್ಮೆ ವಸಂತೋತ್ಸವವು ಪ್ರಾಪ್ತವಾಯಿತು. ಆಗ ಮತ್ತೇರಿದ ಕೋಗಿಲೆಗಳು ತಮ್ಮ ಇಂಚರದಿಂದ ವಾತಾವರಣವನ್ನು ತುಂಬಿದುವು. ಮಲಯಮಾರುತವು ಬಳ್ಳಿಗಳನ್ನು ಬಳುಕಿಸಿ ನರ್ತನವನ್ನಾರಂಭಿಸಿತು. ದುಂಬಿಗಳು ಮಧುರವಾಗಿ ಝೇಂಕರಿಸಲು ಆರಂಭಿಸಿದುವು. ಆಗ ರಾಜಕುಮಾರನು ಮಂತ್ರಿಗಳ ಸಹಿತ ವಿಹರಿಸಲು ಉದ್ಯಾನವನಕ್ಕೆ ಹೋದನು.

೭ ಅಲ್ಲಿ ಅಲೆದಾಡಿ ಇದ್ದಕ್ಕಿದ್ದಂತೆ ಹಿಂತಿರುಗಿ ಅವನ ಬಳಿ ಬಂದ ಆತನ ಸ್ನೇಹಿತನಾದ ತಪಂತಕನು ಆನಂದದಿಂದ ಕಣ್ಣುಗಳನ್ನು ಅರಳಿಸಿಕೊಂಡು ಅವನಿಗೆಂದನು:

೮ ಯುವರಾಜ, ಇಲ್ಲಿಗೆ ಸ್ವಲ್ಪ ದೂರದಲ್ಲಿಯೇ ಯಾವಳೋ ತರುಣಿಯೊಬ್ಬಳು ಆಕಾಶದಿಂದ ಕೆಳಗಿಳಿದು ಒಂದು ಅಶೋಕವೃಕ್ಷದ ಬುಡದಲ್ಲಿ ನಿಂತಿದ್ದುದನ್ನು ಕಂಡೆನು.

---

ಕರಂ ದಾನಾಂಭಸಾರ್ದ್ರಂ ಯಃ ಕುಂಚಿತಾಗ್ರಂ ಪ್ರಸಾರಯನ್ ।
ದದತ್ಸಿದ್ಧಿಮಿವಾಭಾತಿ ಸ ಪಾಯಾದ್ವೋ ಗಜಾನನಃ ॥ ೧

ಏವಂ ಸ ತತ್ರ ಕೌಶಾಂಬ್ಯಾಂ ಪುತ್ರೋ ವತ್ಸೇಶ್ವರಸ್ಯ ತಾಮ್ ।
ಪರಿಣೀಯ ಯುವಾ ಪ್ರಾಣಸಮಾಂ ಮದನಮಂಚುಕಾಮ್ ॥ ೩

ನರವಾಹನದತ್ತಃ ಸ್ವೈಃ ಸಚಿವೈರ್ಗೋಮುಖಾದಿಭಿಃ ।
ಸಮಂ ತಸ್ಥೌ ಯಥಾಕಾಮಂ ಪರಿಪೂರ್ಣಮನೋರಥಃ ॥ ೪

ಏಕದಾ ಚೋಲ್ಲಸನ್ಮತ್ತಕೋಕಿಲಾರಾವರಾಜಿತೇ ।
ಪ್ರವರ್ತಿತಲತಾಲಾಸ್ಯವಲ್ಗನ್ಮಲಯಮಾರುತೇ ॥ ೫

ಪ್ರಗೀತಭೃಂಗಸುಭಗೇ ಸಂಪ್ರಾಪ್ತೇ ಚ ಮಧೂತ್ಸವೇ ।
ಯಯೌ ವಿಹರ್ತುಮುದ್ಯಾನಂ ರಾಜಪುತ್ರಃ ಸಮಂತ್ರಿಕಃ ॥ ೬

ತತ್ರ ಭ್ರಾಂತ್ವಾಗತೋಽಕಸ್ಮಾದುಪೇತ್ಯ ನಿಜಗಾದ ತಮ್ ।
ಪ್ರಹರ್ಷೋತ್ಫುಲ್ಲನಯನಃ ಸ್ವವಯಸ್ಯಸ್ತಪಂತಕಃ ॥ ೭

ಯುವರಾಜ ಮಯಾ ದೃಷ್ಟಾ ಕಾಪೀತೋ ನಾತಿದೂರತಃ ।
ಕನ್ಯಾವತೀರ್ಯ ಗಗನಾತ್ ಸ್ಥಿತಾಶೋಕತರೋರಧಃ ॥ ೮

೯. ತನ್ನ ಕಾಂತಿಯಿಂದ ದಿಕ್ಕುಗಳನ್ನು ಬೆಳಗುತ್ತಿದ್ದ ಆ ಕನ್ಯೆ ತನ್ನ ಗೆಳತಿಯೊಂದಿಗೆ ನನ್ನ ಬಳಿಗೆ ಬಂದು ನಿನ್ನನ್ನು ಕರೆತರಲು ಸ್ವತಃ ನನ್ನನ್ನು ಕಳಿಸಿಕೊಟ್ಟಿದ್ದಾಳೆ.

೧೦. ಅದನ್ನು ಕೇಳಿದ ನರವಾಹನದತ್ತನು ಅವಳನ್ನು ಕಾಣಬೇಕೆಂಬ ಕುತೂಹಲದಿಂದ ಮಂತ್ರಿಸಮೇತನಾಗಿ ಕೂಡಲೇ ಆ ಮರದ ಬುಡಕ್ಕೆ ಧಾವಿಸಿದನು.

೧೧–೧೨. ಅಲ್ಲಿ ಚುಂಚಲವಾದ ದುಂಬಿಗಳಂತಹ ಕಣ್ಣುಗಳುಳ್ಳ (ಚುಂಚಲವಾದ ದುಂಬಿಗಳನ್ನೇ ಕಣ್ಣಾಗಿ ಉಳ್ಳ) ಕೆಂಪು ಚಿಗುರಿನಂತಹ ತುಟಿಯುಳ್ಳ (ಕೆಂಪು ಚಿಗುರುಗಳನ್ನೇ ತುಟಿಯಾಗಿ ಉಳ್ಳ) ಹೂಗೊಂಚಲುಗಳಂತೆ ಪುಷ್ಟವಾದ ಸ್ತನಗಳಿಂದ ಶೋಭಿತಳಾದ (ದಪ್ಪ ಹೂಗೊಂಚಲುಗಳನ್ನೇ ಸ್ತನಗಳಾಗಿ ಉಳ್ಳ) ಪರಾಗದ ರಾಶಿಯಂತೆ ಬೆಳ್ಳಗಿದ್ದ (ಪರಾಗದ ರಾಶಿಯಿಂದ ಬೆಳ್ಳಗಿದ್ದ) ನೆರಳು ತಗುಲಿದರೂ ತಾಪವನ್ನು ಹೋಗಲಾಡಿಸುವ (ನೆರಳಿನಿಂದ ಬಿಸಿಲ ಬೇಗೆಯನ್ನು ಪರಿಹರಿಸುವ) ಉಚಿತವಾದ ಆಕೃತಿಯುಳ್ಳ ಸಾಕ್ಷಾತ್ ಉಪವನದ ದೇವತೆಯಂತಿದ್ದ ಆ ಆಕರ್ಷಕಳಾದ ಕನ್ಯೆಯನ್ನು ನೋಡಿದನು.

೧೩. ಅವಳ ಆ ರೂಪವು ರಾಜಕುಮಾರನ ಕಣ್ಣುಗಳನ್ನು ಸೆಳೆದುವು. ಅವನು ಅವಳ ಬಳಿ ಬಂದಾಗ ನಮಸ್ಕರಿಸಿದ ಅವಳನ್ನು ರಾಜಕುಮಾರನು ಅಭಿನಂದಿಸಿದನು.

೧೪. ಅಲ್ಲಿ ಎಲ್ಲರೂ ಕುಳಿತುಕೊಂಡ ಮೇಲೆ ಸಚಿವನಾದ ಗೋಮುಖನು ಅವಳನ್ನು ಕುರಿತು, 'ಮಂಗಳಾಂಗಿಯೇ, ನೀನು ಯಾರು ? ಇಲ್ಲಿಗೆ ಬಂದದ್ದಾದರೂ ಏಕೆ ?' ಎಂದು ಕೇಳಿದನು.

---

ತಯೈವ ಪ್ರೇಷಿತಶ್ಚಾಹಮುಪೇತ್ಯ ಸಸಖೀಕಯಾ ।
ಸ್ವಕಾಂತಿದ್ಯೋತಿತದಿಶಾ ತ್ವದಾಹ್ವಾನಾಯ ಕನ್ಯಯಾ ॥ ೯

ತಚ್ಛ್ರುತ್ವಾ ಸ ಸ್ವಚಿವೈಃ ಸಾಕಂ ತದ್ದರ್ಶನೋತ್ಸುಕಃ ।
ನರವಾಹನದತ್ತಸ್ತತ್ತರುಮೂಲಮಗಾದ್ ದ್ರುತಮ್ ॥ ೧೦

ದದರ್ಶ ತತ್ರ ತಾಂ ಕಾಂತಾಂ ಲೋಲಲೋಚನಷಟ್ಪದಾಮ್ ।
ಶೋಣೌಷ್ಠಪಲ್ಲವಾಂ ಪೀನಸ್ತನಸ್ತಬಕಶೋಭಿತಾಮ್ ॥ ೧೧

ಪರಾಗಪುಂಜಗೌರಾಂಗೀಂ ಛಾಯಯಾ ತಾಪಹಾರಿಣೀಮ್ ।
ಆತ್ತೋಚಿತಾಕೃತಿಂ ಸಾಕ್ಷಾದಿವೋಪವನದೇವತಾಮ್ ॥ ೧೨

ಉಪಾಯಯೌ ಚ ಪ್ರಣತಾಂ ಸ ತಾಮಭಿನನಂದ ಚ ।
ದಿವ್ಯಕನ್ಯಾಂ ನೃಪಸುತಸ್ತದ್ರೂಪಾಪಹೃತೇಕ್ಷಣಃ ॥ ೧೩

ಅಥ ತತ್ಸಚಿವಃ ಸರ್ವೇಷೂಪವಿಷ್ಟೇಷು ಗೋಮುಖಃ ।
ತಾಮಪೃಚ್ಛಚ್ಛುಭೇ ಕಾ ತ್ವಂ ಕಿಮರ್ಥಶ್ಚಾಗಮೋಽತ್ರ ತೇ ॥ ೧೪

೧೫-೧೬. ಅದನ್ನು ಕೇಳಿ ಅವಳು ಮನ್ಮಥನ ಆಜ್ಞೆಯಿಂದ ಲಜ್ಜೆಯನ್ನು ಬಿಟ್ಟು ನರವಾಹನದತ್ತನ ಮುಖಕಮಲವನ್ನು ಅಸಮಾನವಾದ ಪ್ರೀತಿಯನ್ನು ಸೂಸುವ ಕಣ್ಣುಗಳಿಂದ ಅಡಿಗಡಿಗೆ ಓರೆನೋಟದಿಂದ ನೋಡುತ್ತಾ ತನ್ನ ಕಥೆಯನ್ನು ವಿಸ್ತಾರವಾಗಿ ಹೀಗೆ ಬಣ್ಣಿಸಿದಳು.

೧೭. ಮೂರೂ ಲೋಕದಲ್ಲಿ ಪ್ರಸಿದ್ಧವಾದ ಹಿಮಾಲಯವೆಂಬ ಪರ್ವತರಾಜನು ಇರುವನಷ್ಟೆ. ಅನೇಕ ಶಿಖರಗಳುಳ್ಳ ಆ ಬೆಟ್ಟದ ಒಂದು ಶಿಖರದ ಹೆಸರು ಗೌರೀಶಂಕರ ಶಿಖರ.

೧೮. ಹೊಳೆಯುವ ಕಾಂತಿಯನ್ನೇ ಹಾರವಾಗಿ ಹೊಂದಿರುವ ಹಾಗೂ ಹಿಮದ ಶೋಭೆಯಿಂದ ಬೆಳಗುತ್ತಿರುವ ಆ ಪರ್ವತದ ವಿಸ್ತಾರವು ಆಕಾಶದ ವಿಸ್ತಾರದಂತೆ. ಅದನ್ನು ಅಳೆಯಲು ಸಾಧ್ಯವೇ ಇಲ್ಲ.

೧೯. ಅದರ ತಪ್ಪಲು ಪ್ರದೇಶಗಳು ಶಿವನ ಅನುಗ್ರಹದಿಂದ ಮಾತ್ರ ದೊರಕುವ, ಮುಪ್ಪು ಸಾವುಗಳ ಭಯವನ್ನು ಹೋಗಲಾಡಿಸುವ ಸಿದ್ಧಿಗಳ ಮತ್ತು ಗಿಡಮೂಲಿಕೆಗಳ ನಿಧಿಗಳಾಗಿವೆ.

೨೦. ಅಲ್ಲಿರುವ ವಿದ್ಯಾಧರ ಸಮುದಾಯದ ಮೈಯ ಕಾಂತಿಯಿಂದ ಚಿನ್ನದ ಬಣ್ಣದ್ದೆಂಬಂತೆ ಕಂಗೊಳಿಸುವ ಶಿಖರಗಳಿಂದ ಮೇರು ಪರ್ವತದ ಕಾಂತಿಯನ್ನು ಆ ಪರ್ವತ ಮೀರಿಸಿದೆ.

---

ತಚ್ಛ್ರುತ್ವಾ ಸಾ ದುರುಲ್ಲಂಘ್ಯಮನ್ಮಥಾಜ್ಞೋಜ್ಝಿತತ್ರಪಾ ।
ನರವಾಹನದತ್ತಸ್ಯ ವದನಾಂಭೋರುಹಂ ಮುಹುಃ ॥ ೧೫
ಪಶ್ಯಂತೀ ಚಕ್ಷುಷಾ ತಿರ್ಯಗಸಮಪ್ರಣಯಸ್ರುತಾ ।
ವಿಸ್ತರೇಣಾತ್ಮವೃತ್ತಾಂತಕಥಾಮೇವಮವರ್ಣಯತ್ ॥ ೧೬
ಅಸ್ತಿ ತ್ರಿಜಗತಿ ಖ್ಯಾತೋ ನಗೇಂದ್ರೋ ಹಿಮವಾನಿತಿ ।
ಭೂರಿಶೃಂಗಸ್ಯ ತಸ್ಯೈಕಂ ಶೃಂಗಂ ಗೌರೀಪತೇರ್ಗಿರಿಃ ॥ ೧೭
ಭಾಸ್ವನ್ಮಣಿಪ್ರಭಾಮಾಲೀ ವಿಲಸತ್ತುಹಿನದ್ಯುತಿಃ ।
ಗಗನಾಭೋಗ ಇವ ಯಃ ಪರಿಚ್ಛೇತ್ತುಂ ನ ಶಕ್ಯತೇ ॥ ೧೮
ಹರಪ್ರಸಾದಲಭ್ಯಾನಾಂ ಜರಾಮೃತ್ಯು ಭಯಚ್ಛಿದಾಮ್ ।
ಸಿದ್ಧೀನಾಮೋಷಧೀನಾಂ ಚ ನಿಧಾನಂ ಯಸ್ಯ ಸಾನವಃ ॥ ೧೯
ಯೇನ ವಿದ್ಯಾಧರವ್ರಾತಶರೀರರುಚಿಪಿಂಜರೈಃ ।
ಶಿಖರೈರಮರಾದ್ರೀಂದ್ರಶೃಂಗಶೋಭಾಭಿಭೂಯತೇ ॥ ೨೦

೨೧. ಅಲ್ಲಿ ಕಾಂಚನಶೃಂಗವೆಂಬ ಸ್ವರ್ಣಮಯವಾದ ಒಂದು ಪಟ್ಟಣವಿದೆ. ಅದರ ಕಾಂತಿಯಿಂದ ಆ ಪ್ರದೇಶವು ಸೂರ್ಯನ ಸ್ಥಾನವೆಂಬಂತೆ ಹೊಳೆಯುತ್ತಿದೆ.

೨೨. ಬಹುಯೋಜನಗಳಷ್ಟು ವಿಸ್ತೀರ್ಣವಿರುವ ಆ ಪಟ್ಟಣದಲ್ಲಿ, ಶಿವನಲ್ಲಿ ದೃಢಭಕ್ತಿಯುಳ್ಳ ಹೇಮಪ್ರಭನೆಂಬ ವಿದ್ಯಾಧರ ರಾಜನೊಬ್ಬನು ಇದ್ದಾನೆ.

೨೩. ಅವನ ಅನೇಕ ಪತ್ನಿಯರ ನಡುವೆ, ಚಂದ್ರನಿಗೆ ರೋಹಿಣಿಯೆಂಬಂತೆ, ಅವನಿಗೆ ಅತ್ಯಂತ ಪ್ರಿಯತಮಳಾದ ಅಲಂಕಾರಪ್ರಭೆಯೆಂಬ ರಾಣಿಯೊಬ್ಬಳಿದ್ದಾಳೆ.

೨೪–೨೫. ಧಾರ್ಮಿಕನಾದ ಆ ರಾಜನು ದಿನವೂ ಬೆಳಿಗ್ಗೆ ಎದ್ದು, ಸ್ನಾನಮಾಡಿ, ಆಕೆಯೊಂದಿಗೆ ವಿಧಿವಿಧಾನದಂತೆ, ಗೌರೀ ಸಮೇತನಾದ ಪರಶಿವನನ್ನು ಪೂಜಿಸಿ ಭೂಲೋಕಕ್ಕೆ ಬಂದು ಬ್ರಾಹ್ಮಣರಿಗೂ ಬಡವರಿಗೂ ರತ್ನ ಮಿಶ್ರಿತವಾದ ಲಕ್ಷ ಹೊನ್ನನ್ನು ದಾನ ಮಾಡುತ್ತಾನೆ.

೨೬. ಅಲ್ಲಿಂದ ಹಿಂತಿರುಗಿ ಬಂದು ಧರ್ಮಕ್ಕೆ ಅನುಗುಣವಾಗಿ ರಾಜಕಾರ್ಯಗಳನ್ನು ನಿರ್ವಹಿಸಿ, ಮುನಿಯಂತೆ ವ್ರತನಿಷ್ಠನಾಗಿ, ಆಹಾರ ಪಾನೀಯಗಳನ್ನು ಸೇವಿಸುತ್ತಾನೆ.

೨೭. ಹೀಗೆಯೇ ದಿನಗಳು ಉರುಳುತ್ತಿದ್ದಾಗ ಅವನಿಗೆ ಯಾವುದೋ ಸಂದರ್ಭದ ನೆನಪಿನಿಂದ, ಮಕ್ಕಳಿಲ್ಲವೆಂಬ ಚಿಂತೆಯು ಕಾಡತೊಡಗಿತು.

---

ತತ್ರ ಕಾಂಚನಶೃಂಗಾಖ್ಯಮಸ್ತಿ ಹೇಮಮಯಂ ಪುರಮ್ ।
ಭಾಭಿಃ ಪ್ರಭಾಕರಸ್ಥಾನಮಿವ ಯದ್ಭಾತಿ ಭಾಸುರಮ್ ॥ ೨೧

ಬಹುಯೋಜನವಿಸ್ತೀರ್ಣೇ ತಸ್ಮಿನ್ ವಿದ್ಯಾಧರೇಶ್ವರಃ ।
ಆಸ್ತೇ ಹೇಮಪ್ರಭೋ ನಾಮ ದೃಢಭಕ್ತಿರುಮಾಪತೌ ॥ ೨೨

ತಸ್ಯ ಚಾಸ್ತಿ ಮಹಾದೇವೀ ಪತ್ನೀಷು ಬಹುಷು ಪ್ರಿಯಾ ।
ಅಲಂಕಾರಪ್ರಭಾ ನಾಮ ರೋಹಿಣೀವ ಹಿಮತ್ವಿಷಃ ॥ ೨೩

ತಯಾ ಸಹ ಸ ರಾಜಾ ಚ ಪ್ರಾತರುತ್ಥಾಯ ಧಾರ್ಮಿಕಃ ।
ಸ್ನಾತ್ವಾರ್ಚಯಿತ್ವಾ ವಿಧಿವದ್ಗೌರೀಯುಕ್ತಂ ಮಹೇಶ್ವರಮ್ ॥ ೨೪

ಏತ್ಯಮಾನುಷಲೋಕಂ ಚ ರತ್ನಮಿಶ್ರಂ ದಿನೇ ದಿನೇ ।
ಬ್ರಾಹ್ಮಣೇಭ್ಯೋ ದರಿದ್ರೇಭ್ಯಃ ಸ್ವರ್ಣಲಕ್ಷಂ ಪ್ರಯಚ್ಛತಿ ॥ ೨೫

ತತಶ್ಚಾಗತ್ಯ ಧರ್ಮೇಣ ರಾಜಕೃತ್ಯಾನ್ಯವೇಕ್ಷ್ಯ ಸಃ ।
ಕರೋತ್ಯಾಹಾರಪಾನಾದಿ ಮುನಿವನ್ನಿಯತವ್ರತಃ ॥ ೨೬

ಏವಂ ದಿನೇಷು ಗಚ್ಛತ್ಸು ತಸ್ಯೋದ್ಭೂತವಶಾತ್ಕಿಲ ।
ಅಪುತ್ರತಾಕೃತಾ ರಾಜ್ಞಶ್ಚಿಂತಾ ಜಾತೂದಪದ್ಯತ ॥ ೨೭

೨೮. ಆ ರಾಜನು ತುಂಬ ಖಿನ್ನನಾಗಿರುವುದನ್ನು ಕಂಡ ಅವನ ಪ್ರೀತಿಯ ರಾಣಿ ಅಲಂಕಾರ ಪ್ರಭೆಯು ಅವನ ದುಮ್ಮಾನಕ್ಕೆ ಕಾರಣವನ್ನು ಕೇಳಿದಳು.

೨೯. ಅದಕ್ಕೆ ರಾಜನೆಂದನು. "ರಾಣಿಯೇ, ನನಗೆ ಸರ್ವಸಂಪತ್ತೂ ಇದೆ. ಆದರೆ ಮಗನಿಲ್ಲವೆಂಬ ದುಃಖವೊಂದು ಮಾತ್ರ ನನ್ನನ್ನು ಬಾಧಿಸುತ್ತಿದೆ.

೩೦. ಈ ಹಿಂದೆ ಮಕ್ಕಳಿಲ್ಲದ ಸತ್ವವಂತನೆಂಬಾತನ ಕಥೆಯನ್ನು ನಾನು ಕೇಳಿದ್ದೆ. ಅದನ್ನು ನೆನಪಿಸಿಕೊಂಡ ಕಾರಣ ನನಗೆ ಈ ಚಿಂತೆಯುಂಟಾಯಿತು.'

೩೧. 'ಮಹಾರಾಜನೇ, ಆ ಕಥೆಯೆಂತಹುದು ?' ಎಂದು ರಾಣಿಯು ಕೇಳಿದಾಗ ರಾಜನು ಅದನ್ನು ಅವಳಿಗೆ ಸಂಕ್ಷೇಪವಾಗಿ ವರ್ಣಿಸಿದನು:

೩೨. ಚಿತ್ರಕೂಟವೆಂಬ ನಗರದಲ್ಲಿ ಬ್ರಾಹ್ಮಣ ಪೂಜೆಯಲ್ಲಿ ನಿರತನಾಗಿದ್ದ, "ಬ್ರಾಹ್ಮಣವರ' ನೆಂಬ ಹೆಸರಿಗೆ ತಕ್ಕ ರಾಜನೊಬ್ಬನಿದ್ದನು.

೩೩. ಅವನಿಗೆ ಯುದ್ಧದಲ್ಲಿ ಸಹಾಯಮಾಡುವ, ಸದಾ ವಿಜಯಶಾಲಿಯಾಗಿದ್ದ, ಸತ್ತ್ವಶೀಲನೆಂಬೊಬ್ಬ ಸೇವಕನಿದ್ದನು. ಅವನು ಪ್ರತಿ ತಿಂಗಳೂ ಆ ರಾಜನಿಂದ ನೂರು ಹೊನ್ನುಗಳನ್ನು ಪಡೆಯುತ್ತಿದ್ದನು.

೩೪. ಆದರೆ ಮಕ್ಕಳಿಲ್ಲದ ಕಾರಣ ದಾನ ಮಾಡುವುದನ್ನೇ ಹವ್ಯಾಸವಾಗಿ ಬೆಳೆಸಿಕೊಂಡಿದ್ದ ಆ ತ್ಯಾಗಿಗೆ ಅಷ್ಟು ಚಿನ್ನವೂ ಸಾಕಾಗುತ್ತಿರಲಿಲ್ಲ.

---

ತಥಾತಿದುರ್ಮನಸ್ಕಂ ಚ ದೃಷ್ಟ್ವಾ ಪಪ್ರಚ್ಛ ತಂ ಪ್ರಿಯಾ ।
ಅಲಂಕಾರಪ್ರಭಾ ದೇವೀ ದೌರ್ಮನಸ್ಯಸ್ಯ ಕಾರಣಮ್ ॥ ೨೮

ತತಃ ಸ ರಾಜಾವಾದೀತ್ತಾಂ ಸರ್ವಸಂಪತ್ತಿರಸ್ತಿ ಮೇ ।
ಏಕಂ ತು ಪುತ್ರೋ ನಾಸ್ತೀತಿ ದುಃಖಂ ಮಾಂ ದೇವಿ ಬಾಧತೇ ॥ ೨೯

ಯಾ ಮಯಾ ಪ್ರಾಗಪುತ್ರಸ್ಯ ಪುಂಸಃ ಸತ್ತ್ವವತಃ ಕಥಾ ।
ಶ್ರುತಾ ತತ್ಸ್ಮರಣೋದ್ಭೂತಾಚ್ಚಿಂತೈಷಾ ಚೋದ್ಗತಾ ಮಮ ॥ ೩೦

ಕೀದೃಶೀ ಸಾ ಕಥಾ ದೇವೇತ್ಯುಕ್ತೋ ದೇವ್ಯಾ ತಯಾ ಚ ಸಃ ।
ರಾಜಾ ತಸ್ಯೈ ಕಥಾಮೇವಂ ಸಂಕ್ಷೇಪಾತ್ತಾಮವರ್ಣಯತ್ ॥ ೩೧

ನಗರೇ ಚಿತ್ರಕೂಟಾಖ್ಯೇ ಬ್ರಾಹ್ಮಣಾರ್ಚನತತ್ಪರಃ ।
ಬಭೂವ ಬ್ರಾಹ್ಮಣವರೋ ನಾಮ್ನಾನ್ವರ್ಥೋ ಮಹೀಪತಿಃ ॥ ೩೨

ತಸ್ಯಾಸೀತ್ ಸತ್ತ್ವಶೀಲಾಖ್ಯೋ ಜಯೀ ಯುದ್ಧೈಕ ಸೇವಕಃ ।
ಮಾಸೇ ಮಾಸೇ ಚ ಲೇಭೇ ಸ ತಸ್ಮಾತ್ ಸ್ವರ್ಣಶತಂ ನೃಪಾತ್ ॥ ೩೩

ಪರ್ಯಾಪ್ತ್ಯೈ ತಚ್ಚ ನೈವಾಭೂತ್ ತ್ಯಾಗಿನಸ್ತಸ್ಯ ಕಾಂಚನಮ್ ।
ಅಪುತ್ರತ್ವಾಚ್ಚ ದಾನೈಕವಿನೋದಾಸಕ್ತಚೇತಸಃ ॥ ೩೪

೩೫. ಆನಂದ ನೀಡುವ ಮಗನನ್ನು ಬ್ರಹ್ಮನು ನೀಡಲಿಲ್ಲ. ಆದರೆ ಅವನು ದಾನಮಾಡುವ ಹವ್ಯಾಸವನ್ನು ನನಗೆ ಕೊಟ್ಟನು. ಆದರೆ ಅದಕ್ಕೆ ಹಣವಿಲ್ಲದೇ ಇರುವಂತಹ ಸ್ಥಿತಿ ಬೇರೆ ಉಂಟಾಗಿದೆ.

೩೬. ಈ ಪ್ರಪಂಚದಲ್ಲಿ ತ್ಯಾಗಶೀಲನಾದ ಬಡವನ ಜನ್ಮಕ್ಕಿಂತ ವಯಸ್ಸಾದ ಒಣಗಿದ ಮರದ ಜನ್ಮ ಅಥವಾ ಬಂಡೆಯ ಜನ್ಮವೇ ವಾಸಿ.

೩೭. ಹೀಗೆ ದಿನವೂ ಯೋಚಿಸುತ್ತಿದ್ದ ಸತ್ವಶೀಲನು ಒಮ್ಮೆ ಉದ್ಯಾನದಲ್ಲಿ ಓಡಾಡುತ್ತಿರುವಾಗ ವಿಧಿಯ ಲೀಲೆಯಿಂದಾಗಿ ನಿಧಿಯೊಂದು ಸಿಕ್ಕಿತು.

೩೮. ಚಿನ್ನದಿಂದ ತುಂಬಿ ಹೊಳೆಯುತ್ತಿದ್ದ, ಬೆಲೆ ಬಾಳುವ ರತ್ನಗಳಿಂದ ಆಕರ್ಷಕವಾಗಿದ್ದ ಆ ನಿಕ್ಷೇಪವನ್ನು ಸೇವಕನ ಸಹಾಯ ಪಡೆದು ಕಷ್ಟಪಟ್ಟು ಮನೆಗೆ ಒಯ್ದನು.

೩೯. ಆಮೇಲೆ ಭೋಗಗಳನ್ನು ಅನುಭವಿಸುತ್ತಾ ಬ್ರಾಹ್ಮಣರಿಗೆ ಹಣವನ್ನು ದಾನಮಾಡುತ್ತಾ ಸೇವಕರಿಗೂ ಸ್ನೇಹಿತರಿಗೂ ಹಂಚುತ್ತಾ ಆ ಸಾತ್ತ್ವಿಕನು ಇರುತ್ತಿದ್ದಾಗ,

೪೦. ಅವನ ದಾಯಾದಿಗಳು ಅದನ್ನು ಗಮನಿಸಿ ಇವನಿಗೆ ನಿಧಿಯು ದೊರಕಿರಬೇಕೆಂದು ಊಹೆಮಾಡಿ ಅರಮನೆಗೆ ಹೋಗಿ ಆ ರಾಜನಿಗೆ ಹಾಗೆಯೇ ವಿಷಯವನ್ನು ತಿಳಿಸಿದರು.

೪೧. ಆಮೇಲೆ ರಾಜನು ಹೇಳಿಕಳಿಸಿದ ಕಾರಣ (ಅಲ್ಲಿಗೆ) ಹೋಗಿ, ದ್ವಾರಪಾಲಕನ ಆದೇಶದಂತೆ, ಸತ್ತ್ವಶೀಲನು ಅರಮನೆಯ ಅಂಗಳದಲ್ಲೊಂದು ಕಡೆ ನಿಂತಿದ್ದನು.

---

ಪುತ್ರೋ ವಿನೋದಹೇತುರ್ಮೇ ದತ್ತಸ್ತಾವನ್ನ ವೇಧಸಾ ।
ದತ್ತಂ ಚ ದಾನವ್ಯಸನಂ ತದಪ್ಯರ್ಥವಿನಾಕೃತಮ್ ॥ ೩೫

ವರಂ ಜೀರ್ಣಸ್ಯ ಶುಷ್ಕಸ್ಯ ತರೋರ್ಜನ್ಮೋಪಲಸ್ಯ ವಾ ।
ನ ಸಂಸಾರೇ ದರಿದ್ರಸ್ಯ ತ್ಯಾಗೈಕವ್ಯಸನಸ್ಯ ಚ ॥ ೩೬

ಇತಿ ಸಂಚಿಂತಯನ್ನಿತ್ಯಂ ಸತ್ತ್ವಶೀಲಃ ಸ ಜಾತುಚಿತ್ ।
ಉದ್ಯಾನೇ ಸಂಚರನ್ ಪ್ರಾಪ ನಿಧಿಂ ದೈವಾತ್ಕದಾಚನ ॥ ೩೭

ಸಭೃತ್ಯಶ್ಚ ತಮಾದಾಯ ಭೂರಿಕಾಂಚನಭಾಸ್ವರಮ್ ।
ಮಹಾರ್ಘರತ್ನರುಚಿರಂ ನಿನಾಯ ಪ್ರಸಭಂ ಗೃಹಮ್ ॥ ೩೮

ತತಃ ಸ ಭೋಗಾನ್ ಭುಂಜಾನೋ ಬ್ರಾಹ್ಮಣೇಭ್ಯೋ ದದದ್ವಸು ।
ಭೃತ್ಯೇಭ್ಯಶ್ಚ ಸುಹೃದ್ಭ್ಯಶ್ಚ ಯಾವದಾಸ್ತೇಽತ್ರ ಸಾತ್ತ್ವಿಕಃ ॥ ೩೯

ತಾವದ್ ದೃಷ್ಟ್ವಾ ತದಭ್ಯೂಹ್ಯ ನಿಧಿಲಾಭಂ ಸ ಗೋತ್ರಜೈಃ ।
ತಸ್ಯ ರಾಜಕುಲೇ ಗತ್ವಾ ಸ್ವೈರಂ ರಾಜ್ಞೇ ನಿವೇದಿತಃ ॥ ೪೦

ಅಥ ರಾಜ್ಞಾ ಸಮಾಹೂತಃ ಪ್ರತೀಹಾರನಿದೇಶತಃ ।
ಕ್ಷಣಂ ರಾಜಾಂಗಣೈಕಾಂತೇ ಸತ್ತ್ವಶೀಲಃ ಸ ತಸ್ಥಿವಾನ್ ॥ ೪೧

೪೨. ಕೈಯಲ್ಲಿದ್ದ ಆಟದ ವಜ್ರಮುಷ್ಟಿಯಿಂದ ಅಲ್ಲಿ ನೆಲವನ್ನು ಕೆರೆಯುತ್ತಿದ್ದಾಗ ತಾಮ್ರದ ಬಿಂದಿಗೆಯಲ್ಲಿ ಹೂತಿಟ್ಟಿದ್ದ ಇನ್ನೊಂದು ದೊಡ್ಡ ನಿಧಿಯು ಅವನಿಗೆ ದೊರೆಯಿತು.

೪೩. ಅದು, ಈತನ ಸತ್ತ್ವದಿಂದ ಸಂತುಷ್ಟವಾದ ವಿಧಿಯು ಇದನ್ನು ಕೊಟ್ಟು ನಿನ್ನ ರಾಜನನ್ನು ಸಂತೋಷಪಡಿಸು ಎಂದು ತನ್ನ ಅಭಿಪ್ರಾಯವನ್ನು ತೋರಿಸಿದಂತಿತ್ತು.

೪೪. ಆ ವೇಳೆಗೆ ರಾಜನು ದ್ವಾರಪಾಲಕನ ಮೂಲಕ ಹೇಳಿಕಳಿಸಲು ನಿಧಿಯನ್ನು ಹಾಗೆಯೇ ಮಣ್ಣಿನಿಂದ ಮುಚ್ಚಿ ರಾಜನ ಬಳಿಗೆ ಹೋದನು.

೪೫. "ನಿನಗೆ ನಿಧಿಯು ಸಿಕ್ಕಿದೆಯೆಂದು ನನಗೆ ತಿಳಿದಿದೆ. ಅದನ್ನು ನಮಗೆ ನೀಡು' ಎಂದು ರಾಜನು ನುಡಿಯಲು ವಿನಯದಿಂದ ತಲೆಬಾಗಿ ಸತ್ತ್ವಶೀಲನು ತಾನೇ ಅವನಿಗೆಂದನು.

೪೬. "ಪ್ರಭುವೇ, ಮೊದಲು ಸಿಕ್ಕಿದುದನ್ನು ಕೊಡಲೇ, ಇಂದು ಸಿಕ್ಕಿದ್ದನ್ನು ಕೊಡಲೇ, ಎಂದು ತಾವೇ ಹೇಳಬೇಕು' ಎಂದು ಉತ್ತರವಿತ್ತನು.

೪೭. ರಾಜನು ಹೊಸದಾಗಿ ಸಿಕ್ಕಿದುದನ್ನು ಒಪ್ಪಿಸು ಎಂದು ಹೇಳಲು ಅರಮನೆಯ ಅಂಗಳದ ಒಂದು ಪ್ರದೇಶಕ್ಕೆ ಹೋಗಿ ಆ ನಿಧಿಯನ್ನು ತಂದು ಅವನಿಗೆ ಸಮರ್ಪಿಸಿದನು.

೪೮. ಎರಡನೆಯ ನಿಧಿಯಿಂದ ಸಂತುಷ್ಟನಾದ ರಾಜನು "ಮೊದಲು ಸಿಕ್ಕಿದ ನಿಧಿಯನ್ನು ನೀನು ನಿನ್ನಿಷ್ಟದಂತೆ ಅನುಭವಿಸು' ಎಂದು ಹೇಳಿ ಸತ್ತ್ವಶೀಲನನ್ನು ಕಳಿಸಿಕೊಡಲು, ಅವನು ಮನೆಗೆ ಹೋದನು.

---

ತತ್ರ ಹಸ್ತಸ್ಥಯಾ ಲೀಲಾವಜ್ರಮುಷ್ಟ್ಯಾ ಖನನ್ ಕ್ಷಿತಿಮ್ ।
ಸ ಲೇಭೇ ತಾಮ್ರಕುಂಭಸ್ಥಂ ನಿಧಾನಂ ಚಾಪರಂ ಮಹತ್ ॥ ೪೨

ದತ್ವೇದಂ ರಂಜನೀಯಸ್ತೇ ರಾಜೇತಿ ಹೃದಯಂ ನಿಜಮ್ ।
ವಿಧಿನಾ ಸತ್ತ್ವತುಷ್ಟೇನ ಪ್ರಕಾಶಮಿವ ದರ್ಶಿತಮ್ ॥ ೪೩

ತಥೈವಾಚ್ಛಾದಯಾಮಾಸ ಮೃದಾ ತಚ್ಚ ವಿವೇಶ ಚ ।
ಆವೇದಿತಃ ಪ್ರತೀಹಾರೇಣಾಂತಿಕಂ ನೃಪತೇಸ್ತತಃ ॥ ೪೪

ಜ್ಞಾತಂ ಮಯಾ ನಿಧಿರ್ಲಬ್ಧಸ್ತ್ವಯಾ ತಂ ನಃ ಸಮರ್ಪಯ ।
ಇತಿ ತತ್ರ ಸ ರಾಜ್ಞಾ ಚ ಪ್ರಣತೋ ಜಗದೇ ಸ್ವಯಮ್ ॥ ೪೫

ಕಿಮರ್ಪಯಾಮಿ ದೇವಾದ್ಯಂ ಕಿಮದ್ಯತನಮುಚ್ಯತಾಮ್ ।
ಸೋಽಪಿ ತತ್ರೇತಿ ರಾಜಾನಂ ಸತ್ತ್ವಶೀಲೋ ಜಗಾದ ತಮ್ ॥ ೪೬

ಅರ್ಪಯಾಭಿನವಪ್ರಾಪ್ತಮಿತ್ಯುಕ್ತಃ ಸ ಭೂಭೃತಾ ।
ಗತ್ವಾ ರಾಜಾಂಗಣೈಕಾಂತೇ ನಿಧಿಂ ತಸ್ಮೈ ಸಮರ್ಪಯತ್ ॥ ೪೭

ಆದ್ಯಂ ನಿಧಿಂ ಯಥೇಚ್ಛಂ ತ್ವಂ ಭುಂಕ್ಷ್ವೇತಿ ಪ್ರೇಷಿತೋಽಥ ಸಃ ।
ನೃಪೇಣ ನಿಧಿತುಷ್ಟೇನ ಸತ್ತ್ವಶೀಲೋಽಗಮದ್ ಗೃಹಮ್ ॥ ೪೮

೪೯. ಅಲ್ಲಿ ದಾನ, ಭೋಗಗಳಿಂದ ತನ್ನ ಹೆಸರಿನ ಯಥಾರ್ಥತೆಯನ್ನು ಹೆಚ್ಚಿಸುತ್ತಾ ಮಕ್ಕಳಿಲ್ಲದ ದುಃಖ ದುಮ್ಮಾನವನ್ನು ಹೇಗೋ ತಳ್ಳುತ್ತಾ ಇದ್ದನು.

೫೦. ಹೀಗೆ ಈ ಸತ್ತ್ವಶೀಲನ ಕಥೆಯನ್ನು ಹಿಂದೆ ಕೇಳಿದ್ದೆ. ಅದನ್ನು ನೆನಪಿಸಿಕೊಂಡು ಮಕ್ಕಳಿಲ್ಲದ ಚಿಂತೆ ಬಂದು ನಿಂತುಬಿಡುತ್ತದೆ.

೫೧. ಎಂಬುದಾಗಿ ವಿದ್ಯಾಧರ ರಾಜ ಹೇಮಪ್ರಭನು ಹೆಂಡತಿಗೆ ಹೇಳಿದಾಗ ರಾಣಿ ಅಲಂಕಾರ ಪ್ರಭೆಯು ಅವನಿಗೆಂದಳು:

೫೨. "ನಿಜ. ಸತ್ತ್ವಶೀಲರಿಗೆ ವಿಧಿಯು ಹೀಗೆ ಸಹಾಯ ಮಾಡುತ್ತದೆ. ಕಷ್ಟದ ಸ್ಥಿತಿಯಲ್ಲಿ ಇದ್ದಾಗ ಸತ್ತ್ವಶೀಲನಿಗೆ ಮತ್ತೊಂದು ನಿಧಿಯು ದೊರಕಲಿಲ್ಲವೇ ?

೫೩. ಆದ್ದರಿಂದ ನಿನ್ನ ಸತ್ತ್ವದ ಪ್ರಭಾವದಿಂದ ನೀನೂ ಕೂಡ ಅಪೇಕ್ಷಿಸಿದ್ದನ್ನು ಪಡೆಯುವೆ. ಈ ಪ್ರಸಂಗದಲ್ಲಿ ವಿಕ್ರಮತುಂಗನ ದೃಷ್ಟಾಂತದ ಕಥೆಯನ್ನು ಕೇಳು:

೫೪. ವರ್ಣ ವ್ಯವಸ್ಥೆಯಲ್ಲಿ ನೆಲೆನಿಂತ ಸಜ್ಜನರಿಂದ ಅಲ್ಲಲ್ಲಿ ತುಂಬಿರುವ. ಭೂಮಿಗೆ ಅಲಂಕಾರಪ್ರಾಯವಾಗಿರುವ ಪಾಟಲಿಪುತ್ರವೆಂಬ ನಗರವೊಂದಿದೆ.

೫೫. ಹಿಂದೆ ಅಲ್ಲಿ ವಿಕ್ರಮತುಂಗನೆಂಬ ಸತ್ತ್ವಶಾಲಿಯಾದ ರಾಜನಿದ್ದನು. ಆತನು ಯುದ್ಧದಲ್ಲಿ ಶತ್ರುಗಳಿಗೂ ದಾನದಲ್ಲಿ ಯಾಚಕರಿಗೂ ಬೆನ್ನು ತೋರಿಸಲಿಲ್ಲ.

---

ತತ್ರಾಸೀದ್ದಾನಭೋಗಾಭ್ಯಾಂ ತನ್ವನ್ನಾಮ್ನೋ ಯಥಾರ್ಥತಾಮ್ ।
ನುದಂಶ್ಚಾಪುತ್ರತಾದುಃಖದೌರ್ಮನಸ್ಯಂ ಕಥಂಚನ ॥ ೪೯

ಇತ್ಯೇತತ್ ಸತ್ತ್ವಶೀಲಸ್ಯ ವೃತ್ತಂ ಪೂರ್ವಂ ಶ್ರುತಂ ಮಯಾ ।
ಸಂಸ್ಮೃತ್ಯ ಸ್ಥೀಯತೇ ದುಃಖಂ ಪುತ್ರಾಸದ್ಭಾವಚಿಂತಯಾ ॥ ೫೦

ಇತಿ ವಿದ್ಯಾಧರೇಂದ್ರೇಣ ಭಾರ್ಯಾ ಹೇಮಪ್ರಭೇಣ ಸಾ ।
ಅಲಂಕಾರಪ್ರಭಾದೇವೀ ಗದಿತಾ ನಿಜಗಾದ ತಮ್ ॥ ೫೧

ಸತ್ಯಮೇವಂ ಸುಸತ್ತ್ವಾನಾಂ ಸಾಹಾಯ್ಯಂ ಭಜತೇ ವಿಧಿಃ ।
ಕಿಂ ನಾಪರೋ ನಿಧಿರ್ಲಬ್ಧಃ ಸತ್ತ್ವಶೀಲೇನ ಸಂಕಟೇ ॥ ೫೨

ತತ್ ಸ್ವಸತ್ತ್ವಪ್ರಭಾವೇಣ ತ್ವಮಪಿ ಪ್ರಾಪ್ಸ್ಯಸೀಪ್ಸಿತಮ್ ।
ಶೃಣು ವಿಕ್ರಮತುಂಗಸ್ಯ ಕಥಾಂ ಚಾತ್ರ ನಿದರ್ಶನಮ್ ॥ ೫೩

ಅಸ್ತಿ ಪಾಟಲಿಪುತ್ರಾಖ್ಯಂ ಭುವೋಽಲಂಕರಣಂ ಪುರಮ್ ।
ಪೂರ್ಣವರ್ಣವ್ಯವಸ್ಥಾನೈಸ್ತೈಸ್ತೈಃ ಸನ್ಮಣಿಭಿಶ್ಚಿತಮ್ ॥ ೫೪

ತತ್ರ ವಿಕ್ರಮತುಂಗಾಖ್ಯೋ ರಾಜಾಭೂತ್ ಸತ್ತ್ವವಾನ್ ಪುರಾ ।
ಯೋಽಭೂತ್ಪರಾಙ್ಮುಖೋ ದಾನೇ ನಾರ್ಥಿನಾಂ ನ ಯುಧಿ ದ್ವಿಷಾಮ್ ॥ ೫೫

೫೬. ಅವನು ಒಮ್ಮೆ ಬೇಟೆಗೆಂದು ಕಾಡಿಗೆ ಹೋಗಿದ್ದಾಗ ಅಲ್ಲಿ ಬಿಲ್ವಪತ್ರೆಯ ಕಾಯಿಗಳಿಂದ ಹೋಮ ಮಾಡುತ್ತಿದ್ದ ಬ್ರಾಹ್ಮಣನನ್ನು ಕಂಡನು.

೫೭. ಅವನನ್ನು ನೋಡಿ ಕೇಳಬೇಕೆಂದೆನಿಸಿದ್ದರೂ ಬೇಟೆಯ ಆಸಕ್ತಿಯಿಂದಾಗಿ, ಆತನ ಬಳಿಗೆ ಹೋಗದೆ, ಸೈನ್ಯ ಸಮೇತನಾಗಿ ಅಲ್ಲಿಂದ ಹೊರಟು ಹೋದನು.

೫೮–೫೯. ತನ್ನ ಕೈಯಿಂದ ಏಟುತಿಂದು ಏಳುತ್ತಿದ್ದ ಬೀಳುತ್ತಿದ್ದ ಪ್ರಾಣಿಗಳೊಂದಿಗೆ, ಚೆಂಡುಗಳಿಂದ ಆಡುವ ಹಾಗೆ ಬಹಳ ಹೊತ್ತು ಆಟವಾಡಿ ಹಿಂತಿರುಗಿದ ಅವನು ಮೊದಲಿನಂತೆಯೇ ಹೋಮದಲ್ಲಿ ಮುಳುಗಿದ್ದ ಬ್ರಾಹ್ಮಣನ ಬಳಿಸಾರಿ ನಮಸ್ಕಾರ ಮಾಡಿ ಹೋಮ ಮತ್ತು ಅದರ ಫಲವನ್ನು ಕೇಳಿದನು.

೬೦. ಆಗ ಆ ಬ್ರಾಹ್ಮಣನು ರಾಜನಿಗೆ ಆಶೀರ್ವಾದ ಮಾಡಿ ಹೇಳಿದನು. "ನಾನು ನಾಗಶರ್ಮನೆಂಬ ಬ್ರಾಹ್ಮಣ. ಈ ನನ್ನ ಹೋಮದ ಫಲವೇನೆಂಬುದನ್ನು ಕೇಳು.

೬೧. ಈ ಬಿಲ್ವಹೋಮದಿಂದ ಅಗ್ನಿಯು ಪ್ರಸನ್ನನಾದಾಗ ಹೋಮದ ಕುಂಡದಿಂದ ಚಿನ್ನದ ಬಿಲ್ವಫಲಗಳು ಹೊರಬರುತ್ತವೆ.

೬೨. ಆಮೇಲೆ ಅಗ್ನಿಯು ಪ್ರತ್ಯಕ್ಷನಾಗಿ ವರವನ್ನು ನೀಡುತ್ತಾನೆ. ನಾನು ಬಿಲ್ವದಿಂದ ಹೋಮ ಮಾಡುತ್ತಾ ಅದೆಷ್ಟೋ ಕಾಲವಾಯಿತು.

---

ಸ ಜಾತುಮೃಗಯಾಹೇತೋಃ ಪ್ರವಿಷ್ಟೋ ನೃಪತಿರ್ವನಮ್ ।
ಬಿಲ್ವೈರ್ಹೋಮಂ ವಿದಧತಂ ತತ್ರ ಬ್ರಾಹ್ಮಣಮೈಕ್ಷತ ॥ ೫೬
ತಂ ದೃಷ್ಟ್ವಾ ಪ್ರಷ್ಟುಕಾಮೋಽಪಿ ಪರಿಹೃತ್ಯ ತದಂತಿಕಮ್ ।
ಯಯೌ ಸ ದೂರಂ ಮೃಗಯಾರಸೇನ ಸಬಲಸ್ತತಃ ॥ ೫೭
ಉತ್ಪತದ್ಭಿಃ ಪತದ್ಭಿಶ್ಚ ಕ್ರೀಡಿತ್ವಾ ಕಂದುಕೈರಿವ ॥ ೫೮
ಆವೃತ್ತಸ್ತು ತಥೈವಾತ್ರ ದೃಷ್ಟ್ವಾ ಹೋಮಪರಂ ದ್ವಿಜಮ್ ।
ಉಪೇತ್ಯ ನತ್ವಾ ಪಪ್ರಚ್ಛ ನಾಮ ಹೋಮಫಲಂ ಚ ಸಃ ॥ ೫೯
ತತಃ ಸ ಬ್ರಾಹ್ಮಣೋ ಭೂಪಂ ಕೃತಾಶೀಸ್ತಮಭಾಷತ ।
ವಿಪ್ರೋಽಹಂ ನಾಗಶರ್ಮಾಖ್ಯೋ ಹೋಮೇ ಚ ಶೃಣು ಮೇ ಫಲಮ್ ॥ ೬೦
ಅನೇನ ಬಿಲ್ವಹೋಮೇನ ಪ್ರಸೀದತಿ ಯದಾನಲಃ ।
ಹಿರಣ್ಮಯಾನಿ ಬಿಲ್ವಾನಿ ತದಾ ನಿರ್ಯಾಂತಿ ಕುಂಡತಃ ॥ ೬೧
ತತೋಽಗ್ನಿಃ ಪ್ರಕಟೀಭೂಯ ವರಂ ಸಾಕ್ಷಾತ್ ಪ್ರಯಚ್ಛತಿ ।
ವರ್ತತೇ ಮಮ ಭೂಯಾಂಶ್ಚ ಕಾಲೋ ಬಿಲ್ವಾನಿ ಜುಹ್ವತಃ ॥ ೬೨

೬೩. ಅದೃಷ್ಟ ಹೀನನಾದ ನನಗೆ ಅಗ್ನಿ ಇನ್ನೂ ಪ್ರಸನ್ನನಾಗಿಲ್ಲ.' ಹೀಗೆಂದಾಗ ಧೀರಪರಾಕ್ರಮಿಯಾದ ಆ ರಾಜನು ನುಡಿದನು.

೬೪. "ಹಾಗಾದರೆ ನನಗೆ ಒಂದು ಬಿಲ್ವಫಲವನ್ನು ನೀಡು. ನಾನು ಹೋಮ ಮಾಡಿ ನೋಡುತ್ತೇನೆ. ಎಲೈ ಬ್ರಾಹ್ಮಣನೇ, ನಿನ್ನ ಅಗ್ನಿಯನ್ನು ಈಗಲೇ ಸಂತೋಷ ಪಡಿಸುತ್ತೇನೆ.'

೬೫. "ನೇಮನಿಷ್ಠೆಗಳಿಲ್ಲದ ಮೈಲಿಗೆಯ ನೀನು ಆ ಯಜ್ಞೇಶ್ವರನನ್ನು ಹೇಗೆ ಸಂತೋಷ ಪಡಿಸುವೆ ? ಮಡಿಯಲ್ಲಿದ್ದು ಹೀಗೆ ವ್ರತನಿಷ್ಠವಾಗಿರುವ ನನಗೇ ಅವನು ಪ್ರಸನ್ನ ನಾಗಿಲ್ಲ'

೬೬ ಎಂಬುದಾಗಿ ಆ ಬ್ರಾಹ್ಮಣನ್ನೆನಲು ರಾಜನು ಅವನಿಗೆ ಮತ್ತೆ ಹೇಳಿದನು. "ಹಾಗಾದರೆ ಬಿಲ್ವಫಲವನ್ನು ನನಗೆ ನೀಡಬೇಡ. ಸ್ವಲ್ಪ ಹೊತ್ತಿನಲ್ಲಿಯೇ ಆಶ್ಚರ್ಯವನ್ನು ನೋಡು'

೬೭–೬೮. ಆಗ ಆ ವಿಪ್ರನು ಕುತೂಹಲದಿಂದ ಒಂದು ಬಿಲ್ವಫಲವನ್ನು ರಾಜನಿಗೆ ಕೊಟ್ಟನು. ರಾಜನು ಗಟ್ಟಿ ಮನಸ್ಸಿನಿಂದ ಆಗ ಅಲ್ಲಿ "ಈ ಬಿಲ್ವವನ್ನು ಹೋಮ ಮಾಡಿದ್ದರಿಂದ ಸಂತುಷ್ಟನಾಗದೇ ಇದ್ದರೆ ಆಗ ಎಲೈ ಅಗ್ನಿಯೇ, ನನ್ನ ತಲೆಯನ್ನು ನಿನಗೆ ಆಹುತಿ ನೀಡುತ್ತೇನೆ' ಎಂದು ಮನಸ್ಸಿನಲ್ಲಿ ಸಂಕಲ್ಪಿಸಿ ಅಗ್ನಿಯಲ್ಲಿ ಬಿಲ್ವಫಲವನ್ನು ಹಾಕಿದನು.

೬೯. ರಾಜನ ಪರಾಕ್ರಮವೆಂಬ ವೃಕ್ಷದ ಫಲದಂತಿದ್ದ ಚಿನ್ನದ ಬಿಲ್ವವನ್ನು ಕೈಯಲ್ಲಿ ಹಿಡಿದು ಅಗ್ನಿಯು ಆಗ ಸ್ವತಃ ಕುಂಡದಿಂದ ಹೊರಬಂದನು.

---

ಮಂದಪುಣ್ಯಸ್ಯ ನಾದ್ಯಾಪಿ ತುಷ್ಯತ್ಯೇವ ಸ ಪಾವಕಃ ।
ಇತ್ಯುಕ್ತೇ ತೇನ ರಾಜಾ ತಂ ಧೀರಸತ್ತ್ವೋಽಭ್ಯಭಾಷತ ॥ ೬೩

ತರ್ಹಿ ಮೇ ದೇಹಿ ಬಿಲ್ವಂ ತ್ವಮೇಕಂ ಯಾವಜ್ಜುಹೋಮಿ ತತ್ ।
ಪ್ರಸಾದಯಾಮಿ ಚ ಬ್ರಹ್ಮನ್ ಅಧುನೈವ ತವಾನಲಮ್ ॥ ೬೪

ಕಥಂ ಪ್ರಸಾದಯಸಿ ತಂ ವಹ್ನಿಮಪ್ರಯತೋಽಶುಚಿಃ ।
ಯೋ ಮಮೈವಂ ವ್ರತಸ್ಥಸ್ಯ ಪೂತಸ್ಯಾಪಿ ನ ತುಷ್ಯತಿ ॥ ೬೫

ಇತ್ಯುಕ್ತಸ್ತೇನ ವಿಪ್ರೇಣ ರಾಜಾ ತಮವದತ್ ಪುನಃ ।
ಮೈವಂ ಪ್ರಯಚ್ಛ ಮೇ ಬಿಲ್ವಂ ಪಶ್ಯಾಶ್ಚರ್ಯಂ ಕ್ಷಣಾದಿತಿ ॥ ೬೬

ತತಃ ಸ ರಾಜ್ಞೇ ವಿಪ್ರೋಽಸ್ಮೈ ದದೌ ಬಿಲ್ವಂ ಸಕೌತುಕಃ ।
ರಾಜಾ ಚ ಸ ತದಾ ತತ್ರ ದೃಢಸತ್ತ್ವೇನ ಚೇತಸಾ ॥ ೬೭

ಹುತೇನಾನೇನ ಬಿಲ್ವೇನ ನ ಚೇತ್ತುಷ್ಯಸಿ ತಚ್ಛಿರಃ ।
ತ್ವಯ್ಯಗ್ನೇ ಸ್ವಂ ಜುಹೋಮೀತಿ ಧ್ಯಾತ್ವಾ ತಸ್ಮಿನ್ ಜುಹಾವ ತತ್ ॥ ೬೮

ಆವಿರಾಸೀಚ್ಚ ಸಪ್ತಾರ್ಚಿಃ ಕುಂಡಾದ್ಬಿಲ್ವಂ ಹಿರಣ್ಮಯಮ್ ।
ಸ್ವಯಮಾದಾಯ ತತ್ತಸ್ಯ ಫಲಂ ಸತ್ತ್ವತರೋರಿವ ॥ ೬೯

೭೦. ಅಗ್ನಿಯು ರಾಜನಿಗೆ ಪ್ರತ್ಯಕ್ಷವಾಗಿ ಹೀಗೆ ಹೇಳಿದನು. "ಎಲೈ ರಾಜನೇ, ನಿನ್ನ ಈ ಪರಾಕ್ರಮದಿಂದ ನಾನು ಸಂತುಷ್ಟನಾಗಿದ್ದೇನೆ. ಆದ್ದರಿಂದ ಬೇಕಾದ ವರವನ್ನು ಕೇಳು'.

೭೧. ಅದನ್ನು ಕೇಳಿದ ಮಹಾಸತ್ತ್ವನಾದ ಆ ರಾಜನು ವಿನಯದಿಂದ 'ನನಗೆ ಬೇರೆ ಯಾವ ವರವೂ ಬೇಡ. ಈ ಬ್ರಾಹ್ಮಣನಿಗೆ ಬೇಕಾದ ವರವನ್ನು ನೀಡು' ಎಂದು ಹೇಳಿದನು.

೭೨. ರಾಜನ ಮಾತನ್ನು ಕೇಳಿ ಸುಪ್ರೀತನಾದ ಅಗ್ನಿಯು ಅವನಿಗೆಂದನು : "ಎಲೈ ರಾಜನೇ, ಈ ಬ್ರಾಹ್ಮಣನು ತುಂಬ ಸಿರಿವಂತನಾಗುತ್ತಾನೆ.

೭೩. ನನ್ನ ಅನುಗ್ರಹದಿಂದ ನಿನ್ನ ಕೋಶವೂ ಎಂದೂ ಬರಿದಾಗುವುದಿಲ್ಲ' ಹೀಗೆ ವರವನ್ನು ದಯಪಾಲಿಸಿದ ಅಗ್ನಿಯನ್ನು ಕುರಿತು ಬ್ರಾಹ್ಮಣನು ಕೇಳಿದನು.

೭೪. "ಎಲೈ ಭಗವಂತನೇ, ಸ್ವೇಚ್ಛೆಯಿಂದ ತಿರುಗಾಡುವ ರಾಜನಿಗೆ ಬೇಗನೆ ಪ್ರತ್ಯಕ್ಷನಾಗಿಬಿಟ್ಟೆ ನೇಮನಿಷ್ಠೆಯಿಂದಿದ್ದ ನನಗೆ ಪ್ರತ್ಯಕ್ಷನಾಗಲಿಲ್ಲ. ಇದೇನು ?' ಎಂದು.

೭೫. ವರ ನೀಡಿದ ಅಗ್ನಿಯು "ಆಗ ನಾನು ದರ್ಶನ ನೀಡದೇ ಇದ್ದಿದ್ದರೆ ತೀವ್ರಸತ್ತ್ವದ ರಾಜನು ತನ್ನ ತಲೆಯನ್ನೇ ನನಗೆ ಆಹುತಿ ಕೊಟ್ಟುಬಿಡುತ್ತಿದ್ದನು.

೭೬. ತೀವ್ರ ಪರಾಕ್ರಮಿಗಳಿಗೆ ಬೇಗನೆ ಸಿದ್ಧಿಗಳು ಉಂಟಾಗುತ್ತವೆ. ನಿನ್ನಂತಹ ಮಂದ ಪರಾಕ್ರಮಿಗಳಿಗೆ ಅವು ತಡವಾಗಿ ಆಗುತ್ತವೆ.'

---

ಜಗಾದ ಚ ಸ ಸಾಕ್ಷಾತ್ತಂ ಜಾತವೇದಾ ಮಹೀಪತಿಮ್ ।
ಸತ್ತ್ವೇನಾನೇನ ತುಷ್ಟೋಽಸ್ಮಿ ತದ್‌ಗೃಹಾಣ ವರಂ ನೃಪ ॥ ೭೦

ತಚ್ಛ್ರುತ್ವಾ ಸ ಮಹಾಸತ್ತ್ವೋ ರಾಜಾ ತಂ ಪ್ರಣತೋಽಬ್ರವೀತ್ ।
ಕೋ ಮಮಾನ್ಯೋ ವರೋ ದೇಹಿ ದ್ವಿಜಾಯಾಸ್ಮೈ ಯಥೇಪ್ಸಿತಮ್ ॥ ೭೧

ಇತಿ ರಾಜ್ಞೋ ವಚಃ ಶ್ರುತ್ವಾ ಸುಪ್ರೀತೋಽಗ್ನಿರ್ಜಗಾದ ತಮ್ ।
ರಾಜನ್ ಮಹಾಧನಪತಿರ್ಬ್ರಾಹ್ಮಣೋಽಯಂ ಭವಿಷ್ಯತಿ ॥ ೭೨

ತ್ವಮಪ್ಯಕ್ಷೀಣಕೋಷಶ್ರೀರ್ಮತ್ಪ್ರಸಾದಾದ್ ಭವಿಷ್ಯಸಿ ।
ಏವಂ ದತ್ತವರಂ ವಹ್ನಿಂ ಬ್ರಾಹ್ಮಣಃ ಸ ವ್ಯಜಿಜ್ಞಪತ್ ॥ ೭೩

ಆವಿರ್ಭೂತೋಽಸಿ ಸಹಸಾ ರಾಜ್ಞಃ ಸ್ವೇಚ್ಛಾವಿಹಾರಿಣಃ ।
ನ ಮೇ ಸನಿಯಮಸ್ಯಾಪಿ ಕಿಮೇತದ್ ಭಗವನ್ನಿತಿ ॥ ೭೪

ತತೋಽಗ್ನಿರ್ವರದಃ ಪ್ರಾಹ ನಾದಾಸ್ಯಂ ದರ್ಶನಂ ಯದಿ ।
ಅಹೋಷ್ಯದೇಷ ಸ್ವಶಿರಸ್ತೀವ್ರಸತ್ತ್ವೋ ನೃಪೋ ಮಯಿ ॥ ೭೫

ತೀವ್ರಸತ್ತ್ವಸ್ಯ ನ ಚಿರಾದ್‌ಭವಂತ್ಯೇವ ಹಿ ಸಿದ್ಧಯಃ ।
ಮಂದಸತ್ತ್ವಸ್ಯ ತು ಚಿರಾದ್ ಬ್ರಹ್ಮನ್ ಯುಷ್ಮಾದೃಶಸ್ಯ ತಾಃ ॥ ೭೬

೭೭. ಹಾಗೆ ಹೇಳಿ ಅಗ್ನಿಯು ಅಂತರ್ಧಾನನಾಗಲು ಆ ಬ್ರಾಹ್ಮಣ ನಾಗಶರ್ಮನು ರಾಜನಿಂದ ಬೀಳ್ಕೊಂಡು ಅಲ್ಲಿಂದ ಹೊರಟು ಕಾಲಕ್ರಮದಲ್ಲಿ ಮಹಾಧನಿಕನಾದನು.

೭೮. ವಿಕ್ರಮತುಂಗ ರಾಜನೂ ಸಹ ತನ್ನ ಪರಾಕ್ರಮವನ್ನು ಕಂಡ ಹಿಂಬಾಲಕರು ಹೊಗಳುತ್ತಿರಲು ತನ್ನ ನಗರವಾದ ಪಾಟಲಿಪುತ್ರಕ್ಕೆ ಹೋದನು.

೭೯. ಅಲ್ಲಿ ಇದ್ದ ಅವನಿಗೆ ಒಮ್ಮೆ ಶತ್ರುಂಜಯನೆಂಬ ದ್ವಾರಪಾಲಕನು ಇದ್ದಕ್ಕಿದ್ದಂತೆ ಪ್ರವೇಶಿಸಿ ಬಿನ್ನಹ ಮಾಡಿದನು.

೮೦. "ಒಡೆಯನೆ, ತನ್ನ ಹೆಸರನ್ನು ದತ್ತಶರ್ಮ ಎಂದು ಹೇಳಿಕೊಳ್ಳುತ್ತಿರುವ ಬ್ರಾಹ್ಮಣ ಬಾಲಕನೊಬ್ಬನು ಏಕಾಂತದಲ್ಲಿ ತಮಗೆ ಏನನ್ನೋ ಹೇಳಲು ಅಪೇಕ್ಷಿಸಿ ಬಾಗಿಲಿನ ಬಳಿ ಬಂದು ನಿಂತಿದ್ದಾನೆ'

೮೧. "ಒಳಕ್ಕೆ ಬರಮಾಡು' ಎಂದು ರಾಜನು ಅಪ್ಪಣೆ ಮಾಡಲು ಒಳಗೆ ಬಂದ ಆ ಬಾಲಕನು ಸ್ವಸ್ತಿಪೂರ್ವಕವಾಗಿ ಆ ರಾಜನಿಗೆ ನಮಸ್ಕರಿಸಿ ಕುಳಿತುಕೊಂಡನು.

೮೨. "ಪ್ರಭುವೇ, ಯಾವುದೋ ಒಂದು ಚೂರ್ಣಯುಕ್ತಿಯಿಂದ ತಾಮ್ರದಿಂದ ಶ್ರೇಷ್ಠ ಚಿನ್ನವನ್ನು ಕೂಡಲೇ ಮಾಡುವುದನ್ನು ನಾನು ಬಲ್ಲೆ

೮೩. ಇದನ್ನು ನನಗೆ ಗುರುಗಳು ಉಪದೇಶಿಸಿದ್ದಾರೆ. ಆ ಯುಕ್ತಿಯಿಂದ ಚಿನ್ನವು ಉಂಟಾಗುವುದನ್ನು ನಾನೇ ಅನೇಕ ಬಾರಿ ಕಣ್ಣಾರೆ ಕಂಡಿದ್ದೇನೆ'

---

ಇತ್ಯುಕ್ತ್ವಾಂತರ್ಹಿತೇ ವಹ್ನೌ ನೃಪಮಾಮಂತ್ರ್ಯ ಸ ದ್ವಿಜಃ ।
ನಾಗಶರ್ಮಾ ತತೋ ಗತ್ವಾ ಕ್ರಮೇಣಾಭೂನ್ಮಹಾಧನಃ ॥ ೭೭

ನೃಪೋಽಪಿ ದೃಷ್ಟಸತ್ತ್ವಃ ಸ ಸ್ತೂಯಮಾನೋಽನುಯಾಯಿಭಿಃ ।
ಯಯೌ ವಿಕ್ರಮತುಂಗಃ ಸ್ವಂ ಪುರಂ ಪಾಟಲಿಪುತ್ರಕಮ್ ॥ ೭೮

ತತ್ರ ಸ್ಥಿತಮಕಸ್ಮಾತ್ತಂ ಪ್ರವಿಶ್ಯ ಪ್ರಭುಮೇಕದಾ ।
ರಹಃ ಶತ್ರುಂಜಯೋ ನಾಮ ಪ್ರತೀಹಾರೋ ವ್ಯಜಿಜ್ಞಪತ್ ॥ ೭೯

ವಿಜನೇ ದೇವ ವಿಜ್ಞಪ್ತಿಂ ಚಿಕೀರ್ಷುರ್ಬ್ರಾಹ್ಮಣೋ ವಟುಃ ।
ದತ್ತಶರ್ಮೇತಿ ನಾಮ ಸ್ವಂ ಬ್ರುವಾಣೋ ದ್ವಾರಿ ತಿಷ್ಠತಿ ॥ ೮೦

ಪ್ರವೇಶಯೇತಿ ಭೂಪೇನ ತೇನಾದಿಷ್ಟೇ ಪ್ರವೇಶಿತಃ ।
ಸ್ವಸ್ತಿಪೂರ್ವಂ ಸರಾಜಾನಂ ಪ್ರಣಮ್ಯೋಪಾವಿಶದ್ವಟುಃ ॥ ೮೧

ವ್ಯಜಿಜ್ಞಪಚ್ಚ ದೇವಾಹಂ ಚೂರ್ಣಯುಕ್ತ್ಯಾ ಕಯಾಚನ ।
ಸದ್ಯಃ ಸಾಧಯಿತುಂ ಜಾನೇ ತಾಮ್ರಾತ್ಕನಕಮುತ್ತಮಮ್ ॥ ೮೨

ಗುರುಣಾ ಹ್ಯುಪದಿಷ್ಟಾ ಸಾ ಯುಕ್ತಿರ್ಮಮ ಮಯಾ ಚ ತತ್ ।
ದೃಷ್ಟಂ ಸಾಕ್ಷಾತ್ತಯಾ ಯುಕ್ತ್ಯಾ ಸಂಸಿದ್ಧಂ ತಸ್ಯ ಕಾಂಚನಮ್ ॥ ೮೩

೮೫. ವಟುವು ಹೀಗೆ ಹೇಳಲು ಅದನ್ನು ಕೇಳಿದ ರಾಜನು ತಾಮ್ರವನ್ನು ತರಿಸಿದನು. ಅದನ್ನು ಕರಗಿಸಿದ ಮೇಲೆ ಆ ವಟುವು ಅದಕ್ಕೆ ಒಂದು ಪುಡಿಯನ್ನು ಹಾಕಿದನು.

೮೬. ಪುಡಿಯನ್ನು ಹಾಕುತ್ತಿದ್ದಾಗ ಯಾರೋ ಒಬ್ಬ ಯಕ್ಷನು ಯಾರಿಗೂ ಕಾಣದಂತೆ ಅದನ್ನು ಕದ್ದುಬಿಟ್ಟನು. ಅಗ್ನಿಯನ್ನು ತೃಪ್ತಿಪಡಿಸಿದ ರಾಜನು ಮಾತ್ರ ಅದನ್ನು ನೋಡಿದನು.

೮೭. ಪುಡಿ ಸೇರದುದರಿಂದ ಆ ತಾಮ್ರವು ಚಿನ್ನವಾಗಲಿಲ್ಲ. ಹೀಗೆಯೇ ಬಾಲಕನು ಮೂರು ಬಾರಿ ಮಾಡಿದ ಪ್ರಯತ್ನವೂ ವ್ಯರ್ಥವಾಯಿತು.

೮೮. ತೇಜಸ್ವಿಗಳಲ್ಲಿ ಶ್ರೇಷ್ಠನಾದ ಆ ರಾಜನು ವಿಷಾದಗೊಂಡಿದ್ದ ಆ ಬಾಲಕನ ಕೈಯಿಂದ ಪುಡಿಯನ್ನು ಪಡೆದುಕೊಂಡು ಕರಗಿದ ತಾಮ್ರದೊಳಕ್ಕೆ ಎಸೆದನು.

೮೯. ಆಗ ಅದನ್ನು ಯಕ್ಷನು ಕದಿಯದೇ ಮುಗುಳ್ನಕ್ಕು ಹೋದನು. ಆ ಚೂರ್ಣದ ಸಂಯೋಗದಿಂದ ತಾಮ್ರವು ಚಿನ್ನವಾಯಿತು.

೯೦. ಅಚ್ಚರಿಗೊಂಡು ಪ್ರಶ್ನಿಸಿದ ವಟುವಿಗೆ ಆ ರಾಜನು ಯಕ್ಷನ ವಿಷಯವನ್ನು ತಾನು ಕಂಡಂತೆಯೇ ಹೇಳಿದನು.

೯೦. ಆತನಿಂದ ಚೂರ್ಣಯುಕ್ತಿಯನ್ನು ಆಗಲೇ ಕಲಿತುಕೊಂಡ ರಾಜನು ವಟುವಿಗೆ ಮದುವೆಮಾಡಿಸಿ ಆತನನ್ನು ಕೃತಾರ್ಥನನ್ನಾಗಿಸಿದನು.

---

ಇತ್ಯುಕ್ತೇ ವಟುನಾ ತೇನ ತಾಮ್ರಮಾನಾಯಯನ್ ನೃಪಃ ।
ವಿಲೀನೇ ಚ ಕೃತೇ ತಸ್ಮಿನ್ ಸ ವಟುಶ್ಚೂರ್ಣಮಕ್ಷಿಪತ್ ॥ ೮೫

ಕ್ಷಿಪ್ಯಮಾಣಂ ಚ ತಚ್ಚೂರ್ಣಮದೃಶ್ಯಃ ಕೋಽಪ್ಯಪಾಹರತ್ ।
ಯಕ್ಷಸ್ತಂ ಚ ದದರ್ಶೈಕಃ ಸ ರಾಜಾ ತುಷ್ಟಪಾವಕಃ ॥ ೮೬

ಅಪ್ರಾಪ್ತಚೂರ್ಣಂ ತಾಮ್ರಂ ಚ ನ ಸುವರ್ಣೀಬಭೂವ ತತ್ ।
ಏವಂ ತ್ರಿಃ ಕುರ್ವತಸ್ತಸ್ಯ ವಟೋರ್ಮೋಘಃ ಶ್ರಮೋಽಭವತ್ ॥ ೮೭

ತತೋ ವಿಷಣ್ಣಾದಾದಾಯ ರಾಜಾ ತಸ್ಮಾದ್ವಟೋಃ ಸ್ವಯಮ್ ।
ಚೂರ್ಣಂ ವಿಲೀನೇ ಚಿಕ್ಷೇಪ ತಾಮ್ರೇ ತೇಜಸ್ವಿನಾಂ ವರಃ ॥ ೮೮

ತಸ್ಯ ತನ್ನಾಹರಚ್ಚೂರ್ಣಂ ಯಕ್ಷಃ ಸ್ಮಿತ್ವಾ ಯಯೌ ತು ಸಃ ।
ತೇನ ತಚ್ಚೂರ್ಣಸಂಯೋಗಾತ್ತಾಮ್ರಂ ಕನಕತಾಮಗಾತ್ ॥ ೮೯

ವಿಸ್ಮಿತಾಯ ತತಸ್ತಸ್ಮೈ ವಟವೇ ಪರಿಪೃಚ್ಛತೇ ।
ಸ ರಾಜಾ ಯಕ್ಷವೃತ್ತಾಂತಂ ಯಥಾದೃಷ್ಟಂ ಶಶಂಸ ತಮ್ ॥ ೯೦

ಶಿಕ್ಷಿತ್ವಾ ಚೂರ್ಣಯುಕ್ತಿಂ ಚ ವಟೋಸ್ತಸ್ಮಾತ್ತದೈವ ತಾಮ್ ।
ನೃಪಶ್ಚಕ್ರೇ ಕೃತಾರ್ಥಂ ತಂ ಕೃತದಾರಪರಿಗ್ರಹಮ್ ॥ ೯೦

೬೧. ಆ ಯುಕ್ತಿಯಿಂದಲೇ ಮಾಡಿದ ಚಿನ್ನದಿಂದ ತನ್ನ ಖಜಾನೆಯನ್ನು ಭರ್ತಿಮಾಡಿ ಕೊಂಡು ಬ್ರಾಹ್ಮಣರ ಬಡತನವನ್ನೆಲ್ಲ ನೀಗಿಸಿ ಅಂತಃಪುರಸ್ತ್ರೀಯರೊಂದಿಗೆ ಅತ್ಯುತ್ತಮ ಸುಖಗಳನ್ನು ಅನುಭವಿಸಿದನು.

೬೨. ಆದ್ದರಿಂದ ಭಗವಂತನೇ ಹೆದರಿಕೊಂಡಂತೆಯೋ ಅಥವಾ ಸಂತುಷ್ಟನಾದಂತೆಯೋ ತೀವ್ರಸತ್ವರ ಇಷ್ಟಾರ್ಥವನ್ನು ನೆರವೇರಿಸುತ್ತಾನೆ.

೬೩. "ಪ್ರಭುವೇ, ನಿನಗಿಂತ ಹೆಚ್ಚು ಪರಾಕ್ರಮಶಾಲಿಯೂ ದಾನಿಯೂ ಆದವರು ಬೇರೆ ಯಾರಿದ್ದಾರೆ ? ನೀನು ಆರಾಧಿಸಿದ ಶಿವನು ನಿನಗೆ ಮಗನನ್ನು ದಯಪಾಲಿಸುತ್ತಾನೆ. ಶೋಕ ಪಡಬೇಡ.'

೬೪. ಹೀಗೆ ರಾಣಿ ಅಲಂಕಾರ ಪ್ರಭೆಯ ಬಾಯಿಂದ ಬಂದ ಉದಾತ್ತವಾದ ಮಾತುಗಳನ್ನು ಕೇಳಿ ಹೇಮಪ್ರಭ ಮಹಾರಾಜನು ಆ ಮಾತುಗಳನ್ನು ನಂಬಿ ಸಂತೋಷಗೊಂಡನು.

೬೫. ಉತ್ಸಾಹ ತುಂಬಿದ ತನ್ನ ಹೃದಯವೇ ಸೂಚಿಸುತ್ತಿದೆಯೋ ಎಂಬಂತೆ ಶಿವನ ಆರಾಧನೆಯಿಂದ ಮಗನು ಹುಟ್ಟುವುದು ನಿಶ್ಚಿತವೆಂದು ಭಾವಿಸಿದನು.

೬೬. ಅನಂತರ ಮಾರನೆಯ ದಿನ ಸ್ನಾನಮಾಡಿ ರಾಣಿಯೊಂದಿಗೆ ಶಂಕರನನ್ನು ಪೂಜಿಸಿ, ಬ್ರಾಹ್ಮಣರಿಗೆ ಒಂಬತ್ತು ಕೋಟಿ ಹೊನ್ನುಗಳನ್ನು ದಾನಮಾಡಿ

---

ಭೇಜೇ ಚ ಪೂರ್ಣಕೋಷಶ್ರೀರ್ಹೇಮ್ನಾ ತದ್ಯುಕ್ತಿಜನ್ಮನಾ ।
ಸಾವರೋಧೋಽಸಮಾನ್ ಭೋಗಾನ್ ಅದರಿದ್ರೀಕೃತದ್ವಿಜಃ ॥ ೬೧

ತದೇವಂ ಭೀತ ಇವ ವಾ ಪರಿತುಷ್ಟ ಇವಾಥವಾ ।
ದದಾತಿ ತೀವ್ರಸತ್ತ್ವಾನಾಮಿಷ್ಟಮೀಶ್ವರ ಏವ ಹಿ ॥ ೬೨

ತ್ವತ್ತಶ್ಚ ಧೀರಸತ್ತ್ವೋಽನ್ಯಃ ಕೋಽಸ್ತಿ ದಾತಾ ಚ ದೇವ ತತ್ ।
ದಾಸ್ಯತ್ಯಾರಾಧಿತಃ ಶಂಭುಃ ಪುತ್ರಂ ತೇ ಮಾ ಶುಚಂ ಕೃಥಾಃ ॥ ೬೩

ಇತ್ಯುದಾರಮಲಂಕಾರಪ್ರಭಾದೇವೀಮುಖಾದ್ವಚಃ ।
ಶ್ರುತ್ವಾ ಹೇಮಪ್ರಭೋ ರಾಜಾ ಶ್ರದ್ದಧೇ ಚ ತುತೋಷ ಚ ॥ ೬೪

ಮೇನೇ ಚ ತನಯಪ್ರಾಪ್ತಿಂ ಗೌರೀಶಾರಾಧನಾದ್ ಧ್ರುವಮ್ ।
ಸೂಚಿತಾಂ ಹೃದಯೇನೈವ ನಿಜೇನೋತ್ಸಾಹಶಾಲಿನಾ ॥ ೬೫

ತತೋಽನ್ಯೇದ್ಯುಃ ಸದೇವೀಕಃ ಸ್ನಾತೋಽಭ್ಯರ್ಚಿತಶಂಕರಃ ।
ನವಕಾಂಚನಕೋಟೀಶ್ಚ ವಿಪ್ರೇಭ್ಯಃ ಪ್ರತಿಪಾದ್ಯ ಸಃ ॥ ೬೬

೯೭-೯೮. ಮಗನನ್ನು ಪಡೆಯಲೋಸುಗ ಶಿವನ ಎದುರು ಉಪವಾಸವಿದ್ದು ತಪಸ್ಸು ಮಾಡಿದನು. ತಪಸ್ಸು ಮಾಡುತ್ತಿದ್ದ ಅವನು ತನ್ನ ದೇಹವನ್ನು ತ್ಯಜಿಸಿ ಈಶ್ವರನನ್ನು ಸಂತೋಷಗೊಳಿಸಲು ತೀರ್ಮಾನಿಸಿ ಅನಾಯಾಸವಾಗಿ ಕ್ಷೀರಸಮುದ್ರವನ್ನು ಆಟದಂತೆ ದಾಟಿದ ಪಾರ್ವತೀ ಪತಿಯನ್ನು ಹೀಗೆ ಸ್ತುತಿಸಲಾರಂಭಿಸಿದನು.

೯೯. "ಶರಣಾಗತನಿಗೆ ಉಪಮನ್ಯುವಾದ, ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಕಾರಣನಾದ ನಿನಗೆ ನಮಸ್ಕಾರ. ಆಕಾಶ ಮುಂತಾದ ಎಂಟು ಭಿನ್ನ ದೇಹಗಳಾಗಿ ವಿಶ್ವವನ್ನೇ ಧರಿಸಿರುವ ಗೌರೀಶನಿಗೆ ನಮಸ್ಕಾರ.

೧೦೦. ಸದಾ ಅರಳಿರುವ ಹೃದಯಕಮಲದಲ್ಲಿ ಮಲಗಿರುವ ನಿನಗೆ ನಮಸ್ಕಾರ. ನಿರ್ಮಲವಾದ ಮಾನಸದಲ್ಲಿ ವಾಸಿಸುವ ರಾಜಹಂಸವಾದ ಶಂಭುವಿಗೆ ನಮಸ್ಕಾರ.

೧೦೧-೧೦೨. ದಿವ್ಯ ಪ್ರಕಾಶವುಳ್ಳವನಾದ, ನಿರ್ಮಲನಾದ, ಜಲಾತ್ಮಕನಾದ ದೋಷಮುಕ್ತರಾದವರಿಗೆ ಕಂಡುಬರುವವನಾದ, ಉಮಾಸಹಿತನಾದ, ಅತ್ಯದ್ಭುತನಾದ ಅರ್ಧದೇಹದಲ್ಲಿ ಮಡದಿಯನ್ನು ಧರಿಸಿರುವವನಾದ, ಕೇವಲಬ್ರಹ್ಮಚಾರಿಯಾದ, ಸ್ವೇಚ್ಛೆಯಂತೆ ಜಗತ್ತನ್ನು ಸೃಜಿಸಿರುವವನಾದ ಹಾಗೂ ವಿಶ್ವಾತ್ಮಕನಾದ ನಿನಗೆ ನಮಸ್ಕಾರ.

---

ತನಯಾರ್ಥಂ ತಪಸ್ತೇಪೇ ನಿರಾಹಾರೋ ಹರಾಗ್ರತಃ ।
ದೇಹಸ್ತ್ಯಕ್ತೋ ಮಯಾ ಶರ್ವಸ್ತೋಷಿತೋ ವೇತಿ ನಿಶ್ಚಿತಃ ॥ ೯೭

ತಪಸ್ಥಶ್ಚೇತಿ ತುಷ್ಟಾವ ವರದಂ ಗಿರಿಜಾಪತಿಮ್ ।
ಹೇಲಾವಿತೀರ್ಣದುಗ್ಧಾಬ್ಧಿಂ ಪ್ರಪನ್ನಾಯೋಪಮನ್ಯವೇ ॥ ೯೮

ನಮಸ್ತೇಽಸ್ತು ಜಗತ್ಸರ್ಗಸ್ಥಿತಿಸಂಹಾರಹೇತವೇ ।
ಗೌರೀಶ ತತ್ತದ್ ವ್ಯೋಮಾದಿಭೇದಭಿನ್ನಾಷ್ಟಮೂರ್ತಯೇ ॥ ೯೯

ನಮಸ್ತೇ ಸತತೋತ್ಫುಲ್ಲಹೃತ್ಪುಶೇಶಯಶಾಯಿನೇ ।
ವಿಶುದ್ಧಮಾನಸಾವಾಸಕಲಹಂಸಾಯ ಶಂಭವೇ ॥ ೧೦೦

ನಮೋ ದಿವ್ಯಪ್ರಕಾಶಾಯ ನಿರ್ಮಲಾಯ ಜಲಾತ್ಮನೇ ।
ಪ್ರಕ್ಷೀಣದೋಷೈರ್ದೃಶ್ಯಾಯ ಸೋಮಾಯಾತ್ಯದ್ಭುತಾಯ ತೇ ॥ ೧೦೧

ದೇಹಾರ್ಧಧೃತಕಾಂತಾಯ ಕೇವಲಬ್ರಹ್ಮಚಾರಿಣೇ ।
ಇಚ್ಛಾನಿರ್ಮಿತವಿಶ್ವಾಯ ನಮೋ ವಿಶ್ವಮಯಾಯ ತೇ ॥ ೧೦೨

೧೦೩. ಹೀಗೆ ಸ್ತುತಿಸುತ್ತ ಮೂರು ರಾತ್ರಿ ಉಪವಾಸವಿದ್ದ ಆ ರಾಜನಿಗೆ ಗಿರಿಜಾಪತಿಯು ಕನಸಿನಲ್ಲಿ ಕಾಣಿಸಿಕೊಂಡು ಹೀಗೆ ನುಡಿದನು.

೧೦೪. 'ರಾಜನೇ ಎದ್ದೇಳು. ನಿನಗೆ ವಂಶೋದ್ಧಾರಕನಾದ ವೀರನಾದ ಮಗನು ಹುಟ್ಟಲಿದ್ದಾನೆ ಮತ್ತು ಪಾರ್ವತಿಯ ಅನುಗ್ರಹದಿಂದ ಒಬ್ಬ ಉತ್ತಮ ಕನ್ಯೆಯೂ ಕೂಡ ಜನಿಸಲಿದ್ದಾಳೆ.

೧೦೫. ಅವಳು ನಿಮ್ಮ ಚಕ್ರವರ್ತಿಯಾಗಲಿರುವ ತೇಜೋನಿಧಿಯಾದ ನರವಾಹನದತ್ತನ ಮಹಾರಾಣಿಯಾಗಲಿದ್ದಾಳೆ.'

೧೦೬. ಇಷ್ಟು ಹೇಳಿ ಶಿವನು ಅಂತರ್ಧಾನನಾದನು. ಅನಂತರ ರಾತ್ರಿ ಕಳೆದ ಮೇಲೆ ವಿದ್ಯಾಧರರ ಒಡೆಯನಾದ ಆ ಹೇಮಪ್ರಭನು ಸಂತಸದಿಂದ ಎದ್ದನು.

೧೦೭. ಅವನು ತನ್ನ ಕನಸನ್ನು ಹೇಳಿ ಅಲಂಕಾರಪ್ರಭೆಯನ್ನು ಆನಂದಗೊಳಿಸಿದನು. ಅವಳು ಕೂಡ ತನಗೂ ಪಾವರ್ತಿಗೂ ಅಂತೆಯೇ ಕನಸಿನಲ್ಲಿ ನಡೆದ ಮಾತುಕತೆಗಳನ್ನು ಹೇಳಿದಳು.

೧೦೮. ರಾಜನು ಅಲ್ಲಿಂದ ಎದ್ದು, ಸ್ನಾನಮಾಡಿ, ಅನಂತರ ಶಿವನನ್ನು ಪೂಜಿಸಿ, ಪಾರಣೆಯನ್ನು ಮಾಡಿ ದಾನವನ್ನು ನೀಡಿ ಉತ್ಸವವನ್ನು ಆಚರಿಸಿದನು.

೧೦೯. ಕೆಲವು ದಿನಗಳು ಕಳೆದ ಮೇಲೆ ರಾಜಮಹಿಷಿ ಅಲಂಕಾರಪ್ರಭೆಯು ಗರ್ಭಿಣಿಯಾದಳು.

---

ಏವಂ ಕೃತಸ್ತುತಿಂ ತಂ ಚ ರಾಜಾನಂ ಗಿರಿಜಾಪತಿಃ ।
ತ್ರಿರಾತ್ರೋಪೋಷಿತಂ ಸ್ವಪ್ನೇ ಸಾಕ್ಷಾದ್ಭೂಯೇದಮಬ್ರವೀತ್ ॥ ೧೦೩

ಉತ್ತಿಷ್ಠ ರಾಜನ್ ಭಾವೀ ತೇ ವೀರೋ ವಂಶಧರಃ ಸುತಃ ।
ಗೌರೀಪ್ರಸಾದಾತ್ ಕನ್ಯಾಪಿ ಭವಿಷ್ಯತ್ಯುತ್ತಮಾ ತವ ॥ ೧೦೪

ನರವಾಹನದತ್ತಸ್ಯ ಯುಷ್ಮಾಕಂ ಚಕ್ರವರ್ತಿನಃ ।
ಭವಿಷ್ಯತೋ ಭವಿತ್ರೀ ಯಾ ಮಹಿಷೀ ಮಹಸಾಂ ನಿಧೇಃ ॥ ೧೦೫

ಇತ್ಯುಕ್ತ್ವಾಂತರ್ಹಿತೇ ಶರ್ವೇ ಸೋಽಥ ವಿದ್ಯಾಧರೇಶ್ವರಃ ।
ಹೇಮಪ್ರಭಃ ಪ್ರಬುಬುಧೇ ಪ್ರಹೃಷ್ಟೋ ರಜನೀಕ್ಷಯೇ ॥ ೧೦೬

ಆನಂದಯದಲಂಕಾರಪ್ರಭಾಂ ಸ್ವಪ್ನಂ ನಿವೇದ್ಯ ಸಃ ।
ಗೌರ್ಯಾ ಸ್ವಪ್ನೇ ತಥೈವೋಕ್ತಾಂ ಭಾರ್ಯಾಂ ಸಂವಾದಶಂಸಿನೀಮ್ ॥ ೧೦೭

ಉತ್ಥಾಯ ಚ ತತಃ ಸ್ನಾತಃ ಸ ರಾಜಾರ್ಚಿತಧೂರ್ಜಟಿಃ ।
ಚಕಾರ ದತ್ತದಾನಃ ಸನ್ನುತ್ಸವಂ ಕೃತಪಾರಣಃ ॥ ೧೦೮

ದಿವಸೇಷ್ವಥ ಯಾತೇಷು ದೇವೀ ಕತಿಪಯೇಷು ಸಾ ।
ಅಲಂಕಾರಪ್ರಭಾ ತಸ್ಯ ರಾಜ್ಞೋ ಗರ್ಭಮಧಾರಯತ್ ॥ ೧೦೯

೧೧೦–೧೧೧. ಮಧುವಿನ ಪರಿಮಳವನ್ನು ಸೂಸುವ, ಚಂಚಲವಾದ ದುಂಬಿಗಳು ಓಡಾಡುವ, ಬಿಳಿಗೆಂಪು ಬಣ್ಣದ ಕಮಲವನ್ನು ಹೋಲುವ ಮುಖದಿಂದಲೂ, ಉತ್ತಮವಾದ ಗರ್ಭಿಣೀ ಲಕ್ಷಣಗಳಿಂದಲೂ ಉತ್ತಮಶಿಶುವು ಹುಟ್ಟುವುದನ್ನು ಸೂಚಿಸುತ್ತಾ ಅವಳು ಪತಿಯನ್ನು ಆನಂದಗೊಳಿಸಿದಳು.

೧೧೨. ಸಹಜವಾದ ಬೆಳಕುಗಳಿಂದ ಹೊಳೆಯುತ್ತಿದ್ದ ಆ ಹೆರಿಗೆಯ ಮನೆಯು ಆ ಮಗುವು ಹುಟ್ಟಿದ್ದರಿಂದ ಸಿಂದೂರವನ್ನು ಹೋಲುವ ಕೆಂಪುಬಣ್ಣಕ್ಕೆ ತಿರುಗಿತು.

೧೧೩. ತಂದೆಯಾದ ಆ ಮಹಾರಾಜನು ಶತ್ರುಗಳ ವಂಶಕ್ಕೆ ಭಯಹುಟ್ಟಿಸಲಿರುವ ಆ ಮಗುವಿಗೆ ಅಶರೀರವಾಣಿಯು ಸೂಚಿಸಿದಂತೆ ವಜ್ರಪ್ರಭನೆಂಬ ಹೆಸರನ್ನು ಇಟ್ಟನು.

೧೧೪. ಆ ಬಾಲಕನು ಪರ್ವ ಕಾಲದ ಚಂದ್ರನಂತೆ ಕಲೆಗಳಿಂದ ಸ್ವಲ್ಪ ಸ್ವಲ್ಪವಾಗಿ ಮೈತುಂಬಿಕೊಳ್ಳುತ್ತಾ, ಕುಲಸಮುದ್ರದ ಅಭಿವೃದ್ಧಿಗೆಂದು ಕ್ರಮೇಣ ಬೆಳೆಯಲಾರಂಭಿಸಿದನು.

೧೧೫. ಅನಂತರ ಸ್ವಲ್ಪ ಸಮಯದಲ್ಲಿಯೇ ರಾಣಿ ಅಲಂಕಾರಪ್ರಭೆಯು ಮತ್ತೆ ಗರ್ಭವತಿಯಾದಳು.

---

ಆನಂದಯಾಮಾಸ ಚ ತಂ ಮುಖೇನ ಮಧುಗಂಧಿನಾ ।
ಲೋಲನೇತ್ರಾಲಿನಾ ಕಾಂತಂ ಪಂಕಜೇನೇವ ಪಾಂಡುನಾ ॥ ೧೧೦

ಆಖ್ಯಾತಶ್ಲಾಘ್ಯಜನ್ಮಾನಮುದಾರೈರ್ಗರ್ಭದೋಹದೈಃ ।
ಅಸೂತ ತನಯಂ ಕಾಲೇ ದ್ಯೌರರ್ಕಮಿವ ಸಾ ತತಃ ॥ ೧೧೧

ಯೇನ ಜಾತೇನ ಸಹಜೈಸ್ತೇಜೋಭಿರವಭಾಸಿತಮ್ ।
ಸಿಂದೂರಾರುಣತಾಂ ನೀತಮಪಿ ತಜ್ಜಾತವಾಸಕಮ್ ॥ ೧೧೨

ಪಿತಾ ಚ ತಂ ಶಿಶುಂ ರಾಜಾ ಶತ್ರುಗೋತ್ರಭಯಾವಹಮ್ ।
ದಿವ್ಯವಾಗುಪದಿಷ್ಟೇನ ನಾಮ್ನಾ ವಜ್ರಪ್ರಭಂ ವ್ಯಧಾತ್ ॥ ೧೧೩

ತತಃ ಸ ವವೃಧೇ ಬಾಲಃ ಪಾರ್ವಣೇಂದುರಿವ ಕ್ರಮಾತ್ ।
ಕಲಾಭಿಃ ಪೂರ್ಯಮಾಣಃ ಸನ್ ವೃದ್ಧಿಹೇತೋಃ ಕುಲಾಂಬುಧೇಃ ॥ ೧೧೪

ಅಥಾಚಿರಾತ್ ಪುನಸ್ತಸ್ಯ ರಾಜ್ಞೋ ಹೇಮಪ್ರಭಸ್ಯ ಸಾ ।
ಅಲಂಕಾರಪ್ರಭಾ ರಾಜ್ಞೀ ಸಗರ್ಭಾ ಸಮಪದ್ಯತ ॥ ೧೧೫

೧೧೬. ಗರ್ಭಿಣಿಯಾದ ಆಕೆಯು ವಿಶೇಷ ಕಾಂತಿಯಿಂದ ಕಂಗೊಳಿಸುತ್ತಾ ಚಿನ್ನದ ಪೀಠದ ಮೇಲೆ ಕುಳಿತು ನಿಜಕ್ಕೂ ಅಂತಃಪುರ ಸ್ತ್ರೀಯರಲ್ಲೆಲ್ಲ ರತ್ನವಾಗಿದ್ದಳು.

೧೧೭. ಬಸುರಿಯ ಬಯಕೆಯನ್ನು ಹೊಂದಿದ್ದ ಅವಳು ವಿಜ್ಞಾನದಿಂದ ತಯಾರುಮಾಡಿದ್ದ ಪದ್ಮ ವಿಮಾನದಲ್ಲಿ ಅಂತರಿಕ್ಷದಲ್ಲಿ ವಿಹರಿಸಿದಳು.

೧೧೮. ಹೆರಿಗೆಯ ಸಮಯವು ಬರಲಾಗಿ ಆಕೆಗೆ ಹೆಣ್ಣು ಶಿಶುವೊಂದು ಜನಿಸಿತು. ಅವಳು ಹುಟ್ಟಿದ್ದು ಪಾರ್ವತಿಯ ಅನುಗ್ರಹದಿಂದ ಎಂದು ಹೇಳಿದರೆ ಅಷ್ಟು ವರ್ಣನೆಯು ಸಾಕು.

೧೧೯. ಆಗ ಈಕೆಯು ನರವಾಹನದತ್ತನ ಮಡದಿಯಾಗಲಿರುವವಳು ಎಂದು ಪರಶಿವನ ಮಾತಿಗೆ ಅನುಗುಣವಾಗಿದ್ದ ಅಶರೀರವಾಣಿಯು ಕೇಳಿಸಿತು.

೧೨೦. ಆಮೇಲೆ ರಾಜನು ಪುತ್ರನ ಜನನಕ್ಕೂ ಇದಕ್ಕೂ ಕಿಂಚಿತ್ತೂ ಭೇದ ಮಾಡದೇ ಉತ್ಸವವನ್ನಾಚರಿಸಿ ಮಗಳಿಗೆ ರತ್ನ ಪ್ರಭೆ ಎಂದು ಹೆಸರಿಟ್ಟನು.

೧೨೧. ತನ್ನ ವಿದ್ಯೆಯಿಂದ ಸುಸಂಸ್ಕೃತಳಾದ ಆಕೆಯು ತಂದೆಯ ಮನೆಯಲ್ಲಿ ಬೆಳೆದಳು. ದಿಕ್ಕು ದಿಕ್ಕುಗಳಲ್ಲಿ ಅವಳ ಕಾಂತಿಯು ಹರಡಿತು.

೧೨೨. ಆನಂತರ ಆ ರಾಜನು ತನ್ನ ಮಗ ವಜ್ರಪ್ರಭನು ಕೀರ್ತಿಶಾಲಿಯಾಗಿದ್ದನ್ನು ಕಂಡು ಅವನಿಗೆ ಮದುವೆ ಮಾಡಿ ಆತನಿಗೆ ಯುವರಾಜ ಪಟ್ಟವನ್ನು ಕಟ್ಟಿದನು.

---

ಸಗರ್ಭಾ ಚಾಶ್ರಯೋದ್ಭೂತಸವಿಶೇಷದ್ಯುತಿಸ್ತಥಾ ।
ಸತ್ಯಂ ಹೇಮಾಸನಾರೂಢಾ ಭೇಜೇಽಂತಃಪುರರತ್ನತಾಮ್ ॥ ೧೧೬

ವಿದ್ಯಾಕಲ್ಪಿತಸತ್ಪದ್ಮವಿಮಾನೇನ ನಭಸ್ತಲೇ ।
ಬಭ್ರಾಮ ಚ ತಥಾಭೂತವಿಲಸದ್ಗರ್ಭದೋಹದಾ ॥ ೧೧೭

ಪ್ರಾಪ್ತೇ ಚ ಸಮಯೇ ತಸ್ಯಾಃ ದೇವ್ಯಾಃ ಕನ್ಯಾಜನಿಷ್ಟ ಸಾ ।
ಪರ್ಯಾಪ್ತಂ ವರ್ಣನಂ ಯಸ್ಯಾ ಜನ್ಮ ಗೌರೀಪ್ರಸಾದತಃ ॥ ೧೧೮

ನರವಾಹನದತ್ತಸ್ಯ ಭಾರ್ಯೇಯಂ ಭಾವಿನೀತಿ ವಾಕ್ ।
ತದಾಶ್ರಾವಿ ಹರಾದೇಶವಚಃಸಂವಾದಿನೀ ದಿವಃ ॥ ೧೧೯

ತತೋ ರಾಜಾ ಸುತೋತ್ಪತ್ತಿನಿರ್ವಿಶೇಷಕೃತೋತ್ಸವಃ ।
ತಾಂ ಸ ಹೇಮಪ್ರಭೋಽಕಾರ್ಷೀನ್ನಾಮ್ನಾ ರತ್ನಪ್ರಭಾಂ ಸುತಾಮ್ ॥ ೧೨೦

ಸ್ವವಿದ್ಯಾಸಂಸ್ಕೃತಾ ಸಾ ಚ ತಸ್ಯ ರತ್ನಪ್ರಭಾ ಪಿತುಃ ।
ಅವರ್ಧತ ಗೃಹೇ ದಿಕ್ಷು ಪ್ರಕಾಶಸ್ತೂದಪದ್ಯತ ॥ ೧೨೧

ತತಃ ಸ ರಾಜಾ ತಂ ವರ್ಮಹರಂ ವಜ್ರಪ್ರಭಂ ಸುತಮ್ ।
ಕೃತದಾರಕ್ರಿಯಂ ಕೃತ್ವಾ ಯೌವರಾಜ್ಯೇಽಭಿಷಿಕ್ತವಾನ್ ॥ ೧೨೨

೧೨೩. ರಾಜನು ರಾಜ್ಯಭಾರವನ್ನು ಅವನಿಗೆ ವಹಿಸಿ ನಿಶ್ಚಿಂತನಾದನು. ಆದರೆ ಅವನ ಮನಸ್ಸಿನಲ್ಲಿ ಆಗ ಮಗಳ ಮದುವೆಯ ಚಿಂತೆ ಉಂಟಾಯಿತು.

೧೨೪. ಒಮ್ಮೆ ಮದುವೆಗೆ ತಕ್ಕವಳಾದ ತನ್ನ ಮಗಳು ಹತ್ತಿರದಲ್ಲಿ ಕುಳಿತಿದ್ದಾಗ ಅವಳನ್ನು ನೋಡಿ ಸಮೀಪದಲ್ಲಿಯೇ ಇದ್ದ ಮಹಾರಾಣಿಯಾದ ಅಲಂಕಾರಪ್ರಭೆಯನ್ನು ಕುರಿತು ಹೇಳಿದನು.

೧೨೫–೧೨೬. "ರಾಣಿಯೇ ನೋಡು ! ಮನೆಗೇ ಅಲಂಕಾರದಂತಿದ್ದರೂ, ವಿನಯಶಾಲಿನಿಯಾಗಿದ್ದರೂ ವಿದ್ಯಾವತಿಯಾದರೂ, ರೂಪಯೌವನಗಳಿಂದ ಕೂಡಿದ್ದರೂ, ಮೂರೂ ಲೋಕಗಳಲ್ಲೂ ದೊಡ್ಡವರಿಗೂ ಸಹ ಹೆಣ್ಣುಮಗಳೆಂದರೆ ದೊಡ್ಡ ದುಃಖವೇ ಸರಿ. ಇಂಥ ಪರಿಸ್ಥಿತಿಗೆ ಧಿಕ್ಕಾರವಿರಲಿ. ಏಕೆಂದರೆ ಇನ್ನೂ ಗಂಡು ಸಿಕ್ಕದ ಕಾರಣ ಈ ರತ್ನ ಪ್ರಭೆಯು ನನಗೆ ನೋವಾಗಿ ಪರಿಣಮಿಸಿದ್ದಾಳೆ.'

೧೨೭–೧೨೮. "ಈಕೆಯು ನರವಾಹನದತ್ತನ ಮಡದಿಯಾಗಲಿರುವಳು ಎಂದು ದೇವತೆಗಳು ಹೇಳಿರುವಾಗ ನಮ್ಮ ಚಕ್ರವರ್ತಿಯಾಗಲಿರುವ ಅವನಿಗೇ ಏಕೆ ಮದುವೆ ಮಾಡಿಕೊಡಬಾರದು ? ಎಂದು ರಾಣಿಯು ಹೇಳಿದ್ದಕ್ಕೆ ರಾಜನೆಂದನು. "ಆತನನ್ನು ಪತಿಯನ್ನಾಗಿ ಪಡೆಯುವ ಕನ್ಯೆಯು ಧನ್ಯೆಯೆಂಬುದೇನೋ ನಿಜವೇ.

---

ವಿನ್ಯಸ್ತರಾಜ್ಯಭಾರಶ್ಚ ತಸ್ಮಿನ್ನಾಸೀತ್ಸ ನಿರ್ವೃತಃ ।
ಸುತಾವಿವಾಹಚಿಂತಾ ತು ತಸ್ಯೈಕಾಭೂತ್ತದಾ ಹೃದಿ ॥ ೧೨೩

ಏಕದಾ ಸೋಽಂತಿಕಾಸೀನಾಂ ಪ್ರದೇಯಾಂ ವೀಕ್ಷ್ಯ ತಾಂ ಸುತಾಮ್ ।
ರಾಜಾಬ್ರವೀದಲಂಕಾರಪ್ರಭಾಂ ದೇವೀಂ ಸಮೀಪಗಾಮ್ ॥ ೧೨೪

ಕುಲಾಲಂಕಾರಭೂತಾಪಿ ಪಶ್ಯ ದೇವಿ ಜಗತ್‌ತ್ರಯೇ ।
ಕನ್ಯಾ ನಾಮ ಮಹದ್ದುಃಖಂ ಧಿಗಹೋ ಮಹತಾಮಪಿ ॥ ೧೨೫

ವಿನೀತಾಪ್ಯಾಪ್ತವಿದ್ಯಾಪಿ ರೂಪಯೌವನವತ್ಯಪಿ ।
ರತ್ನಪ್ರಭಾ ವರಪ್ರಾಪ್ತ್ಯಾ ವಿನೈಷಾ ಯದ್ದುನೋತಿ ಮಾಮ್ ॥ ೧೨೬

ನರವಾಹನದತ್ತಸ್ಯ ಭಾರ್ಯೋಕ್ತಾ ದೈವತೈರಿಯಮ್ ।
ತತ್ಕಿಂ ನ ದೀಯತೇ ತಸ್ಮೈ ಭಾವ್ಯಸ್ಮಚ್ಚಕ್ರವರ್ತಿನೇ ॥ ೧೨೭

ಇತಿ ಚೋಕ್ತಸ್ತಯಾ ದೇವ್ಯಾ ಸ ರಾಜಾ ಪುನರಬ್ರವೀತ್ ।
ಬಾಢಂ ಸಾ ಕನ್ಯಕಾ ಧನ್ಯಾ ಯಾ ತಂ ವರಮವಾಪ್ನುಯಾತ್ ॥ ೧೨೮

೧೨೯. ಆತನು ಇಲ್ಲಿ ಮನ್ಮಥನ ಅವತಾರವೇ ಸರಿ. ಆದರಿನ್ನೂ ಅವನಿಗೆ ದಿವ್ಯತ್ವವು ಸಿದ್ಧಿಸಿಲ್ಲ. ಅದಕ್ಕಾಗಿ ಅವನು ದಿವ್ಯವಿದ್ಯೆಗಳನ್ನು ಪಡೆಯುವ ಸಮಯವನ್ನು ನಾನು ನಿರೀಕ್ಷಿಸುತ್ತಿದ್ದೇನೆ.'

೧೩೦. ಮನ್ಮಥನ ಮೋಹಗೊಳಿಸುವ ಮಂತ್ರಗಳಂತಿದ್ದ ತಂದೆಯ ಈ ಮಾತುಗಳು ರತ್ನಪ್ರಭೆಯ ಕಿವಿಗಳಿಗೂ ಬಿದ್ದುವು.

೧೩೧. ಅಷ್ಟರಿಂದಲೇ ಅವಳು ಭ್ರಾಂತಳಾದಂತೆ, ಆವೇಶಗೊಂಡವಳಂತೆ, ಎಚ್ಚರವಿಲ್ಲದವಳಂತೆ ಹಾಗೂ ಚಿತ್ರದಲ್ಲಿ ಬರೆಯಲ್ಪಟ್ಟವಳಂತೆ ಆ ವರನಿಂದ ಆಕರ್ಷಿತಳಾದಳು.

೧೩೨. ಅನಂತರ ತಾಯಿತಂದೆಗಳಿಗೆ ಹೇಗೋ ವಂದಿಸಿ, ತನ್ನ ಅಂತಃಪುರಕ್ಕೆ ಹೋಗಿ ಚಿಂತಾಮಗ್ನಳಾಗಿ ಎಷ್ಟೋ ಹೊತ್ತಿನ ಬಳಿಕ ಹೇಗೋ ನಿದ್ರೆಯನ್ನು ಮಾಡಿದಳು.

೧೩೩. "ಮಗಳೇ, ನಾಳೆ ಒಳ್ಳೆಯ ದಿನವಾಗಿದೆ. ಆದ್ದರಿಂದ ನೀನು ಕೌಶಾಂಬೀ ನಗರಕ್ಕೆ ಹೋಗಿ ನಿನ್ನ ಪತಿಯಾಗಲಿರುವ ವತ್ಸರಾಜನ ಮಗನನ್ನು ಕಾಣಬೇಕು.

೧೩೪. ಆಮೇಲೆ ನಿನ್ನ ತಂದೆಯು ತಾನೇ ಅವನನ್ನು ಈ ಊರಿಗೆ ಕರೆತಂದು ನಿಮ್ಮಿಬ್ಬರ ಮದುವೆಯನ್ನು ಮಾಡಿಕೊಡಲಿರುವನು.'

೧೩೫. ಎಂದು ಗೌರಿಯು ಕನಸಿನಲ್ಲಿ ಕಾಣಿಸಿಕೊಂಡು ಕರುಣೆಯಿಂದ ಅಪ್ಪಣೆ ಮಾಡಿದಳು. ಬೆಳಿಗ್ಗೆ ಎದ್ದು ರತ್ನಪ್ರಭೆಯು ತನ್ನ ಕನಸನ್ನು ತಾಯಿಗೆ ತಿಳಿಸಿದಳು.

---

ಸ ಹಿ ಕಾಮವತಾರೋಽತ್ರ ಕಿಂ ತು ನಾದ್ಯಾಪಿ ದಿವ್ಯತಾಮ್ ।
ಪ್ರಾಪ್ತಸ್ತೇನ ಮಯಾ ತಸ್ಯ ವಿದ್ಯಾಪ್ರಾಪ್ತಿಃ ಪ್ರತೀಕ್ಷ್ಯತೇ ॥ ೧೨೯

ಇತ್ಯೇವಂ ವದತಸ್ತಸ್ಯ ಸದ್ಯಸ್ತೈರ್ವಚನೈಃ ಪಿತುಃ ।
ಕರ್ಣಪ್ರವಿಷ್ಟೈಃ ಕಂದರ್ಪಮೋಹಮಂತ್ರಪದೋಪಮೈಃ ॥ ೧೩೦

ಭ್ರಾಂತೇವಾವಿಷ್ಟಚಿತ್ತೇವ ಸುಪ್ತೇವ ಲಿಖಿತೇವ ಚ ।
ಅಭೂದ್ರತ್ನಪ್ರಭಾ ತೇನ ಹೃತಚಿತ್ತಾ ವರೇಣ ಸಾ ॥ ೧೩೧

ತತಃ ಕಥಂಚಿತ್ ಪಿತರೌ ಪ್ರಣಮ್ಯಾಂತಃಪುರಂ ನಿಜಮ್ ।
ಗತ್ವಾ ಚಿಂತಾತುರಾ ನಿದ್ರಾಂ ಚಿರೇಣ ಕಥಮಪ್ಯಗಾತ್ ॥ ೧೩೨

ಪ್ರಾತಃ ಶುಭದಿನಂ ಪುತ್ರಿ ತತ್ಸ ವತ್ಸೇಶ್ವರಾತ್ಮಜಃ ।
ದ್ರಷ್ಟವ್ಯಃ ಸ್ವವರೋ ಗತ್ವಾ ಕೌಶಾಂಬೀಂ ನಗರೀಂ ತ್ವಯಾ ॥ ೧೩೩

ತತಶ್ಚ ಸ್ವಪುರೇಽಮುಷ್ಮಿನ್ನಾನೀಯ ತ್ವತ್ಪಿತಾ ಸ್ವಯಮ್ ।
ತವ ತಸ್ಯ ಚ ಕಲ್ಯಾಣಿ ವಿವಾಹಂ ಸಂವಿಧಾಸ್ಯತಿ ॥ ೧೩೪

ಇತಿ ಸ್ವಪ್ನೇಽಥ ತಾಂ ಗೌರೀ ಸಾನುಕಂಪಾ ಸಮಾದಿಶತ್ ।
ಪ್ರಬುಧ್ಯ ಸಾ ಚ ತಂ ಸ್ವಪ್ನಂ ಪ್ರಾತರ್ಮಾತ್ರೇ ನ್ಯವೇದಯತ್ ॥ ೧೩೫

೧೩೬. ಅನಂತರ ರತ್ನಪ್ರಭೆಯು ತಾಯಿಯ ಅಪ್ಪಣೆ ಪಡೆದು. ತನ್ನ ವಿದ್ಯೆಯ ಪ್ರಭಾವದಿಂದ ವರನು ಉದ್ಯಾನದಲ್ಲಿ ಇರುವುದನ್ನು ತಿಳಿದು, ಅವನನ್ನು ಕಾಣಲು ತನ್ನ ಊರಿನಿಂದ ಹೊರಟಳು.

೧೩೭. ಅವನನ್ನು ಕಂಡು "ಆರ್ಯಪುತ್ರ ತವಕದಿಂದ ಮುಹೂರ್ತಮಾತ್ರದಲ್ಲಿ ಈಗ ಇಲ್ಲಿಗೆ ಬಂದಿರುವ ನಾನೇ ಆ ರತ್ನಪ್ರಭೆ' ಎಂದಳು.

೧೩೮–೧೩೯. ತನ್ನ ಮಾಧುರ್ಯದಿಂದ ಅಮೃತವನ್ನು ತಿರಸ್ಕರಿಸಿದುತಿದ್ದ ಆಕೆಯ ಆ ಮಾತನ್ನು ಕೇಳಿ, ಕಣ್ಣಿಗೆ ಅಮೃತವಾಗಿದ್ದ ಆ ವಿದ್ಯಾಧರಿಯ ರೂಪವನ್ನೂ ಕಂಡು ನರವಾಹನದತ್ತನು "ಬ್ರಹ್ಮನು ನನ್ನ ಮೈಯನ್ನೆಲ್ಲ ಕಿವಿ ಕಣ್ಣುಗಳಿಂದಲೇ ಏಕೆ ಮಾಡಲಿಲ್ಲ' ಎಂದು ಒಳಗೊಳಗೇ ನಿಂದಿಸಿಕೊಂಡನು.

೧೪೦. "ಸುಂದರಾಂಗಿಯೇ ! ಪ್ರೀತಿಯಿಂದ ನೀನೇ ಅರಸಿಕೊಂಡು ಬಂದಿರುವ ನಾನು ಇಂದು ಧನ್ಯ. ನಾನು ಹುಟ್ಟಿದ್ದು ಸಾರ್ಥಕವಾಯಿತು' ಎಂದು ಅವಳಿಗೆ ಹೇಳಿದನು.

೧೪೧. ಹೀಗೆ ಇವರೀರ್ವರೂ ನೂತನ ಪ್ರೇಮದಿಂದ ಪರಸ್ಪರ ಮಾತನಾಡಿಕೊಳ್ಳುತ್ತಿದ್ದಾಗ ಇದ್ದಕ್ಕಿದ್ದಂತೆ ಆಕಾಶದಲ್ಲಿ ವಿದ್ಯಾಧರರ ಸೈನ್ಯವು ಕಾಣಿಸಿಕೊಂಡಿತು.

೧೪೨. "ನಮ್ಮ ತಂದೆಯು ಇಲ್ಲಿಗೆ ಬಂದರು' ಎಂದು ರತ್ನಪ್ರಭೆಯು ಕೂಡಲೇ ನುಡಿಯಲು ಹೇಮ ಪ್ರಭ ರಾಜನು ತನ್ನ ಮಗನೊಂದಿಗೆ ಆಕಾಶದಿಂದ ಧರೆಗಿಳಿದನು.

---

ತತಃ ಸಾ ತದನುಜ್ಞಾತಾ ಬುದ್ಧ್ವಾ ವಿದ್ಯಾಪ್ರಭಾವತಃ ।
ಉದ್ಯಾನಸ್ಥಂ ವರಂ ದ್ರಷ್ಟುಂ ಪ್ರಾವರ್ತತ ನಿಜಾತ್ ಪುರಾತ್ ॥ ೧೩೬

ತಾಮಾರ್ಯಪುತ್ರ ಮಾಮೇತಾಂ ವೇತ್ಥ ರತ್ನಪ್ರಭಾಮಿತಿ ।
ಪ್ರಾಪ್ತಾಮುತ್ಕಾಂ ಕ್ಷಣೇನಾದ್ಯ ವಿತ್ಥ ಯೂಯಮತಃ ಪರಮ್ ॥ ೧೩೭

ಏತತ್ತಸ್ಯಾ ವಚಃ ಶ್ರುತ್ವಾ ಮಾಧುರ್ಯನ್ಯಕ್ಕೃತಾಮೃತಮ್ ।
ವಿಲೋಕ್ಯ ನೇತ್ರಪೀಯೂಷಂ ವಿದ್ಯಾಧರ್ಯಾ ವಪುಶ್ಚ ತತ್ ॥ ೧೩೮

ನರವಾಹನದತ್ತೋಽಂತರ್ವಿಧಾತಾರಂ ನಿನಿಂದ ಸಃ ।
ಶ್ರೋತ್ರನೇತ್ರಮಯಂ ಕೃತ್ಸ್ನಮಕರೋತ್ ಕಿಂ ನ ಮಾಮಿತಿ ॥ ೧೩೯

ಜಗಾದ ತಾಂ ಚ ಧನ್ಯೋಽಹಂ ಜನ್ಮಾದ್ಯ ಸಫಲಂ ಮಮ ।
ಯೋಽಹಮೇವಂ ಸ್ವಯಂ ತನ್ವಿ ಸ್ನೇಹಾದಭಿಸೃತಸ್ತ್ವಯಾ ॥ ೧೪೦

ಇತ್ಯನ್ಯೋನ್ಯನವಪ್ರೇಮಕೃತಸಂಲಾಪಯೋಸ್ತಯೋಃ ।
ಅಕಸ್ಮಾದ್ದದೃಶೇ ತತ್ರ ವಿದ್ಯಾಧರಬಲಂ ದಿವಿ ॥ ೧೪೧

ತಾತೋಽಯಮಾಗತೋಽತ್ರೇತಿ ದ್ರಾಗ್ರತ್ನಪ್ರಭಯೋದಿತೇ ।
ರಾಜಾ ಹೇಮಪ್ರಭೋ ವ್ಯೋಮ್ನಃ ಸಪುತ್ರೋಽವತತಾರ ಸಃ ॥ ೧೪೨

೧೪೩–೪೪. ಮಗನಾದ ವಜ್ರಪ್ರಭನೊಂದಿಗೆ ರಾಜಕುಮಾರನ ಬಳಿಗೆ ಬಂದಾಗ ಅವನು ಆದರಾತಿಥ್ಯಗಳನ್ನು ಮಾಡಿ ಸ್ವಾಗತಿಸಿದನು. ಪರಸ್ಪರ ಶಿಷ್ಟಾಚಾರವನ್ನು ಪಾಲಿಸುತ್ತಾ ಅವರು ಇರುವಷ್ಟರಲ್ಲಿ ಅದನ್ನು ತಿಳಿದ ವತ್ಸರಾಜನು ಮಂತ್ರಿಗಳೊಂದಿಗೆ ಆ ಕೂಡಲೇ ಅಲ್ಲಿಗೆ ಬಂದನು.

೧೪೫ ಆತಿಥ್ಯ ನೀಡಿದ ವತ್ಸರಾಜನಿಗೆ ಹೇಮಪ್ರಭನು ರತ್ನಪ್ರಭೆಯು ನುಡಿದ ಸಂಗತಿಯನ್ನೆಲ್ಲ ತಿಳಿಸಿದನು.

೧೪೬ "ನಾನು ವಿದ್ಯೆಯ ಪ್ರಭಾವದಿಂದ ಮಗಳು ಇಲ್ಲಿಗೆ ಬಂದಿರುವುದನ್ನು ಮತ್ತು ಇಲ್ಲಿನ ಸಮಾಚಾರವೆಲ್ಲವನ್ನೂ ಬಲ್ಲೆನು.

೧೪೭ ............ ಇನ್ನು ಮುಂದೆ ಇಲ್ಲಿ ಇಂತಹುದೇ ಇನ್ನೊಂದು ಚಕ್ರವರ್ತಿ ವಿಮಾನವು ಸಿದ್ಧವಾಗಲಿದೆ.[1]

೧೪೮. ಆದ್ದರಿಂದ ದಯವಿಟ್ಟು ಒಪ್ಪಿಗೆ ನೀಡು. ಸದ್ಯದಲ್ಲಿಯೇ ನಿನ್ನ ಈ ಪುತ್ರ ಯುವರಾಜ ನರವಾಹನದತ್ತನು ವಧುವಾದ ರತ್ನಪ್ರಭೆಯೊಡನೆ ಇಲ್ಲಿಗೆ ಹಿಂತಿರುಗಿ ಬರುವುದನ್ನು ಕಾಣಲಿರುವೆ'

---

ಉಪಾಯಯೌ ಚ ಪುತ್ರೇಣ ಸಹ ವಜ್ರಪ್ರಭೇಣ ಸಃ ।
ನರವಾಹನದತ್ತಂ ತಂ ವಿಹಿತಸ್ವಾಗತಾದರಮ್ ॥ ೧೪೩

ಅನ್ಯೋನ್ಯರಚಿತಾಚಾರಾ ಯಾವತ್ತಿಷ್ಠಂತಿ ತೇ ಕ್ಷಣಾತ್ ।
ತಾವತ್ತತ್ರಾಯಯೌ ಬುದ್ಧ್ವಾ ವತ್ಸರಾಜಃ ಸಮಂತ್ರಿಕಃ ॥ ೧೪೪

ಕೃತಾತಿಥ್ಯನಿಧಿಂ ತಂ ಚ ನೃಪಂ ಹೇಮಪ್ರಭೋಽಥ ಸಃ ।
ಯಥಾ ರತ್ನಪ್ರಭೋಕ್ತಂ ತಂ ವೃತ್ತಾಂತಂ ಸಮಬೋಧಯತ್ ॥ ೧೪೫

ಜಗಾದ ಚ ಮಯಾ ಚೇಯಂ ಜ್ಞಾತ್ವಾ ವಿದ್ಯಾಪ್ರಭಾವತಃ ।
ಇಹಾಗತಾ ಸುತಾ ಸರ್ವಂ ವೃತ್ತಾಂತಂ ಚಾತ್ರ ವೇದ್ಮ್ಯಹಮ್ ॥ ೧೪೬

——————————————————————————।
ಚಕ್ರವರ್ತಿವಿಮಾನಂ ಹಿ ಭಾವ್ಯಗ್ರೇಽಮುಷ್ಯ ತಾದೃಶಮ್ ॥ ೧೪೭

ಅನುಮನ್ಯಸ್ವ ತದ್ ದ್ರಕ್ಷ್ಯಸ್ಯಚಿರಾದೇತಮಾತ್ಮಜಮ್ ।
ರತ್ನಪ್ರಭಾವಧೂಯುಕ್ತಂ ಯುವರಾಜಮಿಹಾಗತಮ್ ॥ ೧೪೮

---

1. ೧೪೭ನೆಯ ಶ್ಲೋಕದ ಪೂರ್ವಾರ್ಧ ಈ ಆವೃತ್ತಿಯಲ್ಲಿ ಲಭ್ಯವಿಲ್ಲ.

೧೪೯–೧೫೧. ಹೀಗೆ ಹೇಮಪ್ರಭನು ವತ್ಸೇಶನನ್ನು ಪ್ರಾರ್ಥಿಸಿಕೊಂಡು ತನ್ನ ಇಷ್ಟದಂತೆ ಅನುಮತಿ ಪಡೆದು, ತನ್ನ ವಿದ್ಯೆಯಿಂದ ಮಗನೊಂದಿಗೆ ವಿಮಾನವನ್ನು ರಚಿಸಿ, ಸಂಕೋಚದಿಂದ ಮುಖ ತಗ್ಗಿಸಿದ್ದ ನರವಾಹನದತ್ತನನ್ನು ರತ್ನಪ್ರಭೆಯೊಡನೆ ಗೋಮುಖ ಮತ್ತಿತರರ ಜೊತೆ ಅದರಲ್ಲಿ ಕೂರಿಸಿಕೊಂಡು, ವತ್ಸರಾಜನು ಜೊತೆಗೆ ಕಳುಹಿಸಿಕೊಟ್ಟ ಯೌಗಂಧರಾಯಣನನ್ನೂ ಸಹ ತನ್ನ ಊರಾದ ಕಾಂಚನಶೃಂಗಕ್ಕೆ ಕರೆದೊಯ್ದನು.

೧೫೨. ಅಲ್ಲಿಗೆ ತಲುಪಿದ ನರವಾಹನದತ್ತನು ಚಿನ್ನದಿಂದ ಮಾಡಿದ್ದ, ಚಿನ್ನದ ಪ್ರಾಕಾರಗಳಿಂದ ಬೆಳಗುತ್ತಿದ್ದ, ಮಾವನ ಆ ಊರನ್ನು ನೋಡಿದನು.

೧೫೩. ಅದು ಕಿರಣ ಜಾಲಗಳು ಹೊರ ಹೊಮ್ಮುತ್ತಿದ್ದುದರಿಂದ ಎಲ್ಲೆಡೆ ಅಲಂಕೃತವಾಗಿದ್ದಂತೆ ಅಳಿಯನ ಮೇಲಣ ಪ್ರೀತಿಯ ಸಡಗರದಿಂದೆಂಬಂತೆ ಅನೇಕ ತೋಳುಗಳನ್ನು ಸ್ವಾಗತಕ್ಕಾಗಿ ಚಾಚಿದಂತೆ ಕಂಡುಬರುತ್ತಿತ್ತು.

೧೫೪. ಅಲ್ಲಿ ಹೇಮಪ್ರಭನು ವಿಜೃಂಭಣೆಯ ಸಮಾರಂಭವನ್ನು ಏರ್ಪಡಿಸಿ, ಕ್ಷೀರಸಮುದ್ರವು ವಿಷ್ಣುವಿಗೆ ಲಕ್ಷ್ಮಿಯನ್ನು ಕೊಟ್ಟಂತೆ ಶಾಸ್ತ್ರೋಕ್ತವಾಗಿ ತನ್ನ ಮಗಳಾದ ರತ್ನಪ್ರಭೆಯನ್ನು ಅವನಿಗೆ ಕೊಟ್ಟನು.

---

ಏವಂ ವತ್ಸೇಶಮಭ್ಯರ್ಥ್ಯ ತೇನಾನುಮತವಾಂಛಿತಃ ।
ಸಪುತ್ರಃ ಕಲ್ಪಯಿತ್ವಾ ತದ್ವಿಮಾನಂ ನಿಜವಿದ್ಯಯಾ ॥ ೧೪೯

ತತ್ರಾರೋಪ್ಯ ತ್ರಪಾನಮ್ರಮುಖಂ ರತ್ನಪ್ರಭಾಯುತಮ್ ।
ನರವಾಹನದತ್ತಂ ತಂ ಸಹಿತಂ ಗೋಮುಖಾದಿಭಿಃ ॥ ೧೫೦

ಯೌಗಂಧರಾಯಣೇನಾಪಿ ಪಿತ್ರಾನುಪ್ರೇಷಿತೇನ ಸಃ ।
ಹೇಮಪ್ರಭೋ ನಿನಾಯ ಸ್ವಂ ಪುರಂ ಕಾಂಚನಶೃಂಗಕಮ್ ॥ ೧೫೧

ನರವಾಹನದತ್ತಶ್ಚ ದದರ್ಶ ಪ್ರಾಪ್ಯ ತತ್ಪುರಮ್ ।
ಶ್ವಾಶುರಂ ಕಾಂಚನಮಯಂ ಹೇಮಪ್ರಾಕಾರಭಾಸುರಮ್ ॥ ೧೫೨

ರಶ್ಮಿಪ್ರತಾನೈರ್ನಿರ್ಯದ್ಭಿರಲಂಕೃತಮಿವಾಭಿತಃ ।
ಪ್ರಸಾರಿತಾನೇಕಭುಜಂ ಜಾಮಾತೃ ಪ್ರೀತಿಸಂಭ್ರಮಾತ್ ॥ ೧೫೩

ತತ್ರ ತಾಂ ವಿಧಿವತ್ತಸ್ಮೈ ರಾಜಾ ಹೇಮಪ್ರಭೋ ದದೌ ।
ರತ್ನಪ್ರಭಾಂ ಮಹಾರಂಭೋ ಹರಯೇಽಬ್ಧಿರಿವ ಶ್ರಿಯಮ್ ॥ ೧೫೪

೧೫೫–೧೫೬. ಆಗ ಅವನಿಗೆ ಹೊಳೆಯುತ್ತಿದ್ದ ರತ್ನಗಳ ರಾಶಿಯನ್ನೇ ರಾಜನು ನೀಡಿದನು. ಹಣವನ್ನೇ ಸುರಿಸುತ್ತಿದ್ದ ಆ ರಾಜನ ನಗರದಲ್ಲಿ ವಿವಾಹದ ಅನೇಕ ಅಗ್ನಿಗಳಿಂದ ಕಂಗೊಳಿಸುತ್ತಿದ್ದ ಹಾಗೂ ಬಾವುಟಗಳಿಂದ ಶೋಭಿಸುತ್ತಿದ್ದ ಮನೆಗಳು ಕೂಡ ಹೊಸ ಬಟ್ಟೆಗಳನ್ನು ಪಡೆದಿವೆಯೆಂಬಂತೆ ವಿಶೇಷವಾಗಿ ಕಂಗೊಳಿಸಿದುವು.

೧೫೭. ವಿವಾಹ ಮಂಗಲವು ಮುಗಿದಿದ್ದ ನರವಾಹನದತ್ತನಾದರೋ ರತ್ನಪ್ರಭೆಯೊಂದಿಗೆ ದಿವ್ಯ ಸುಖಗಳನ್ನು ಅನುಭವಿಸುತ್ತ ಅಲ್ಲಿ ಇದ್ದುಬಿಟ್ಟನು.

೧೫೮. ಆಕೆಯ ವಿದ್ಯೆಯ ಬಲದಿಂದ ಆಕಾಶವನ್ನೇರಿ ಉದ್ಯಾನ, ಕೊಳ, ದೇವಾಲಯಗಳನ್ನು ದರ್ಶಿಸುತ್ತಾ ಆತನು ಸುಖಿಸಿದನು.

೧೫೯. ಹೀಗೆ ವತ್ಸರಾಜನ ಮಗನಾದ ನರವಾಹನದತ್ತನು ತನ್ನ ಮಡದಿಯೊಂದಿಗೆ ಆ ವಿದ್ಯಾಧರಾಧಿಪತಿಯ ಊರಿನಲ್ಲಿ ಕೆಲಕಾಲವಿದ್ದು ಯೌಗಂಧರಾಯಣನ ಅಭಿಪ್ರಾಯದಂತೆ ತನ್ನ ಸ್ವಂತ ಸ್ಥಳಕ್ಕೆ ಹಿಂತಿರುಗಲು ಮನಸ್ಸು ಮಾಡಿದನು.

೧೬೦. ಆಗ ಅತ್ತೆಯು ಪ್ರಸ್ಥಾನ ಮಂಗಳವನ್ನು ನೆರವೇರಿಸಿದಳು. ಮಾವನು ಮತ್ತೆ ಮಂತ್ರಿಗಳೊಂದಿಗೆ ಅವನನ್ನು ಗೌರವಿಸಿದನು. ಅವನ ಮಗನೊಂದಿಗೆ ಮತ್ತೆ ಅದೇ ವಿಮಾನವನ್ನೇರಿ ಮಡದಿಯೊಡನೆ ನರವಾಹದತ್ತನು ಹೊರಟನು.

---

ಪ್ರಾಯಚ್ಛದ್ರತ್ನರಾಶೀಂಶ್ಚ ತದಾ ತಸ್ಮೈ ಸ ಭಾಸ್ವರಾನ್ ।
ಪ್ರದೀಪ್ತಾನೇಕವೈವಾಹವಹ್ನಿವಿಭ್ರಮಶಾಲಿನಃ ॥ ೧೫೫

ಸೋತ್ಸವಸ್ಯ ಪುರೇ ಚಾಸ್ಯ ರಾಜ್ಞೋ ವಿತ್ತಾನಿ ವರ್ಷತಃ ।
ಲಬ್ಧವಸ್ತ್ರಾ ಇವ ಬಭುಃ ಸಪತಾಕಾ ಗೃಹಾ ಅಪಿ ॥ ೧೫೬

ನರವಾಹನದತ್ತಶ್ಚ ನಿರ್ವ್ಯೂಢೋದ್ವಾಹಮಂಗಲಃ ।
ದಿವ್ಯಭೋಗಭುಗತ್ರಾಸ್ತ ಸ ರತ್ನಪ್ರಭಯಾ ಸಮಮ್ ॥ ೧೫೭

ರೇಮೇ ಚ ದಿವ್ಯಾನ್ಯುದ್ಯಾನವಾಪೀದೇವಕುಲಾನಿ ಸಃ ।
ಪಶ್ಯಂಸ್ತಯಾ ಸಮಾರುಹ್ಯ ತದ್ವಿದ್ಯಾಬಲತೋ ನಭಃ ॥ ೧೫೮

ಏವಂ ಚ ತತ್ರ ಕತಿಚಿದ್ದಿವಸಾನುಷಿತ್ವಾ
ವಿದ್ಯಾಧರಾಧಿಪಪುರೇ ಸ ವಧೂಸಹಾಯಃ ।
ವತ್ಸೇಶ್ವರಸ್ಯ ತನಯಃ ಸ್ವಪುರೀಂ ಪ್ರಯಾತುಂ
ಯೌಗಂಧರಾಯಣಮತೇನ ಮತಿಂ ಚಕಾರ ॥ ೧೫೯

ಶ್ವಶ್ರ್ವಾ ತತೋ ರಚಿತಮಂಗಲಸಂವಿಧಾನಃ
ಸಂಪೂಜಿತಃ ಸಸಚಿವಃ ಶ್ವಶುರೇಣ ಭೂಯಃ ।
ತೇನೈವ ಪುತ್ರಸಹಿತೇನ ಸಹ ಪ್ರತಸ್ಥೇ
ಕಾಂತಾಸಖಸ್ತದಧಿರುಹ್ಯ ಪುನರ್ವಿಮಾನಮ್ ॥ ೧೬೦

೧೬೧. ವತ್ಸರಾಜನು ಹೆಮ್ಮೆಯಿಂದ ಉತ್ಸವವನ್ನು ಏರ್ಪಡಿಸಲು ತಾಯಿಯ ಕಣ್ಣಿಗೆ ಅಮೃತದ ಪ್ರವಾಹವಾಗಿದ್ದ ನರವಾಹನದತ್ತನು, ಬೇಗನೆ ತಮ್ಮೂರನ್ನು ತಲುಪಿ. ಹೇಮಪ್ರಭ ಅವನ ಮಗ ಹಾಗೂ ಸಹಯಾತ್ರಿಕರ ಜೊತೆ ರತ್ನಪ್ರಭೆಯೊಂದಿಗೆ ತನ್ನ ಪಟ್ಟಣವನ್ನು ಪ್ರವೇಶಿಸಿದನು.

೧೬೨. ವಾಸವದತ್ತೆಯೊಂದಿಗೆ ವತ್ಸೇಶ್ವರನೂ ಸಹ ತಮ್ಮ ಕಾಲಿಗೆ ಬಿದ್ದ ಮಗ ಮತ್ತು ಸೊಸೆಯನ್ನು ಅಭಿನಂದಿಸಿ ಹೊಸ ಬಂಧುಗಳಾದ ಹೇಮಪ್ರಭನನ್ನೂ ಅವನ ಮಗನನ್ನೂ ತನ್ನ ಐಶ್ವರ್ಯಕ್ಕೆ ಅನುಗುಣವಾಗಿ ಧಾರಾಳವಾಗಿ ಗೌರವಿಸಿದನು.

೧೬೩–೧೬೪. ಆನಂತರ ವಿದ್ಯಾಧರಾಧಿಪತಿಯಾದ ಹೇಮಪ್ರಭನು ವತ್ಸರಾಜ ಮತ್ತಿತರಿಂದ ಬೀಳ್ಕೊಂಡು ಆಕಾಶವನ್ನೇರಿ ತನ್ನ ಮಗನೊಂದಿಗೆ ಸ್ವಂತ ಊರಿಗೆ ಹೋಗಲು ನರವಾಹನದತ್ತನು ರತ್ನಪ್ರಭೆ ಮತ್ತು ಮದನಮಂಚುಕೆ ಹಾಗೂ ತನ್ನ ಗೆಳೆಯರೊಂದಿಗೆ ಆ ದಿನವನ್ನು ಸುಖದಿಂದ ಕಳೆದನು.

ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ

ಕಥಾಸರಿತ್ಸಾಗರದ

ರತ್ನಪ್ರಭಾ ಲಂಬಕದಲ್ಲಿ ಮೊದಲ ತರಂಗವು ಮಗಿಯಿತು.

---

ಪ್ರಾಪ್ಯಾಶು ತಾಂ ಪ್ರಮುದನಿರ್ಭರವತ್ಸರಾಜ–
ಬದ್ಧೋತ್ಸವಾಂ ಸ ಜನನೀ ನಯನಾಮೃತೌಘಃ ।
ರತ್ನಪ್ರಭಾಂ ದಧದಥ ಸ್ವಪುರೀಂ ವಿವೇಶ
ಹೇಮಪ್ರಭೇಣ ಸಸುತೇನ ಸಹಾನುಗೈಶ್ಚ ॥ ೧೬೧

ವತ್ಸೇಶ್ವರೋಽಪಿ ಸಹ ವಾಸವದತ್ತಯಾ ತಂ
ಪಾದಾನತಂ ಸಮಭಿನಂದ್ಯ ಸುತಂ ವಧೂಂಚ ।
ಹೇಮಪ್ರಭಂ ಸತನಯಂ ವಿಭವಾನುರೂಪಂ
ಸಂಬಂಧಿನಂ ನವಮಪೂಜಯದೂರ್ಜಿತಶ್ರೀಃ ॥ ೧೬೨

ಅಥ ವಿದ್ಯಾಧರರಾಜೇ ತಸ್ಮಿನ್ನಾಪೃಚ್ಛ್ಯ ವತ್ಸರಾಜಾದೀನ್ ।
ಉತ್ಪತ್ಯ ನಭಃ ಸಸುತೇ ಗತವತಿ ಹೇಮಪ್ರಭೇ ಸ್ವಪುರಮ್ ॥ ೧೬೩

ನರವಾಹನದತ್ತೋಽಸೌ ರತ್ನಪ್ರಭಯಾ ಸಮದನಮಂಚುಕಯಾ ।
ಸಹ ಸುಖಿತಸ್ತದನೈಷೀದ್ದಿವಸಂ ಸಖಿಭಿರ್ನಿಜೈರ್ಯುಕ್ತಃ ॥ ೧೬೪

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ರತ್ನಪ್ರಭಾಲಂಬಕೇ ಪ್ರಥಮಸ್ತರಂಗಃ

---

## ಎರಡನೆಯ ತರಂಗ

೧–೨. ಹೀಗೆ ನೂತನಪತ್ನಿಯಾದ ವಿದ್ಯಾಧರಿ ರತ್ನಪ್ರಭೆಯನ್ನು ಪಡೆದು ಅವಳೊಂದಿಗೆ ಸ್ವಗೃಹದಲ್ಲಿ ಇರುತ್ತಿರುವಾಗ ಮಾರನೆಯ ದಿನ ಬೆಳಿಗ್ಗೆ ನವರವಾಹನದತ್ತನನ್ನು ನೋಡಲು ಗೋಮುಖನೇ ಮುಂತಾದ ಮಂತ್ರಿಗಳು ಮನೆಯ ಬಾಗಿಲ ಬಳಿಗೆ ಬಂದರು.

೩. ದ್ವಾರಪಾಲಕಿಯು ಅವರನ್ನು ಕ್ಷಣಕಾಲ ತಡೆದು ಒಳಬಂದು ಹೇಳಿ ಆಮೇಲೆ ಅವರನ್ನು ಆದರದಿಂದ ಬರಮಾಡಿಕೊಂಡಾಗ ರತ್ನಪ್ರಭೆಯು ಆ ದ್ವಾರಪಾಲಕಿಗೆ ಹೇಳಿದಳು.

೪. ಇಲ್ಲಿಗೆ ಬರಲು ಬಯಸುವ ಇವರಿಗೆ ಇನ್ನೆಂದೂ ಬಾಗಿಲಲ್ಲಿ ತಡೆಯೊಡ್ಡಬಾರದು. ಆರ್ಯಪುತ್ರನ ಈ ಗೆಳೆಯರು ನಮ್ಮ ಶರೀರವೇ ಸರಿ.

೫. ಅಂತಃಪುರದೊಳಗೆ ಇಂತಹ ಸುರಕ್ಷೆಯು ನನಗೆ ಇಷ್ಟವಾಗುವುದಿಲ್ಲ ಎಂದು ಅವಳಿಗೆ ಹೇಳಿ ತನ್ನ ಪತಿಯನ್ನು ಕುರಿತು ಹೀಗೆ ಹೇಳಿದಳು:

---

## ದ್ವಿತೀಯಸ್ತರಂಗಃ

ಏವಂ ವಿದ್ಯಾಧರೀಂ ಭಾರ್ಯಾಂ ಭವ್ಯಾಂ ರತ್ನಪ್ರಭಾಂ ನವಾಮ್ ।
ತಸ್ಯ ಪ್ರಾಪ್ತವತೋಽನ್ಯೇದ್ಯುಸ್ತದ್ವೇಶ್ಮನಿ  ತಯಾ ಸಹ ॥ ೧
ನರವಾಹನದತ್ತಸ್ಯ ಸ್ಥಿತಸ್ಯ ಪ್ರಾತರಾಯಯುಃ ।
ದರ್ಶನಾರ್ಥಮುಪದ್ವಾರಂ ಸಚಿವಾ ಗೋಮುಖಾದಯಃ ॥ ೨
ದ್ವಾಃಸ್ಥಯಾ ಕ್ಷಣರುದ್ಧೇಷು ತೇಷ್ವತ್ರಾವೇದಿತೇಷ್ವಥ ।
ಪ್ರವಿಷ್ಟೇಷ್ವಾದೃತೇಷ್ವೇತಾಂ ದ್ವಾಃಸ್ಥಾಂ ರತ್ನಪ್ರಭಾಭ್ಯಧಾತ್ ॥ ೩
ದ್ವಾರಮೇಷಾಂ ನ ರೋದ್ಧವ್ಯಮಿಹ ಪ್ರವಿಶತಾಂ ಪುನಃ ।
ಆರ್ಯಪುತ್ರವಯಸ್ಯಾನಾಂ ಸ್ವಂ ಶರೀರಮಮೀ ಹಿ ನಃ ॥ ೪
ರಕ್ಷಾ ಚಾಂತಃಪುರೇಷ್ವೀದೃಙ್ ನೈವಮೇತನ್ಮತಂ ಮಮ ।
ಇತಿ ದ್ವಾಃ ಸ್ಥಾಮುದಿತ್ವಾ ಸಾ ಸ್ವಪತಿಂ ತಮಥಾಬ್ರವೀತ್ ॥ ೫

೬ ಆರ್ಯಪುತ್ರನೇ ! ಏನೋ ಸಂದರ್ಭ ಬಂದಿತೆಂದು ನಿನಗೆ ಇದನ್ನು ಹೇಳುತ್ತಿದ್ದೇನೆ ಕೇಳು. ಹೆಂಗಸರನ್ನು ಹತೋಟಿಯಲ್ಲಿಡುವುದು ಒಂದು ನೀತಿ ಮಾತ್ರ ಎಂದು ನಾನು ತಿಳಿದಿದ್ದೇನೆ.

೭ ಆದ್ದರಿಂದ ಅಸೂಯೆ ಅಥವಾ ಮೋಹದಿಂದ ಏನನ್ನೂ ಮಾಡಬಾರದು. ಅತ್ಯಧಿಕವಾದ ನೈತಿಕತೆಯು ಮಾತ್ರ ಕುಲಸ್ತ್ರೀಯರನ್ನು ಕಾಪಾಡಬಲ್ಲದು.

೮ ಚಂಚಲೆಯರನ್ನು ರಕ್ಷಿಸಲು ಬಹುಶಃ ಬ್ರಹ್ಮನೂ ಸಮರ್ಥನಲ್ಲ. ಉಕ್ಕೇರುತ್ತಿರುವ ನದಿಯನ್ನೂ ಕೊಬ್ಬಿದ ಹೆಣ್ಣನ್ನೂ ನಿಯಂತ್ರಿಸಲು ಯಾರಿಗೆ ಸಾಧ್ಯ ?

೯. ಇದಕ್ಕೆ ಸಂಬಂಧಿಸಿದಂತೆ ಕಥೆಯೊಂದನ್ನು ಹೇಳುತ್ತೇನೆ ಕೇಳಿ. ಸಮುದ್ರದ ನಡುವಿನಲ್ಲಿ ಇಲ್ಲಿಯೇ ರತ್ನಕೂಟವೆಂಬ ದೊಡ್ಡ ದ್ವೀಪವೊಂದಿದೆ.

೧೦. ಅಲ್ಲಿ ಹಿಂದೆ ವಿಷ್ಣುವಿನ ಪರಮಭಕ್ತನಾದ, ರತ್ನಾಧಿಪತಿಯೆಂಬ ಸಾರ್ಥಕವಾದ ಹೆಸರುಳ್ಳ ಅತ್ಯಂತ ಉತ್ಸಾಹಶಾಲಿ ರಾಜನೊಬ್ಬನಿದ್ದನು.

೧೧. ಆತನು ಭೂಮಂಡಲದ ಎಲ್ಲ ರಾಜರ ಮೇಲೆ ವಿಜಯವನ್ನು ಪಡೆದು ಎಲ್ಲ ರಾಜಕುಮಾರಿಯರನ್ನು ಹೆಂಡತಿಯರನ್ನಾಗಿ ಪಡೆಯಬೇಕೆಂದು ವಿಷ್ಣುವನ್ನು ಆರಾಧಿಸಿ ಘೋರತಪಸ್ಸನ್ನು ಮಾಡಿದನು.

---

ಆರ್ಯಪುತ್ರ ಪ್ರಸಂಗೇಣ ವದಾಮಿ ತವ ತಚ್ಛೃಣು ।
ನೀತಿಮಾತ್ರಮಹಂ ಮನ್ಯೇ ಸ್ತ್ರೀಣಾಂ ರಕ್ಷಾನಿಯಂತ್ರಣಮ್ ॥ ೬

ಈರ್ಷ್ಯಾಕೃತೋಽಥವಾ ಮೋಹಃ ಕಾರ್ಯಂ ತೇನ ನ ಕಿಂಚನ ।
ಮಹತ್ತರೇಣ ರಕ್ಷ್ಯಂತೇ ಶೀಲೇನೈವ ಕುಲಸ್ತ್ರಿಯಃ ॥ ೭

ಧಾತಾಪಿ ನ ಪ್ರಭುಃ ಪ್ರಾಯಶ್ಚಪಲಾನಾಂ ತು ರಕ್ಷಣೇ ।
ಮತ್ತಾ ನದೀ ಚ ನಾರೀಚ ನಿಯಂತುಂ ಕೇನ ಪಾರ್ಯತೇ ॥ ೮

ತಥಾ ಚ ಶ್ರೂಯತಾಮತ್ರ ಕಥಾಂ ವಃ ಕಥಯಾಮ್ಯಹಮ್ ।
ಅಸ್ತೀಹ ರತ್ನಕೂಟಾಖ್ಯಂ ದ್ವೀಪಂ ಮಧ್ಯೇಽಂಬುಧೇರ್ಮಹತ್ ॥ ೯

ತತ್ರ ರಾಜಾ ಮಹೋತ್ಸಾಹಃ ಪುರಾ ಪರಮವೈಷ್ಣವಃ ।
ಯಥಾರ್ಥೇನಾಭಿಧಾನೇನ ರತ್ನಾಧಿಪತಿರಿತ್ಯಭೂತ್ ॥ ೧೦

ಸ ರಾಜಾ ವಿಜಯಂ ಪೃಥ್ವ್ಯಾಃ ಸರ್ವರಾಜಾತ್ಮಜಾಸ್ತಥಾ ।
ಭಾರ್ಯಾಃ ಪ್ರಾಪ್ತುಂ ತಪಸ್ತೇಪೇ ವಿಷ್ಣೋರಾರಾಧನಂ ಮಹತ್ ॥ ೧೧

೧೨. ಆತನ ತಪಸ್ಸಿನಿಂದ ಸಂತುಷ್ಟನಾದ ಭಗವಂತನು ಪ್ರತ್ಯಕ್ಷನಾಗಿ ಅವನಿಗೆ ಅಪ್ಪಣೆಮಾಡಿದನು "ಎಲೈ ರಾಜನೇ ! ಏಳು, ನನಗೆ ಸಂತೋಷವಾಗಿದೆ. ನನ್ನ ಈ ಮಾತನ್ನು ಕೇಳು.

೧೩. ಮುನಿಯ ಶಾಪಕ್ಕೆ ಒಳಗಾಗಿರುವ ಗಂಧರ್ವನೊಬ್ಬನು ಕಲಿಂಗರಾಜ್ಯದಲ್ಲಿ ಶ್ವೇತರಶ್ಮಿ ಎಂದು ಹೆಸರುಳ್ಳ ಬಿಳಿಯ ಆನೆಯಾಗಿ ಹುಟ್ಟಿದ್ದಾನೆ.

೧೪. ಹಿಂದಿನ ಜನ್ಮದ ತಪಸ್ಸಿನ ಸಿದ್ಧಿಯ ಕಾರಣದಿಂದಲೂ ನನ್ನ ಮೇಲಣ ಭಕ್ತಿಯಿಂದಲೂ ಅವನು ಜ್ಞಾನಿಯೂ, ಆಕಾಶಗಾಮಿಯೂ ಆಗಿದ್ದಾನೆ. ಅವನಿಗೆ ಪೂರ್ವಜನ್ಮದ ನೆನಪೂ ಉಂಟಾಗಿದೆ.

೧೫. ನಾನು ಕನಸಿನಲ್ಲಿ ಅಪ್ಪಣೆ ನೀಡಿರುವಂತೆ ಆ ಆನೆಯು ನಿನ್ನ ಬಳಿ ಬಂದು ಗಗನಮಾರ್ಗದಲ್ಲಿ ಹೋಗುವ ನಿನ್ನ ವಾಹನವಾಗಿ ಮಾರ್ಪಡುತ್ತದೆ.

೧೬–೧೭. ಆ ಬಿಳಿಯ ಆನೆಯನ್ನು, ಐರಾವತವನ್ನು ಇಂದ್ರ ಸೇರಿದಂತೆ, ನೀನು ಏರಿ ಕುಳಿತು ಆಕಾಶಮಾರ್ಗದಲ್ಲಿ ಯಾವ ಯಾವ ರಾಜನನ್ನು ಎದುರಿಸುವೆಯೋ ಅವರೆಲ್ಲರೂ ದಿವ್ಯಾನುಭಾವನಾದ ನಿನಗೆ ಹೆದರಿ, ಕನಸಿನಲ್ಲಿ ನಾನೇ ಅಪ್ಪಣೆಕೊಟ್ಟಿರುವ ಕಾರಣ, ಕನ್ಯಾದಾನ ರೂಪದ ಕಾಣಿಕೆಯನ್ನು, ಕೊಡುತ್ತಾರೆ.

೧೮. ಹೀಗೆ ಇಡಿಯ ಭೂಮಂಡಲವನ್ನೂ ಅಂತಃಪುರಗಳನ್ನೂ ಗೆಲ್ಲುವ ನೀನು ಎಂಬತ್ತು ಸಾವಿರ ರಾಜ ಕನ್ಯಾಮಣಿಯರನ್ನು ಪಡೆಯಲಿದ್ದೀಯೆ.

---

ಸಂತುಷ್ಟಸ್ತಪಸಾ ಸಾಕ್ಷಾದ್ ಭಗವಾನಾದಿದೇಶ ತಮ್ ।
ಉತ್ತಿಷ್ಠ ರಾಜಂಸ್ತುಷ್ಟೋಽಸ್ಮಿ ತದಿದಂ ವಚ್ಮಿ ತೇ ಶೃಣು ॥ ೧೨
ಕಲಿಂಗವಿಷಯೇ ಕೋಽಪಿ ಗಂಧರ್ವೋ ಮುನಿಶಾಪತಃ ।
ಸಮುತ್ಪನ್ನೋ ಗಜಃ ಶ್ವೇತಃ ಶ್ವೇತರಶ್ಮಿರಿತಿ ಶ್ರುತಃ ॥ ೧೩
ಪೂರ್ವಜನ್ಮತಪಃಸಿದ್ಧಿಯೋಗಾನ್ಮದ್ಭಕ್ತಿತಸ್ತಥಾ ।
ಜ್ಞಾನೀ ಗಗನಗಾಮೀ ಚ ಗಜೋ ಜಾತಿಸ್ಮರಶ್ಚ ಸಃ ॥ ೧೪
ದತ್ತಾದೇಶೋ ಮಯಾ ಸ್ವಪ್ನೇ ಸ ಚ ಹಸ್ತೀ ಮಹಾಂಸ್ತವ ।
ಏತ್ಯ ಸ್ವಯಂ ದ್ಯುಮಾರ್ಗೇಣ ವಾಹನತ್ವಂ ಪ್ರಪತ್ಸ್ಯತೇ ॥ ೧೫
ತಮಾರುಹ್ಯ ಗಜಂ ಶ್ವೇತಂ ಸುರೇಭಮಿವ ವಜ್ರಭೃತ್ ।
ವ್ಯೋಮಮಾರ್ಗೇಣ ಯಂ ಯಂ ತ್ವಂ ರಾಜಾನಮಭಿಯಾಸ್ಯಸಿ ॥ ೧೬
ಸ ಸ ದಿವ್ಯಾನುಭಾವಾಯ ಭೀತಸ್ತುಭ್ಯಂ ಪ್ರದಾಸ್ಯತಿ ।
ಸ್ವಪ್ನೇ ಮಯ್ಯೈವ ದತ್ತಾಜ್ಞಃ ಕನ್ಯಾದಾನನಿಭಾತ್ಕರಮ್ ॥ ೧೭
ಏವಂ ವಿಜೇಷ್ಯಸೇ ಕೃತ್ಸ್ನಾಂ ಪೃಥ್ವೀಮಂತಃಪುರಾಣಿ ಚ ।
ರಾಜಪುತ್ರೀಸಹಸ್ರಾಣಿ ತ್ವಮಶೀತಿಮವಾಪ್ಸ್ಯಸಿ ॥ ೧೮

೧೯. ಇಷ್ಟು ಹೇಳಿ ವಿಷ್ಣುವು ಅಂತರ್ಧಾನನಾಗಲಾಗಿ ರಾಜನು ಪಾರಣೆ ಮಾಡಿ ಮಾರನೆಯ ದಿನ ಆಕಾಶ ಮಾರ್ಗದಲ್ಲಿ ಆಗಮಿಸಿದ ಆ ಪವಿತ್ರವಾದ ಆನೆಯನ್ನು ಕಂಡನು.

೨೦. ವಿಷ್ಣುವು ಹೇಳಿದ್ದಂತೆ ಬಳಿಬಂದು ಬಾಗಿದ ಆ ಆನೆಯನ್ನೇರಿ ಭೂಮಿಯನ್ನು ಅಂತೆಯೇ ಗೆದ್ದು ರಾಜಕುಮಾರಿಯರನ್ನು ಕರೆತಂದನು.

೨೧. ಎಂಬತ್ತು ಸಾವಿರ ಸ್ತ್ರೀಯರಿಂದೊಡಗೂಡಿ ರಾಜನು ಯಥೇಷ್ಟವಾಗಿ ವಿಹರಿಸುತ್ತಾ ರತ್ನಕೂಟದಲ್ಲೇ ಇದ್ದನು.

೨೨. ಆ ದಿವ್ಯವಾದ ಆನೆ ಹಾಗೂ ಚಂದ್ರನ ಶಾಂತಿಗಾಗಿ ಪ್ರತಿದಿನ ಐನೂರು ಬ್ರಾಹ್ಮಣರಿಗೆ ಊಟ ಹಾಕಿಸಿದನು.

೨೩. ಹೀಗೆಯೇ ಒಮ್ಮೆ ರತ್ನಾಧಿಪತಿಯು ಆನೆಯನ್ನೇರಿ ಅನೇಕ ದ್ವೀಪಗಳನ್ನು ಸುತ್ತಿ ಕಡೆಗೆ ಸ್ವಂತ ದ್ವೀಪಕ್ಕೆ ಬಂದನು.

೨೪. ಅಲ್ಲಿ ಆಕಾಶದಿಂದ ಕೆಳಗಿಳಿಯುತ್ತಿದ್ದ ಆ ಶ್ರೇಷ್ಠ ಆನೆಗೆ ವಿಧಿವಶದಿಂದ ಗರುಡನ ವಂಶದ ಪಕ್ಷಿಯೊಂದು ನೆತ್ತಿಯ ಮೇಲೆ ಕೊಕ್ಕಿನಿಂದ ಬಡಿಯಿತು.

೨೫. ರಾಜನ ಹರಿತವಾದ ಅಂಕುಶದಿಂದ ಪೆಟ್ಟುತಿಂದ ಆ ಹಕ್ಕಿಯು ತಪ್ಪಿಸಿಕೊಂಡು ಹಾರಿ ಹೋಯಿತು.  ಆನೆಯು ಮಾತ್ರ ಕೊಕ್ಕಿನ ಪೆಟ್ಟಿಗೆ ಪ್ರಜ್ಞೆ ಕಳೆದುಕೊಂಡು ನೆಲದ ಮೇಲೆ ಬಿದ್ದಿತು.

---

ಇತ್ಯುಕ್ತ್ವಾಂತರ್ಹಿತೇ ವಿಷ್ಣೌ ಸ ರಾಜಾ ಕೃತಪಾರಣಃ ।
ಅನ್ಯೇದ್ಯುರಾಗತಂ ವ್ಯೋಮ್ನಾ ತಂ ದದರ್ಶ ಗಜಂ ಶುಭಮ್ ॥ ೧೯

ಆರುಹ್ಯೋಪನತಂ ತಂ ಚ ಯಥಾದಿಷ್ಟಃ ಸ ವಿಷ್ಣುನಾ ।
ತಥಾ ವಿಜಿತ್ಯ ಪೃಥಿವೀಮಾಜಹ್ರೇ ರಾಜಕನ್ಯಕಾಃ ॥ ೨೦

ಸಹಸ್ರಾಶೀತಿಸಂಖ್ಯಾಭಿಸ್ತಸ್ತಾಭಿಃ ಸಮಂ ಚ ಸಃ ।
ಉವಾಸ ರತ್ನಕೂಟೇऽತ್ರ ಯಥೇಚ್ಛಂ ವಿಹರನ್ ನೃಪಃ ॥ ೨೧

ಶಾಂತ್ಯರ್ಥಂ ಶೀತರಶ್ಮೇಶ್ಚ ತಸ್ಯ ದಿವ್ಯಸ್ಯ ದಂತಿನಃ ।
ಪ್ರತ್ಯಹಂ ಭೋಜಯಾಮಾಸ ವಿಪ್ರಾಣಾಂ ಶತಪಂಚಕಮ್ ॥ ೨೨

ಕದಾಚಿಚ್ಚ ತಮಾರುಹ್ಯ ಪರಿಭ್ರಮ್ಯ ಸ ಭೂಪತಿಃ ।
ದ್ವೀಪಾಂತರಾಣಿ ಸ್ವಂ ದ್ವೀಪಂ ರತ್ನಾಧಿಪತಿರಾಯಯೌ ॥ ೨೩

ತತ್ರಾವತರತಸ್ತಸ್ಯ ಗಗನಾತ್ತು ಗಜೋತ್ತಮಮ್ ।
ಚಂಚ್ವಾ ತಾರ್ಕ್ಷ್ಯೋದ್ಭವಃ ಪಕ್ಷೀ ಮೂರ್ಧ್ನಿ ದೈವಾದತಾಡಯತ್ ॥ ೨೪

ಸ ಚ ಪಕ್ಷೀ ಪ್ರದುದ್ರಾವ ರಾಜ್ಞಾ ತೀಕ್ಷ್ಣಾಂಕುಶಾಹತಃ ।
ಹಸ್ತೀ ತು ಭೂಮಾವಪತಚ್ಚಂಚ್ವಾಘಾತೇನ ಮೂರ್ಚ್ಛಿತಃ ॥ ೨೫

೨೬–೨೭. ರಾಜನು ಕೆಳಗೆ ಇಳಿದು ಪ್ರಜ್ಞೆ ಬಂದಿದ್ದ ಆ ಆನೆಯನ್ನು ಎಬ್ಬಿಸಿದರೂ ಅದು ಏಳಲು ಸಮರ್ಥವಾಗಲಿಲ್ಲ. ಆಹಾರ ಸ್ವೀಕರಿಸುವುದನ್ನು ತ್ಯಜಿಸಿ ಐದು ದಿನಗಳವರೆಗೆ ಅದು ಬಿದ್ದಲ್ಲಿಯೇ ಇರಲು ತಾನೂ ಊಟ ಬಿಟ್ಟು ರಾಜನು ದುಃಖಿತನಾಗಿ ಹೀಗೆ ನಿವೇದಿಸಿಕೊಂಡನು:

೨೮. "ಲೋಕಪಾಲಕರೇ! ನೀವೇ ಹೇಳಿರಿ. ಈ ಕಷ್ಟದ ಸ್ಥಿತಿಯಲ್ಲಿ ನಾನು ಏನು ಮಾಡಲಿ ? ಇಲ್ಲದಿದ್ದರೆ ನನ್ನ ತಲೆಯನ್ನು ಕತ್ತರಿಸಿ ತಮಗೆ ಇಂದೇ ಉಡುಗೊರೆ ನೀಡುತ್ತೇನೆ.'

೨೯. ಹಾಗೆಂದು ಖಡ್ಗದಿಂದ ತನ್ನ ತಲೆಯನ್ನು ಕತ್ತರಿಸಲು ಉದ್ಯುಕ್ತನಾದ ಆತನಿಗೆ ಕೂಡಲೇ ಆಕಾಶದಿಂದ ಅಶರೀರವಾಣಿಯೊಂದು ನುಡಿಯಿತು.

೩೦. "ರಾಜನೇ! ದುಡುಕಬೇಡ. ಯಾರಾದರೂ ಒಬ್ಬ ಪತಿವ್ರತೆಯು ಈ ಆನೆಯನ್ನು ತನ್ನ ಕೈಯಿಂದ ಮುಟ್ಟಿದರೆ ಸಾಕು. ಇದು ಎದ್ದು ನಿಲ್ಲುತ್ತದೆ. ಇಲ್ಲದಿದ್ದರೆ ಇಲ್ಲ.

೩೧. ಅದನ್ನು ಕೇಳುತ್ತಲೇ ಸಂತೋಷಗೊಂಡ ರಾಜನು, ಸುರಕ್ಷೆಯಿಂದ ಇದ್ದ ತನ್ನ ಮುಖ್ಯ ರಾಣಿಯಾದ ಅಮೃತಲತೆ ಎಂಬುವಳನ್ನು ಕರೆಸಿದನು.

೩೨. ಆಕೆಯು ತನ್ನ ಕೈಯಿಂದ ಮುಟ್ಟಿದಾಗ ಆನೆಯು ಏಳದೇ ಇರಲು ರಾಜನು ತನ್ನ ಉಳಿದ ಎಲ್ಲ ರಾಣಿಯರನ್ನೂ ಅಲ್ಲಿಗೆ ಕರೆಸಿದನು.

---

ನೃಪೇಽವತೀರ್ಣೇ ಸ ಗಜೋ ಲಬ್ಧಸಂಜ್ಞೋಽಪಿ ನಾಶಕತ್ ।
ಉತ್ಥಾಪ್ಯಮಾನೋಽಪ್ಯುತ್ಥಾತುಂ ನಿರಸ್ತಕವಲಗ್ರಹಃ ॥ ೨೬

ಪಂಚಾಹಾನಿ ತಥೈವಾಸ್ಮಿನ್ ವಾರಣೇ ಪತಿತಸ್ಥಿತೇ ।
ದುಃಖಿತಃ ಸ ನಿರಾಹಾರೋ ರಾಜಾ ಚಾಪ್ಯೇವಮಬ್ರವೀತ್ ॥ ೨೭

ಭೋ ಲೋಕಪಾಲಾ ಬ್ರೂತಾಸ್ಮಿನ್ನುಪಾಯಂ ಸಂಕಟೇ ಮಮ ।
ಅನ್ಯಥೋಪಹರಿಷ್ಯಾಮಿಛಿತ್ತ್ವಾಹಂ ಸ್ವಶಿರೋಽದ್ಯ ವಃ ॥ ೨೮

ಇತ್ಯುಕ್ತ್ವೈವಾತ್ತಖಡ್ಗಂ ತಂ ಸ್ವಶಿರಶ್ಛೇತ್ತುಮುದ್ಯತಮ್ ।
ಅಶರೀರಾ ಜಗಾದೈವಂ ವಾಣೀ ತತ್ಕ್ಷಣಮಂಬರಾತ್ ॥ ೨೯

ಮಾ ಸಾಹಸಂ ಕೃಥಾ ರಾಜನ್ ಸಾಧ್ವೀ ಕಾಚಿತ್ಕರೋತಿ ಚೇತ್ ।
ಹಸ್ತಸ್ಪರ್ಶಂ ಗಜಸ್ಯಾಸ್ಯ ತದುತ್ತಿಷ್ಠತಿ ನಾನ್ಯಥಾ ॥ ೩೦

ತಚ್ಛ್ರುತ್ವೈವಾಮೃತಲತಾಂ ನಾಮ ಹೃಷ್ಟಃ ಸ ಭೂಪತಿಃ ।
ಮುಖ್ಯಾಮಾನಾಯಯಾಮಾಸ ನಿಜಾಂ ದೇವೀಂ ಸುರಕ್ಷಿತಾಮ್ ॥ ೩೧

ತಯಾ ಸ್ಪೃಷ್ಟಃ ಸ ಹಸ್ತೇನ ನೋದತಿಷ್ಠದ್ಗಜೋ ಯದಾ ।
ತದಾ ಸೋಽನ್ಯಾ ನಿಜಾಃ ಸರ್ವಾ ದೇವೀರಾನಾಯಯನ್ ನೃಪಃ ॥ ೩೨

೩೩. ಅವರೆಲ್ಲರೂ ಕ್ರಮವಾಗಿ ತಮ್ಮತಮ್ಮ ಕೈಗಳಿಂದ ಮುಟ್ಟಿದರೂ ಆನೆಯು ಎದ್ದೇಳಲಿಲ್ಲ. ಹಾಗಾಗಿ ಅವರಲ್ಲಿ ಯಾರೊಬ್ಬರೂ ಪತಿವ್ರತೆಯಾಗಿರಲಿಲ್ಲ.

೩೪. ತನ್ನ ಎಂಬತ್ತು ಸಾವಿರ ಮಡದಿಯರೂ ಸಹ ಸ್ಪಷ್ಟವಾಗಿ ನಾಚಿಕೆಪಟ್ಟುಕೊಳ್ಳುತ್ತಿರುವುದನ್ನು ಕಂಡ ರಾಜನು ಜನರ ಸಮ್ಮುಖದಲ್ಲಿ. ಪೇಚ್ಚಾಗಿ ಆ ಊರಿನಲ್ಲಿದ್ದ ಎಲ್ಲ ಹೆಂಗಸರನ್ನೂ ಕ್ರಮವಾಗಿ ಬರಹೇಳಿ ಅವರಿಂದ ಆನೆಯನ್ನು ಮುಟ್ಟಿಸಿದನು.

೩೫. ಆದರೂ ಆ ಆನೆಯು ಏಳದೇ ಇರಲು ರಾಜನು "ಅಯ್ಯೋ, ನನ್ನ ನಾಡಿನಲ್ಲಿ ಒಬ್ಬ ಹೆಂಗಸೂ ಪತಿವ್ರತೆಯಲ್ಲವಲ್ಲ' ಎಂದು ನಾಚಿಕೆಪಟ್ಟುಕೊಂಡನು.

೩೬. ಅಷ್ಟು ವೇಳೆಗೆ ತಾಮ್ರಲಿಪ್ತಿಯಿಂದ ಬಂದಿದ್ದ ಹರ್ಷಗುಪ್ತನೆಂಬ ವ್ಯಾಪಾರಿಯು ಅಲ್ಲಿನ ಸಮಾಚಾರವನ್ನು ತಿಳಿದು ಕುತೂಹಲಗೊಂಡು ಆ ಸ್ಥಳಕ್ಕೆ ಬಂದನು.

೩೭. ಅನಂತರ "ಶೀಲವತಿ' ಎಂಬ ಹೆಸರಿನ ಅವನ ಸೇವಕಿಯೊಬ್ಬಳು ಬಂದು ಅದನ್ನು ನೋಡಿ ಅವನಿಗೆ ಹೇಳಿದಳು:

೩೮. "ನಾನು ಈ ಆನೆಯನ್ನು ಕೈಯಿಂದ ಮುಟ್ಟುತ್ತೇನೆ. ನನ್ನ ಪತಿಯನ್ನು ಬಿಟ್ಟು ಬೇರೆ ಯಾರನ್ನೂ ಕನಸುಮನಸಿನಲ್ಲಿಯೂ ನಾನು ಆಲೋಚಿಸಿರದಿದ್ದರೆ ಈ ಆನೆಯು ಮೇಲೇಳಲಿ.'

---

ತಾಭಿಃ ಕೃತಕರಸ್ಪರ್ಶಃ ಸಮಸ್ತಾಭಿರಪಿ ಕ್ರಮಾತ್ ।
ನೈವೋತ್ತಸ್ಥೌ ದ್ವಿಪಃ ಸೋಽತ್ರ ನ ತಾಸ್ವೇಕಾಪ್ಯಭೂತ್ಸತೀ ॥ ೩೩

ಅಂತಃಪುರಸಹಸ್ರಾಣಿ ತಾಮಶೀತಿಮಪಿ ಸ್ಫುಟಮ್ ।
ದೃಷ್ಟ್ವಾ ವಿಲಜ್ಜಿತಾನ್ಯೇವ ಸ ರಾಜಾ ಜನಸಂನಿಧೌ ॥ ೩೪

ವಿಲಕ್ಷಃ ಸ್ವಪುರಾತ್ತಸ್ಮಾದಾನಾಯ್ಯ ನಿಖಿಲಾಃ ಸ್ತ್ರಿಯಃ ।
ಕ್ರಮೇಣ ಹಸ್ತಿನಸ್ತಸ್ಯ ಹಸ್ತಸ್ಪರ್ಶಮಕಾರಯತ್ ॥ ೩೫

ತಥಾಪಿ ಯತ್ನ ನೋತ್ತಸ್ಥೌ ಗಜೇಂದ್ರಸ್ತತ್ರ ಭೂಪತಿಃ ।
ಕಷ್ಟಂ ಪುರೇ ಮೇ ಸಾಧ್ವೀ ಸ್ತ್ರೀ ನೈಕಾಪೀತಿ ತ್ರಪಾಂ ಯಯೌ ॥ ೩೬

ತಾವಚ್ಚ ಹರ್ಷಗುಪ್ತಾಖ್ಯಃ ತಾಮ್ರಲಿಪ್ತ್ಯಾಃ ಸಮಾಗತಃ ।
ವಣಿಕ್ ತತ್ರಾಯಯೌ ಬುದ್ಧ್ವಾ ವೃತ್ತಾಂತಂ ತಂ ಸಕೌತುಕಃ ॥ ೩೭

ತಸ್ಯ ಕರ್ಮಕರೀ ಪಶ್ಚಾದಾಜಗಾಮ ಪತಿವ್ರತಾ ।
ಏಕಾ ಶೀಲವತೀ ನಾಮ ಸಾ ತದ್ದೃಷ್ಟ್ವಾ ತಮಬ್ರವೀತ್ ॥ ೩೮

ಸ್ಪೃಶಾಮ್ಯಹಂ ಕರೇಣೈತಂ ಸ್ವಭರ್ತುಶ್ಚಾಪರೋ ಮಯಾ ।
ಮನಸಾಪಿ ನ ಚೇದ್ ಧ್ಯಾತಃ ತದುತ್ತಿಷ್ಠತ್ವಯಂ ದ್ವಿಪಃ ॥ ೩೯

೪೧. ಹೀಗೆ ಹೇಳಿ ಅವಳು ತನ್ನ ಕೈಯಿಂದ ಆನೆಯನ್ನು ಮುಟ್ಟಲು ಅದು ಆರೋಗ್ಯ ಹೊಂದಿ ಎದ್ದು ಆಹಾರವನ್ನೂ ಸ್ವೀಕರಿಸಿತು.

೪೧. ಇಂತಹ ಪತಿವ್ರತೆಯರು ತುಂಬ ವಿರಳ. ಇವರು ದೇವತೆಗಳಂತೆ ಜಗತ್ತಿನ ಸೃಷ್ಟಿ–ಸ್ಥಿತಿ–ಸಂಹಾರಗಳನ್ನು ಮಾಡಬಲ್ಲವರು.

೪೨–೪೩. ಎಂದು ಅಲ್ಲಿದ್ದ ಜನರು ಜೋರಾಗಿ ಘೋಷಿಸಿ ಆ ಶೀಲವತಿಯನ್ನು ಹೊಗಳಲಾರಂಭಿಸಿದರು. ಶ್ವೇತರಶ್ಮಿಯು ಎದ್ದುದನ್ನು ಕಂಡ ರಾಜನಾದ ರತ್ನಾಧಿಪತಿಯೂ ಅವಳನ್ನು ಅಭಿನಂದಿಸಿ ಅಸಂಖ್ಯಾತವಾದ ರತ್ನಗಳಿಂದ ತುಂಬಿ ಪತಿವ್ರತೆಯಾದ ಶೀಲವತಿಯನ್ನು ಸಂತೋಷಪಡಿಸಿದನು.

೪೪. ಅಂತೆಯೇ ಆಕೆಯ ಒಡೆಯನಾದ ವ್ಯಾಪಾರಿ ಹರ್ಷಗುಪ್ತನನ್ನು ಗೌರವಿಸಿ ಅರಮನೆಯ ಬಳಿಯಲ್ಲಿಯೇ ಅವನಿಗೆ ಒಂದು ಮನೆಯನ್ನೂ ನೀಡಿದನು.

೪೫. ಹಾಗೆಯೇ ತನ್ನ ಎಲ್ಲ ಹೆಂಡತಿಯರೂ ಸಂಸ್ಕಾರವಿಲ್ಲದವರಾಗಿರುವುದನ್ನು ಗಮನಿಸಿ ಇನ್ನು ವೇಳೆ ಅವರನ್ನು ಮುಟ್ಟುವುದಿಲ್ಲ ಎಂದು ನಿಶ್ಚಯಿಸಿ ಅವರಿಗೆಲ್ಲ ಊಟ ಬಟ್ಟೆಗಳನ್ನು ಮಾತ್ರ ವ್ಯವಸ್ಥೆ ಮಾಡಿದನು.

೪೬. ಅನಂತರ ಭೋಜನವನ್ನು ತರಿಸಿ ತಾನೂ ಊಟಮಾಡಿ ಪತಿವ್ರತೆ ಶೀಲವತಿಯನ್ನು ಕರೆಸಿ ಬೇರೆಯವರನ್ನೆಲ್ಲ ಕಳುಹಿಸಿ (ಹರ್ಷಗುಪ್ತನ ಸಮ್ಮುಖದಲ್ಲಿ) ಅವಳಿಗೆ ಹೇಳಿದನು:

---

ಇತ್ಯುಕ್ತ್ವೋಪೇತ್ಯ ಹಸ್ತೇನ ಸಾ ಚ ಪಸ್ಪರ್ಶ ತಂ ಗಜಮ್ ।
ಉದತಿಷ್ಠತ್ ಸ ಚ ಸ್ವಸ್ಥಃ ಕವಲಂ ಚ ತತೋಽಗ್ರಹೀತ್ ॥ ೪೦

ಇಮಾಸ್ತಾ ವಿರಲಾಃ ಸಾಧ್ವ್ಯಃ ಕಾಶ್ಚಿದೇವೇಶ್ವರೋಪಮಾಃ ।
ಸರ್ಗಪಾಲನಸಂಹಾರಸಮರ್ಥಾ ಜಗತೋಽಸ್ಯ ಯಾಃ ॥ ೪೧

ಇತಿ ಶೀಲವತೀಂ ತತ್ರ ಕೃತಕೋಲಾಹಲೋ ಜನಃ ।
ತಾಂ ತುಷ್ಟಾವ ತದಾ ದೃಷ್ಟ್ವಾ ಶ್ವೇತರಶ್ಮಿಂ ತಮುತ್ಥಿತಮ್ ॥ ೪೨

ರಾಜಾಪಿ ರತ್ನಾಧಿಪತಿಃ ಪರಿತುಷ್ಯಾಭಿನಂದ್ಯ ತಾಮ್ ।
ಸೋಽಪೂರಯದಸಂಖ್ಯಾತೈ ರತ್ನೈಃ ಶೀಲವತೀಂ ಸತೀಮ್ ॥ ೪೩

ತತ್ಸ್ವಾಮಿನಂ ಚ ವಣಿಜಂ ಹರ್ಷಗುಪ್ತಂ ತಥೈವ ತಮ್ ।
ಅಪೂಜಯದ್ದದೌ ಚಾಸ್ಯ ಗೃಹಂ ರಾಜಗೃಹಾಂತಿಕೇ ॥ ೪೪

ಪರಿವರ್ಜಿತಸಂಸ್ಪರ್ಶಾ ನಿಜಭಾರ್ಯಾಸ್ತಥೈವ ಸಃ ।
ಪಿಂಡಾಚ್ಛಾದನಮಾತ್ರೈಕಭಾಗಿನೀರಕರೋತ್ತತಃ ॥ ೪೫

ಅಥಾನಾಯ್ಯ ಕೃತಾಹಾರೋ ಹರ್ಷಗುಪ್ತಸ್ಯ ಸನ್ನಿಧೌ ।
ಸಾಧ್ವೀಂ ಶೀಲವತೀಂ ತಾಂ ಸ ಜಗಾದ ವಿಜನೇ ನೃಪಃ ॥ ೪೬

೪೭. "ನಿಮ್ಮ ತಂದೆಯ ಕುಲದಲ್ಲಿ ಒಳ್ಳೆಯ ನಡತೆಯ ಯಾವುದಾದರೂ ಹೆಣ್ಣು ಇದ್ದರೆ ಆಕೆಯನ್ನು ನನಗೆ ಕೊಡಿಸು. ಆಕೆಯೂ ನಿನ್ನಂತೆಯೇ ಶೀಲವಂತೆಯಾಗಿರುವುದರಲ್ಲಿ ಅನುಮಾನವೇ ಇಲ್ಲ.

೪೮. ರಾಜನು ಇಂತೆಂದಾಗ ಆ ಶೀಲವತಿಯು ಆಗ ಹೇಳಿದಳು. "ತಾಮ್ರಲಿಪ್ತಿಯಲ್ಲಿ ನನಗೆ ರಾಜದತ್ತೆಯೆಂಬ ತಂಗಿಯೊಬ್ಬಳು ಇದ್ದಾಳೆ.

೪೯. ಚೆಲುವೆಯಾಗಿರುವ ಆಕೆಯನ್ನು ಇಷ್ಟಪಡುವುದಾದರೆ ಮದುವೆ ಮಾಡಿಕೋ'. ಹಾಗೆ ಅವಳು ಹೇಳಿದಾಗ ರಾಜನು ಅದನ್ನು ಒಪ್ಪಿಕೊಂಡನು.

೫೦–೫೧. ಹಾಗೆಯೇ ಮಾಡುವುದೆಂದು ನಿಶ್ಚಯಿಸಿದ ಆ ರಾಜನು ಮಾರನೆಯ ದಿನ ಹರ್ಷಗುಪ್ತ ಶೀಲವತಿಯರ ಜೊತೆಗೆ ಆಕಾಶದಲ್ಲಿ ಹೋಗುವ ಶ್ವೇತರಶ್ಮಿಯನ್ನೇರಿ ತಾನೇ ತಾಮ್ರಲಿಪ್ತಿಗೆ ಹೋಗಿ ವ್ಯಾಪಾರಿ ಹರ್ಷಗುಪ್ತನ ಮನೆಯನ್ನು ಪ್ರವೇಶಿಸಿದನು.

೫೨. ಅಂದು ಅಲ್ಲಿ ಶೀಲವತಿಯ ತಂಗಿ ರಾಜದತ್ತೆಗೂ ತನಗೂ ಮದುವೆಯಾಗಲು ಸರಿಯಾದ ಲಗ್ನ ಯಾವುದೆಂದು ಜ್ಯೌತಿಷಿಕರನ್ನು ಕೇಳಿದನು.

೫೩. ಜ್ಯೋತಿಷಿಗಳು ಇಬ್ಬರ ನಕ್ಷತ್ರಗಳನ್ನೂ ಕೇಳಿ "ರಾಜನೇ, ಇಲ್ಲಿಂದ ಮೂರು ತಿಂಗಳಾದ ಮೇಲೆ ನಿಮ್ಮಿಬ್ಬರ ವಿವಾಹಕ್ಕೆ ಲಗ್ನವು ಪ್ರಶಸ್ತವಾಗಿದೆ' ಎಂದು ಹೇಳಿದರು.

---

ಶೀಲವತ್ಯಸ್ತಿ ತೇ ಕಾಚಿತ್ಕನ್ಯಾ ಪಿತೃಕುಲಾದಿತಿ ।
ತಾಂ ಮೇ ದಾಪಯ ಜಾನೇ ಹಿ ಸಾಪಿ ಸ್ಯಾತ್ ತ್ವಾದೃಶೀ ಧ್ರುವಮ್ ॥ ೪೭

ಇತ್ಯುಕ್ತಾ ತೇನ ಸಾ ರಾಜ್ಞಾ ಶೀಲವತ್ಯಬ್ರವೀತ್ತದಾ ।
ರಾಜದತ್ತೇತಿ ನಾಮ್ನಾಸ್ತಿ ತಾಮ್ರಲಿಪ್ತ್ಯಾಂ ಸ್ವಸಾ ಮಮ ॥ ೪೮

ಉಪಯಚ್ಛಸ್ವ ತಾಂ ದೇವ ಶ್ಲಾಘ್ಯರೂಪಾಂ ಯದೀಚ್ಛಸಿ ।
ಇತ್ಯುಕ್ತಃ ಸ ತಯಾ ರಾಜಾ ಪ್ರತಿಪೇದೇ ತಥೇತಿ ತತ್ ॥ ೪೯

ನಿಶ್ಚಿತ್ಯ ಚ ತದನ್ಯೇದ್ಯುಃ ಶೀಲವತ್ಯಾ ತಯಾ ಸಹ ।
ತೇನಾಪಿ ಹರ್ಷಗುಪ್ತೇನ ತಮಾರುಹ್ಯ ಖಗಾಮಿನಮ್ ॥ ೫೦

ಶ್ವೇತರಶ್ಮಿಂ ಸ್ವಯಂ ಗತ್ವಾ ತಾಮ್ರಲಿಪ್ತೀಂ ಸ ಭೂಪತಿಃ ।
ವಿವೇಶ ಹರ್ಷಗುಪ್ತಸ್ಯ ವಣಿಜಸ್ತಸ್ಯ ಮಂದಿರಮ್ ॥ ೫೧

ತತ್ರ ಪಪ್ರಚ್ಛ ತದಹರ್ಲಗ್ನಂ ಶೀಲವತೀಸ್ವಸುಃ ।
ವಿವಾಹೇ ರಾಜದತ್ತಾಯಾ ಗಣಕಾನಾತ್ಮನಸ್ತಥಾ ॥ ೫೨

ಗಣಕಾಶ್ಚೋಭಯೋಃ ಪೃಷ್ಟ್ವಾ ನಕ್ಷತ್ರಾಣ್ಯೇವಮಬ್ರುವನ್ ।
ಲಗ್ನೋ ವಾಂ ಶೋಭನೋ ರಾಜನ್ನಸ್ತಿ ಮಾಸೇಷ್ವಿತಸ್ತ್ರಿಷು ॥ ೫೩

೩೪. "ಇಂದು ಇರುವ ಮುಹೂರ್ತದಲ್ಲಿ ಮದುವೆಯಾದರೆ ಪ್ರಭುವೇ ! ರಾಜದತ್ತೆಯು ಅಸತಿಯಾಗುವುದು ನಿಶ್ಚಿತ.'

೩೫. ಜೋಯಿಸರು ಹೀಗೆ ಹೇಳಿದರೂ ಹೆಚ್ಚು ಕಾಲ ಒಂಟಿಯಾಗಿರಲು ಬಯಸದೆ ಆಕರ್ಷಕಳಾದ ವಧುವನ್ನು ಪಡೆಯುವ ತವಕದಿಂದ ರಾಜನು ಹೀಗೆ ಆಲೋಚಿಸಿದನು.

೩೬. "ವಿಚಾರ ಮಾಡುವುದೇತಕ್ಕೆ ? ಇಂದೇ ರಾಜದತ್ತೆಯನ್ನು ಇಲ್ಲಿ ಮದುವೆಯಾಗುತ್ತೇನೆ. ಶೀಲವತಿಯ ತಂಗಿಯೂ ಗರ್ವವಿಲ್ಲದವಳೂ ಆದ ಈಕೆಯು ಪತಿವ್ರತೆಯಾಗದೇ ಇರಲು ಸಾಧ್ಯವಿಲ್ಲ.

೩೭. ಸಮುದ್ರದ ಮಧ್ಯದಲ್ಲಿ ಮನುಷ್ಯರೇ ಇರದ ಒಂದು ಸಣ್ಣ ದ್ವೀಪವಿದೆ. ಅದರಲ್ಲಿ ಯಾರೂ ವಾಸವಿಲ್ಲದ ಒಂದು ಮನೆಯಿದೆ. ಅಲ್ಲಿ ಇವಳನ್ನು ಇರಿಸುತ್ತೇನೆ.

೩೮. ಹೋಗುವುದೇ ಕಷ್ಟವಾಗಿರುವ ಆ ಸ್ಥಳದಲ್ಲಿ ಕೇವಲ ಸ್ತ್ರೀಯರನ್ನೇ ಇವಳ ಪರಿವಾರವಾಗಿ ಮಾಡುತ್ತೇನೆ. ಗಂಡಸರನ್ನೇ ನೋಡಲಾಗದ ಇವಳು ಅಸತಿಯಾಗುವುದಾದರೂ ಹೇಗೆ ?'

೩೯. ಹೀಗೆ ನಿರ್ಣಯಿಸಿ ಅಂದಿನ ದಿನವೇ ರಾಜನು ಶೀಲವತಿಯು ಸಮರ್ಪಿಸಿದ ರಾಜದತ್ತೆಯನ್ನು ಕೂಡಲೇ ಮದುವೆಯಾದನು.

---

ಅದ್ಯ ವಾ ವಿದ್ಯತೇ ಯಾದೃಕ್ ತೇನೈಷಾ ಚೇದ್ವಿವಾಹ್ಯತೇ ।<br>
ರಾಜದತ್ತಾ ತತೋಽವಶ್ಯಮಸಾಧ್ವೀ ಭವತಿ ಪ್ರಭೋ ॥ ೩೪

ಗಣಕೈರೇವಮುಕ್ತೋಽಪಿ ಕಮನೀಯವಧೂತ್ಸುಕಃ ।<br>
ಏಕಾಕೀ ಚಿರಮಸ್ಥಾಸ್ನುಃ ಸ ರಾಜಾ ಸಮಚಿಂತಯತ್ ॥ ೩೫

ಅಲಂ ವಿಚಾರೇಣಾದ್ಯೈವ ರಾಜದತ್ತಾಮಿಹೋದ್ವಹೇ ।<br>
ಶೀಲವತ್ಯಾಃ ಸ್ವಸಾ ಹ್ಯೇಷಾ ನಿರ್ದರ್ಪಾ ನಾಸತೀ ಭವೇತ್ ॥ ೩೬

ಯತ್ತತ್ಸಮುದ್ರಮಧ್ಯೇಽಸ್ತಿ ದ್ವೀಪಖಂಡಮಮಾನುಷಮ್ ।<br>
ಏಕಶೂನ್ಯಚತುಃಶಾಲಂ ತತ್ರೈತಾಂ ಸ್ಥಾಪಯಾಮಿ ಚ ॥ ೩೭

ದುರ್ಗಮೇಽತ್ರ ಪರೀವಾರಂ ಸ್ತ್ರೀರೇವಾಸ್ಯಾಃ ಕರೋಮಿ ಚ ।<br>
ಪುರುಷಾದರ್ಶನಾದೇವಮಸತೀ ಸ್ಯಾದಿಯಂ ಕಥಮ್ ॥ ೩೮

ಇತಿ ನಿಶ್ಚಿತ್ಯ ತದಹಃ ಪರಿಣಿನ್ಯೇ ಸ ಭೂಪತಿಃ ।<br>
ತಾಂ ರಾಜದತ್ತಾಂ ಸಹಸಾ ಶೀಲವತ್ಯಾ ಸಮರ್ಪಿತಾಮ್ ॥ ೩೯

೬೦-೬೧. ಮದುವೆ ಮಾಡಿಕೊಂಡು ಹರ್ಷಗುಪ್ತನ ಜೊತೆ ಶಿಷ್ಟಾಚಾರಗಳನ್ನು ಪಾಲಿಸಿ ಆ ವಧುವನ್ನು ಕರೆದುಕೊಂಡು ಹರ್ಷಗುಪ್ತ ಶೀಲವತಿಯರಿಂದ ಒಡಗೂಡಿ ಶ್ವೇತ ರಶ್ಮಿಯನ್ನೇರಿ ತನ್ನನ್ನೇ ಎದುರುನೋಡುತ್ತ ರಸ್ತೆಯಲ್ಲಿ ಜನರು ನಿಂತಿರಲು ಕ್ಷಣಕಾಲದಲ್ಲಿ ಆಕಾಶಮಾರ್ಗದಿಂದ ತನ್ನ ದ್ವೀಪವಾದ ರತ್ನಕೂಟಕ್ಕೆ ಬಂದನು.

೬೨. ಆಮೇಲೆ ಶೀಲವತಿಯಾದ ರಾಜದತ್ತೆಯನ್ನು ರಾಜನು ಅನುಭವಿಸಿ ಅವಳ ಸತೀವ್ರತದ ಫಲವನ್ನು ಪಡೆದವಳಾಗಿ ಧನ್ಯತೆಯ ಭಾವವನ್ನು ಹೊಂದುವಂತೆ ಮಾಡಿದನು.

೬೩-೬೪. ಅನಂತರ ಆಕಾಶದಲ್ಲಿ ಚಲಿಸುವ ಅದೇ ಶ್ವೇತ ರಶ್ಮಿಯ ಮೇಲೆ ಆಕೆಯನ್ನು ಕೂರಿಸಿಕೊಂಡು ಮೊದಲೇ ಆಲೋಚಿಸಿದ್ದಂತೆ ಮನುಷ್ಯರು ತಲುಪಲಾಗದ ಸಮುದ್ರಮಧ್ಯದ ಆ ದ್ವೀಪದಲ್ಲಿ ರಾಜದತ್ತೆಯನ್ನು ಕೇವಲ ಸ್ತ್ರೀ ಪರಿವಾರದೊಂದಿಗೆ ಪಡಸಾಲೆಯಲ್ಲಿ ಇರಿಸಿದನು.

೬೫. ಅವಳಿಗೆ ಬೇಕಾದ ಸಕಲ ಸಾಮಗ್ರಿಗಳನ್ನೂ ಸಮುದ್ರದ ಮೇಲೆ ಕಳಿಸಲು ನಂಬಿಕೆಯಿಲ್ಲದೆ ಆನೆಯ ಸಹಾಯದಿಂದ ಆಕಾಶಮಾರ್ಗದಿಂದಲೇ ಅಲ್ಲಿ ಅವಳಿಗೆ ಒದಗಿಸಿಕೊಟ್ಟನು.

೬೬. ಅವಳಲ್ಲಿ ಅತ್ಯಂತ ಅನುರಕ್ತನಾಗಿ ತಾನೂ ರಾತ್ರಿವೇಳೆಯಲ್ಲೆಲ್ಲ ಅವಳೊಂದಿಗೆ ಇರುತ್ತಿದ್ದನು. ಹಗಲು ಹೊತ್ತಿನಲ್ಲಿ ಮಾತ್ರ ರಾಜಕಾರ್ಯಗಳಿಗೆ ರತ್ನಕೂಟಕ್ಕೆ ಬರುತ್ತಿದ್ದನು.

---

ಕೃತೋದ್ವಾಹಃ ಕೃತಾಚಾರೋ ಹರ್ಷಗುಪ್ತೇನ ತಾಂ ವಧೂಮ್ ।
ಆದಾಯ ತೇನೈವ ಸಮಂ ಶೀಲವತ್ಯಾ ತಯಾ ಚ ಸಃ ॥ ೬೦

ಶ್ವೇತರಶ್ಮಿಂ ತಮಾರುಹ್ಯ ಕ್ಷಣೇನ ನಭಸಾ ನಿಜಮ್ ।
ಮಾರ್ಗೋನ್ಮುಖಜನಂ ದ್ವೀಪಂ ರತ್ನಕೂಟಂ ತದಾಯಯೌ ॥ ೬೧

ಸಂವಿಭೇಜೇ ಚ ತಾಂ ಭೂಯಸ್ತಥಾ ಶೀಲವತೀಂ ಯಥಾ ।
ಪ್ರಾಪ್ತಸಾಧ್ವೀವ್ರತಫಲಾ ಕೃತಾರ್ಥಾ ಸಮಪಾದಿ ಸಾ ॥ ೬೨

ತತಸ್ತತ್ರೈವ ಕರಿಣಿ ಶ್ವೇತರಶ್ಮೌ ನಭಶ್ಚರೇ ।
ಆರೋಪ್ಯ ತಾಂ ನವವಧೂಂ ರಾಜದತ್ತಾಂ ಸ ಚಿಂತಿತೇ ॥ ೬೩

ನೀತ್ವಾ ತತ್ರಾಬ್ಧಿಮಧ್ಯಸ್ಥೇ ದ್ವೀಪೇ ಮಾನುಷದುರ್ಗಮೇ ।
ಆಸ್ಥಾಪಯಚ್ಚತುಃಶಾಲೇ ನಾರೀಮಯಪರಿಚ್ಛದಾಮ್ ॥ ೬೪

ಯದ್ಯದ್ವಸ್ತೂಪಯುಕ್ತಂ ಚ ತಸ್ಯಾಸ್ತತ್ತದವಿಶ್ವಸನ್ ।
ವ್ಯೋಮ್ನೈವ ಪ್ರಾಪಯಾಮಾಸ ತತ್ರ ತೇನ ಗಜೇನ ಸಃ ॥ ೬೫

ಸ್ವಯಂ ತದನುರಕ್ತಶ್ಚ ತತ್ರೈವಾಸೀತ್ ಸದಾ ನಿಶಿ ।
ಆಯಯೌ ರಾಜಕಾರ್ಯಾರ್ಥಂ ರತ್ನಕೂಟಂ ದಿವಾ ಪುನಃ ॥ ೬೬

೬೭. ಒಂದು ದಿನ ಬೆಳಗಿನ ಯಾಮದಲ್ಲಿ ರಾಜನು ತನಗಾದ ಕೆಟ್ಟ ಕನಸೊಂದನ್ನು ಮರೆಯಲು ರಾಜದತ್ತೆಯ ಜೊತೆಯಲ್ಲಿ ಮಧುಪಾನವನ್ನು ಮಾಡಿದನು.

೬೮. ಅದರಿಂದ ಮತ್ತೇರಿದ್ದ ಅವಳು ಇವನನ್ನು ಬಿಡದೇ ಇದ್ದರೂ ಇವನು ಅವಳಿಂದ ಬಿಡಿಸಿಕೊಂಡು ತನ್ನ ಕೆಲಸಕ್ಕೆಂದು ರತ್ನಕೂಟಕ್ಕೆ ಹೋದನು. ಪ್ರಭುತ್ವವು ಸದಾ ಅಂಟಿಕೊಳ್ಳುವ ಸ್ವಭಾವವುಳ್ಳದ್ದಷ್ಟೆ

೬೯. ಅಲ್ಲಿ ಆತಂಕದಿಂದಲೇ ತನ್ನ ಕೆಲಸಗಳನ್ನು ಮಾಡುತ್ತಿದ್ದನು. ಅವನ ಮನಸ್ಸು ಮತ್ತಾದ ಒಂಟಿ ಹೆಂಗಸನ್ನು ನೀನೇಕೆ ಬಿಟ್ಟುಬಂದೆ ಎಂದು ನುಡಿಯುತ್ತಿತ್ತು.

೭೦. ಅಷ್ಟರ ವೇಳೆಗೆ ದಾಸಿಯರು ಅಡುಗೆ ಮತ್ತಿತರ ಕಾರ್ಯಗಳಲ್ಲಿ ಮುಳುಗಿದ್ದಾಗ ರಾಜದತ್ತೆಯು ಒಬ್ಬಳೇ ಅತಿದುರ್ಗಮವಾದ ಆ ಜಾಗದಲ್ಲಿ ನಿಂತಿದ್ದಳು.

೭೧–೭೨. ಅವಳ ಸುರಕ್ಷಾವ್ಯವಸ್ಥೆಯನ್ನು ಗೆಲ್ಲಲು ಬಾಗಿಲಿಗೆ ಬಂದ ಇನ್ನೊಂದು ವಿಧಿಯೆಂಬಂತೆ ಆಶ್ಚರ್ಯದಾಯಕನಾದ ಗಂಡಸೊಬ್ಬನನ್ನು ಕಂಡು, "ನೀನು ಯಾರು ? ಬರಲಾಗದ ಈ ಸ್ಥಾನಕ್ಕೆ ನೀನು ಹೇಗೆ ಬಂದೆ ?' ಎಂದು ಹತ್ತಿರಕ್ಕೆ ಬಂದ ಅವನನ್ನು ಮತ್ತೆಯಾದ ರಾಜದತ್ತೆಯು ಕೇಳಿದಳು.

೭೩. ಆಗ ಬಹಳ ಕಷ್ಟಪಟ್ಟಿರುವವನಂತೆ ಕಂಡುಬರುತ್ತಿದ್ದ ಆ ಗಂಡಸು ಹೇಳಿದನು : "ಎಲೈ ಮುಗ್ಧಳೇ ! ನಾನು ಮಾಥುರ. ನನ್ನ ಹೆಸರು ಪವನಸೇನ. ನಾನೊಬ್ಬ ವ್ಯಾಪಾರಿಯ ಮಗ.

---

ಏಕದಾ ಸ ತಯಾ ಸಾಕಂ ಪ್ರತ್ಯೂಷೇ ರಾಜದತ್ತಯಾ ।
ರಾಜಾ ಪ್ರತಿಘ್ನನ್ ದುಃಸ್ವಪ್ನಂ ಸಿಷೇವೇ ಪಾನಮಂಗಲಮ್ ॥ ೬೭

ತೇನ ಮತ್ತಾಮಮುಂಚಂತೀಮಪಿ ಮುಕ್ತ್ವಾ ಸ ತಾಂ ಯಯೌ ।
ರತ್ನಕೂಟಂ ಸ್ವಕಾರ್ಯಾರ್ಥಂ ನಿತ್ಯಸ್ನಿಗ್ಧಾ ಹಿ ರಾಜತಾ ॥ ೬೮

ತತ್ರ ತಸ್ಥೌ ಸಶಂಕೇನ ಕುರ್ವನ್ ಕಾರ್ಯಾಣಿ ಚೇತಸಾ ।
ಕ್ಷೀಬಾ ಕಿಮೇಕಕಾ ಮುಕ್ತಾ ಸಾ ತ್ವಯೇತೀವ ಶಂಸತಾ ॥ ೬೯

ತಾವಚ್ಚ ರಾಜದತ್ತಾ ಸಾ ಸ್ಥಾನೇ ತತ್ರಾತಿದುರ್ಗಮೇ ।
ಮಹಾನಸಾದಿವ್ಯಗ್ರಾಸು ದಾಸೀಷ್ವೇಕಾಕಿನೀ ಸ್ಥಿತಾ ॥ ೭೦

ದ್ವಾರೇ ವಿಧಿಮಿವಾನ್ಯಂ ತತ್ತದ್ರಕ್ಷಾವಿಜಿಗೀಷಯಾ ।
ಆಗತಂ ಪುರುಷಂ ಕಂಚಿದ್ದದರ್ಶಾಶ್ಚರ್ಯದಾಯಕಮ್ ॥ ೭೧

ಕಸ್ತ್ವಂ ಕಥಮಿದಂ ಸ್ಥಾನಮಗಮ್ಯಂ ಚಾಗತೋಽಭವಾನ್ ।
ಇತಿ ತಂ ಚಾಂತಿಕಪ್ರಾಪ್ತಂ ಕ್ಷೀಬಾ ಪಪ್ರಚ್ಛ ಸಾ ಕಿಲ ॥ ೭೨

ತತಃ ಸ ದೃಷ್ಟಬಹುಲಕ್ಲೇಶಸ್ತಾಂ ಪುರುಷೋಽಬ್ರವೀತ್ ।
ಮುಗ್ಧೇ ಪವನಸೇನಾಖ್ಯೋ ವಣಿಕ್‌ಪುತ್ರೋಽಸ್ಮಿ ಮಾಥುರಃ ॥ ೭೩

೭೪. ನನ್ನ ಜ್ಞಾತಿಗಳು ಎಲ್ಲ ಸಂಪತ್ತನ್ನೂ ದೋಚಿದರು. ನನ್ನ ತಂದೆಯನ್ನು ಕಳೆದುಕೊಂಡು ಅನಾಥನಾಗಿದ್ದ ನಾನು ಪರವೂರಿಗೆ ಹೋಗಿ ದೀನವಾದ ಪರರ ಸೇವೆಯನ್ನು ಆಶ್ರಯಿಸಿದೆನು.

೭೫. ಅನಂತರ ಹೇಗೋ ಕಷ್ಟಪಟ್ಟು ವ್ಯಾಪಾರದಿಂದ ಸ್ವಲ್ಪ ಹಣ ಸಂಪಾದಿಸಿ ಬೇರೆ ಊರಿಗೆ ಹೋಗುತ್ತಿರುವಾಗ ಮಾರ್ಗದಲ್ಲಿ ಕಳ್ಳರು ಬಂದು ನನ್ನ ಹಣವನ್ನು ಕದ್ದರು.

೭೬. ಮುಂದೆ ನನ್ನಂತಹವರೊಂದಿಗೆ ಭಿಕ್ಷೆಗೆಂದು ಸುತ್ತುತ್ತಾ ರತ್ನಗಳ ಆಕರಸ್ಥಾನವಾದ ಕನಕಕ್ಷೇತ್ರ ಎಂಬಲ್ಲಿಗೆ ಹೋದೆನು.

೭೭. ಅಲ್ಲಿ ರಾಜನ ಬಳಿ ಬೆಟ್ಟ ಅಗೆಯುವ ಕೆಲಸ ಗಿಟ್ಟಿಸಿ ಗಣಿಯಲ್ಲಿ ನೆಲವನ್ನು ಒಂದು ವರ್ಷದವರೆಗೆ ಅಗೆದರೂ ಒಂದು ರತ್ನವೂ ದೊರಕಲಿಲ್ಲ.

೭೮. ನನ್ನ ಜೊತೆಯವರೆಲ್ಲ ರತ್ನಗಳು ಸಿಕ್ಕು ಸಂತಸಪಡುತ್ತಿರುವಾಗ ದುಃಖಿತನಾದ ನಾನು ಸಮುದ್ರದ ದಡದಲ್ಲಿ ಕಟ್ಟಿಗೆಗಳನ್ನು ಕೊಂಡು ತಂದೆನು.

೭೯. ಬೆಂಕಿಗೆ ಬೀಳಲೆಂದು ಚಿತೆಯನ್ನು ಸಿದ್ಧಪಡಿಸುತ್ತಿದ್ದಾಗ ಅಲ್ಲಿಗೆ ಜೀವದತ್ತನೆಂಬ ಯಾರೋ ವ್ಯಾಪಾರಿಯು ಬಂದನು.

೮೦. ಆ ದಯಾಳುವು ನನ್ನನ್ನು ಸಾವಿನಿಂದ ತಡೆದು ಕೆಲಸ ನೀಡಿ ಸುವರ್ಣ ದ್ವೀಪಕ್ಕೆ ಹೋಗುತ್ತಿದ್ದ ಹಡಗಿನಲ್ಲಿ ಕೂರಿಸಿಕೊಂಡನು.

---

ಹೃತಸ್ವೋ ಗೋತ್ರಜೈಃ ಸೋಽಹಮನಾಥಃ ಪ್ರಮಯಾತ್ಪಿತುಃ ।
ಗತ್ವಾ ವಿದೇಶೇ ಕೃಪಣಾಂ ಪರಸೇವಾಮಶಿಶ್ರಿಯಮ್ ॥ ೭೪

ತತಃ ಕೃಚ್ಛ್ರೇಣ ಸಂಪ್ರಾಪ್ಯ ಧನಲೇಶಂ ವಣಿಜ್ಯಯಾ ।
ಗಚ್ಛನ್ ದೇಶಾಂತರಂ ಮಾರ್ಗೇ ಮುಷಿತೋಽಸ್ಮ್ಯೇತ್ಯ ತಸ್ಕರೈಃ ॥ ೭೫

ತತೋ ಭಿಕ್ಷಾಂ ಭ್ರಮಂಸ್ತುಲ್ಯೈಃ ಸಹಾನ್ಯೈರ್ಗತವಾನಹಮ್ ।
ರತ್ನಾನಾಮಾಕರಸ್ಥಾನಂ ಕನಕಕ್ಷೇತ್ರಸಂಜ್ಞಕಮ್ ॥ ೭೬

ತತ್ರಾಂಗೀಕೃತ್ಯ ಭೂಪಸ್ಯ ಭಾಗಂ ಸಂವತ್ಸರಾವಧಿ ।
ಖಾತೇ ಖನನ್ ಕ್ಷಿತಿಂ ರತ್ನಂ ನೈಕಮಪ್ಯಸ್ಮಿ ಲಬ್ಧವಾನ್ ॥ ೭೭

ನಂದತ್ಸು ಲಬ್ಧರತ್ನೇಷು ಮದ್ವಿಧೇಷ್ವಪರೇಷು ಚ ।
ಗತ್ವಾಬ್ಧಿತೀರೇ ದುಃಖಾರ್ತಃ ಕಾಷ್ಠಾನ್ಯಹಮುಪಾಹರಮ್ ॥ ೭೮

ಅಗ್ನಿಪ್ರವೇಶಾಯ ಚಿತಾಂ ಯಾವತ್ತತ್ರ ಕರೋಮಿ ತೈಃ ।
ಜೀವದತ್ತಾಭಿಧಸ್ತಾವತ್ ಕೋಽಪ್ಯತ್ರ ವಣಿಗಾಯಯೌ ॥ ೭೯

ನಿವಾರ್ಯ ಮರಣಾತ್ತೇನ ದತ್ವಾ ವೃತ್ತಿಂ ದಯಾಲುನಾ ।
ಗೃಹೀತೋಽಹಂ ಪ್ರವಹಣೇ ಸ್ವರ್ಣದ್ವೀಪಂ ಯಿಯಾಸತಾ ॥ ೮೦

೮೧. ಮುಂದೆ ಹಡಗು ಸಮುದ್ರ ಮಧ್ಯದಲ್ಲಿ ಹೋಗುತ್ತ ಐದು ದಿನಗಳು ಕಳೆದಿರುವಾಗ ಇದ್ದಕ್ಕಿದ್ದಂತೆ ಆಕಾಶದಲ್ಲಿ ಮೋಡವು ಕಾಣಿಸಿಕೊಂಡಿತು.

೮೨. ಬಿರುಗಾಳಿಯ ಕಾರಣ ದಪ್ಪ ಹನಿಗಳ ಧಾರೆಗಳಿಂದ ತುಂಬಿದ ಮಳೆ ಸುರಿಯಲು ಹಡಗು ಮತ್ತೇರಿದ ಆನೆಯ ತಲೆಯಂತೆ, ಅಲುಗಾಡಲಾರಂಭಿಸಿತು.

೮೩. ವಿಧಿವಶದಿಂದ ಕ್ಷಣಕಾಲದಲ್ಲಿ ಹಡಗು ಒಡೆದು ಮುಳುಗಿ ಹೋಯಿತು. ಆಗ ನೀರಿನಲ್ಲಿ ಮುಳುಗುತ್ತಿದ್ದ ನನಗೆ ಹಲಗೆಯೊಂದು ಸಿಕ್ಕಿತು.

೮೪. ಅದನ್ನು ಏರಿ, ವಿಧಿವಶದಿಂದ, ಮೋಡದ ಆರ್ಭಟವು ನಿಲ್ಲಲು, ಈ ಪ್ರದೇಶವನ್ನು ತಲುಪಿ ಇದೀಗ ಕಾಡುಪ್ರದೇಶದಲ್ಲಿ ಎದ್ದು ಬಂದಿದ್ದೇನೆ.

೮೫. ಈ ಭವನವನ್ನು ಕಂಡು ಒಳಕ್ಕೆ ಬಂದಾಗ ಸುಂದರಿಯೂ ತಾಪವನ್ನು ನೀಗಿಸುವವಳೂ ಕಣ್ಣುಗಳಿಗೆ ಅಮೃತ ವರ್ಷದಂತಿರುವವಳೂ ಆದ ನೀನು ನನಗೆ ಕಾಣಿಸಿದೆ.’

೮೬. ಅವನು ಇಷ್ಟು ಹೇಳಲಾಗಿ ಆಕೆಯು ಮಂಚದ ಮೇಲೆ ಅವನನ್ನು ಕುಳ್ಳಿರಿಸಿ ಅಪ್ಪಿಕೊಂಡಳು. ಆ ರಾಜದತ್ತೆಯು ಮತ್ತಿನಿಂದಲೂ ಮನ್ಮಥನಿಂದಲೂ ಮೋಹಿತಳಾಗಿಬಿಟ್ಟಳು.

೮೭. ಹೆಣ್ಣುತನ ಮತ್ತು ಏಕಾಂತ, ಗಂಡಸಿನ ಸಾನ್ನಿಧ್ಯ ಹಾಗೂ ಅಂಕೆಯಿಲ್ಲದಿರುವಿಕೆಯೆಂಬ ಐದು ಬೆಂಕಿಗಳು ಎಲ್ಲಿರುವವೋ ಅಲ್ಲಿ ಶೀಲವೆಂಬ ಹುಲ್ಲಿನ ಕಥೆಯೇನು ?

---

ತತೋಽಕಸ್ಮಾತ್ ಪ್ರವಹಣೇ ನಾಬ್ಧಿಮಧ್ಯೇನ ಗಚ್ಛತಾಮ್ ।
ಪಂಚಸ್ವಹಃಸು ಯಾತೇಷು ಮೇಘೋಽಕಸ್ಮಾದದೃಶ್ಯತ ॥ ೮೧

ಪ್ರವೃಷ್ಟೇ ಸ್ಥೂಲಧಾರಾಭಿರ್ಮೇಘೇಽಸ್ಮಿನ್ ಮಾರುತೇನ ತತ್ ।
ಅಘೂರ್ಣತ ಪ್ರವಹಣಂ ಮತ್ತಹಸ್ತಿಶಿರೋ ಯಥಾ ॥ ೮೨

ಕ್ಷಣಾನ್ನಿಮಜ್ಯ ಭಗ್ನೇಽಸ್ಮಿನ್ ಯಾನಪಾತ್ರೇ ವಿಧೇರ್ವಶಾತ್ ।
ಏಕಃ ಫಲಹಕಃ ಪ್ರಾಪ್ತಸ್ತತ್ಕಾಲಂ ಮಜ್ಜತಾ ಮಯಾ ॥ ೮೩

ತದಾರೂಢಸ್ತತಃ ಶಾಂತೇ ಮೇಘಾಟೋಪೇ ವಿಧೇರ್ವಶಾತ್ ।
ಇಮಂ ಪ್ರದೇಶಂ ಪ್ರಾಪ್ಯಾಹಮುತ್ತೀರ್ಣಃ ಸಾಂಪ್ರತಂ ವನೇ ॥ ೮೪

ವೀಕ್ಷ್ಯ ಚೇದಂ ಚತುಃಶಾಲಂ ಪ್ರವಿಶ್ಯಾಭ್ಯಂತರಂ ಮಯಾ ।
ದೃಷ್ಟಾ ದೃಷ್ಟಿಸುಧಾವೃಷ್ಟಿಸ್ತ್ವಂ ತಾಪಶಮನೀ ಶುಭೇ ॥ ೮೫

ಇತ್ಯುಕ್ತವಂತಂ ಪರ್ಯಂಕೇ ನಿವೇಶ್ಯೈವಾಲಿಲಿಂಗ ತಮ್ ।
ಮೋಹಿತಾ ರಾಜದತ್ತಾ ಸಾ ಮದೇನ ಮದನೇನ ಚ ॥ ೮೬

ಸ್ತ್ರೀತ್ವಂ ಕ್ಷೀಬತ್ವಮೇಕಾಂತಃ ಪುಂಸೋ ಲಾಭೋಽನಿಯಂತ್ರಣಾ ।
ಯತ್ರ ಪಂಚಾಗ್ನಯಸ್ತತ್ರ ವಾರ್ತಾ ಶೀಲತೃಣಸ್ಯ ಕಾ ॥ ೮೭

೮೮. ಹೀಗೆ ಕಾಮದಿಂದ ಮೈಮರೆತ ಹೆಣ್ಣು ವಿಚಾರ ಮಾಡಲು ಸಮರ್ಥಳಲ್ಲ. ಆ ರಾಣಿಯು ಕಷ್ಟಕ್ಕೆ ಸಿಲುಕಿದ್ದ ಹಾಗೂ ಕಾಮಿಸಲು ಅರ್ಹರಲ್ಲದವನನ್ನು ಏಕೆ ಆಸೆಪಟ್ಟಳೋ !

೮೯. ಆ ವೇಳೆಗೆ ರಾಜನಾದ ರತ್ನಾಧಿಪತಿಯು ರತ್ನಕೂಟದಿಂದ ಗಗನಗಾಮಿ ಗಜವಾಹನವನ್ನೇರಿ ತವಕದಿಂದ ಬೇಗನೆ ಬಂದನು.

೯೦. ಒಳಗೆ ಬರುತ್ತಲೇ ಗಂಡಸಿನೊಂದಿಗೆ ತನ್ನ ಮಡದಿ ರಾಜದತ್ತೆಯು ರತಿಕ್ರೀಡೆಯಲ್ಲಿ ನಿರತಳಾಗಿದ್ದನ್ನು ನೋಡಿದನು.

೯೧. ಕಂಡಕೂಡಲೇ ಕೊಲ್ಲಬೇಕೆಂಬ ಮನಸ್ಸಾದರೂ ಕಾಲಿಗೆ ಬಿದ್ದ ಆ ಪುರುಷನ ದೀನ ವಾಕ್ಯಗಳನ್ನು ಕೇಳಿ ಅವನನ್ನು ಕೊಲ್ಲಲಿಲ್ಲ.

೯೨. ಮತ್ತೇರಿದ್ದ ಮತ್ತು ತಲ್ಲಣಗೊಂಡಿದ್ದ ಹೆಂಡತಿಯನ್ನು ನೋಡಿ ಅವನು ಹೀಗೆ ಚಿಂತಿಸಿದನು : ಮನ್ಮಥನ ಏಕಮಾತ್ರ ಮಿತ್ರನಾಗಿರುವ ಮದ್ಯದಲ್ಲಿ ಮುಳುಗಿರುವ ಹೆಂಗಸು ಪತಿವ್ರತೆಯಾಗಿರುವುದು ಹೇಗೆ ಸಾಧ್ಯ ?

೯೩. ಚಂಚಲಸ್ತ್ರೀಯನ್ನು ಸುರಕ್ಷೆಯಿಂದೆಲ್ಲ ನಿಯಂತ್ರಿಸಲು ಸಾಧ್ಯವಿಲ್ಲ. ಇನ್ನು ಪ್ರಳಯಮಾರುತಗಳ ಗುಂಪನ್ನು ತೋಳುಗಳಿಂದ ಕಟ್ಟಿಹಾಕಲು ಎಂದಾದರೂ ಸಾಧ್ಯವಾದೀತೇ ?

---

ನ ಚೈವಂ ಕ್ಷಮತೇ ನಾರೀ ವಿಚಾರಂ ಮಾರಮೋಹಿತಾ ।
ಯದಿಯಂ ಚಕಮೇ ರಾಜ್ಞೀ ತಮಕಾಮ್ಯಂ ವಿಪದ್ಗತಮ್ ॥ ೮೮

ತಾವಚ್ಚ ರತ್ನಾಧಿಪತಿಃ ಸ ರಾಜಾ ರತ್ನಕೂಟತಃ ।
ಆಜಗಾಮೋತ್ಸುಕಸ್ತೂರ್ಣಂ ದ್ಯುಚರದ್ವಿಪವಾಹನಃ ॥ ೮೯

ಪ್ರವಿಶಂಶ್ಚಾತ್ರ ಸೋಽಪಶ್ಯತ್ ತಾದೃಶೇನಾಪಿ ತೇನ ತಾಮ್ ।
ಪುರುಷೇಣ ಸಮಂ ಭಾರ್ಯಾಂ ರಾಜದತ್ತಾಂ ರತಿಸ್ಥಿತಾಮ್ ॥ ೯೦

ದೃಷ್ಟ್ವಾ ಜಿಘಾಂಸಿತಮಪಿ ಕ್ಷಿತೀಶಃ ಪುರುಷಂ ಸ ತಮ್ ।
ನಾವಧೀತ್ ಪಾದಪತಿತಂ ಬ್ರುವಾಣಂ ಕೃಪಣಾ ಗಿರಃ ॥ ೯೧

ಭಾರ್ಯಾಂ ಭೀತಾಂ ಚ ಮತ್ತಾಂ ತಾಂ ಸ ವೀಕ್ಷ್ಯೈವಮಚಿಂತಯತ್ ।
ಮದ್ಯೇ ಮಾರೈಕಸುಹೃದಿ ಪ್ರಸಕ್ತಾ ಸ್ತ್ರೀ ಸತೀ ಕುತಃ ॥ ೯೨

ನಿಯಂತುಂ ಚಪಲಾ ನಾರೀ ರಕ್ಷಯಾಪಿ ನ ಶಕ್ಯತೇ ।
ಕಿಂ ನಾಮೋತ್ಪಾತವಾತಾಲೀ ಬಾಹುಭ್ಯಾಂ ಜಾತು ಬಧ್ಯತೇ ॥ ೯೩

೯೪. ಜೋಯಿಸರು ಹೇಳಿದ ಮಾತನ್ನು ಕೇಳದಿದ್ದುದರಿಂದ ಉಂಟಾದ ಕೆಟ್ಟ ಪರಿಣಾಮವಿದು. ಆಪ್ತವಾಕ್ಯವನ್ನು ತಿರಸ್ಕರಿಸಬಾರದು.

೯೫. ಶೀಲವತಿಯ ತಂಗಿಯೆಂದು ಮಾತ್ರ ಇವಳನ್ನು ತಿಳಿದ ನಾನು ಅಮೃತದೊಡನೆ ಹುಟ್ಟಿದ ಕಾಲಕೂಟವಿಷದ ಜ್ವಾಲೆಯನ್ನು ಮರೆತುಬಿಟ್ಟೆ

೯೬. ಅಥವಾ ಅದ್ಭುತ ಕಾರ್ಯಗಳನ್ನೆಸಗುವ ವಿಧಿಯ ಕೃತ್ಯವನ್ನು ಪುರುಷಪ್ರಯತ್ನದಿಂದ ಗೆಲ್ಲಲು ಯಾರು ಸಮರ್ಥರಿದ್ದಾರೆ ?

೯೭. ಹೀಗೆ ಆಲೋಚಿಸಿದ ಅವನು ಯಾರ ಮೇಲೂ ಕೋಪಮಾಡಿಕೊಳ್ಳಲಿಲ್ಲ. ವ್ಯಾಪಾರಿಯ ಮಗನ ಕಥೆಯನ್ನು ಕೇಳಿ ಆ ಕಳ್ಳ ಕಾಮಿಯನ್ನು ಬಿಟ್ಟು ಬಿಟ್ಟನು.

೯೮. ಅಲ್ಲಿಂದ ಬಿಡುಗಡೆ ಹೊಂದಿದ ಆ ವ್ಯಾಪಾರಿಯ ಮಗನು ಬೇರೆ ದಾರಿ ಕಾಣದೆ ಹೊರಬಂದು ಸಮುದ್ರದಲ್ಲಿ ದೂರದಿಂದ ಬರುತ್ತಿದ್ದ ಹಡಗೊಂದನ್ನು ನೋಡಿದನು.

೯೯. ಆಮೇಲೆ ಅದೇ ಹಲಗೆಯನ್ನೇರಿ ಅವನು ಸಮುದ್ರದಲ್ಲಿ ಸುತ್ತುತ್ತಾ "ದಯವಿಟ್ಟು ನನ್ನನ್ನು ಕಾಪಾಡಿರಿ' ಎಂದು ಕೂಗಿ ಕರೆದು ಗೋಳಾಡಿದನು.

೧೦೦. ಆಗ ಹಡಗಿನಲ್ಲಿ ಹೋಗುತ್ತಿದ್ದ ಕ್ರೋಧವರ್ಮನೆಂಬ ವ್ಯಾಪಾರಿಯು ಇವನನ್ನು ಅಲ್ಲಿಂದ ಮೇಲೆತ್ತಿ ತನ್ನ ಬಳಿ ಇರಿಸಿಕೊಂಡನು.

---

ನ ಕೃತಂ ಗಣಕೋಕ್ತಂ ಯತ್ತದಿದಂ ತಸ್ಯ ಮೇ ಫಲಮ್ ।
ವಿಪಾಕಕಟುಕಂ ತಸ್ಮಾತ್ ನಾಪ್ತವಾಕ್ಯಾವಧೀರಣಮ್ ॥ ೯೪

ಶೀಲವತ್ಯಾಃ ಸ್ವಸೇತೀಮಾಂ ಜಾನತೋ ಬತ ವಿಸ್ಮೃತಾ ।
ಸುಧಾಯಾಃ ಸಹಜಾ ಸಾ ಮೇ ಕಾಲಕೂಟವಿಷಚ್ಛಟಾ ॥ ೯೫

ಅಥವಾ ಕಃ ಸಮರ್ಥಃ ಸ್ಯಾದಸಂಭಾವ್ಯಂ ವಿಚೇಷ್ಟಿತಮ್ ।
ಜೇತುಂ ಪುರುಷಕಾರೇಣ ವಿಧೇರದ್ಭುತಕರ್ಮಣಃ ॥ ೯೬

ಇತ್ಯಾಲೋಚ್ಯ ನ ಚುಕ್ರೋಧ ಕಸ್ಮೈಚಿತ್ತಂ ಜಹೌ ಚ ಸಃ ।
ಪೃಷ್ಟೋದಂತಂ ವಣಿಕ್ಪುತ್ರಂ ರಾಜಾ ಪ್ರಚ್ಛನ್ನಕಾಮುಕಮ್ ॥ ೯೭

ಸೋಽಪಿ ಮುಕ್ತಸ್ತತೋಽಪಶ್ಯನ್ ಗತಿಂ ಕಾಂಚಿದ್ವಣಿಕ್ಸುತಃ ।
ನಿರ್ಗತ್ಯಾಬ್ಧೌ ಪ್ರವಹಣಂ ದೂರಾದಾಗಚ್ಛದೈಕ್ಷತ ॥ ೯೮

ತತಃ ಫಲಹಕಂ ಭೂಯಸ್ತಮೇವಾರುಹ್ಯ ಸೋಽಂಬುಧೌ ।
ಭ್ರಮನ್ ಫೂತ್ಕೃತ್ಯ ಚಕ್ರಂದ ಮಾಮುದ್ಧರತ ಭೋ ಇತಿ ॥ ೯೯

ತೇನ ತಂ ಕ್ರೋಧವರ್ಮಾಖ್ಯೋ ವಣಿಕ್ ತದ್ಯಾನಪಾತ್ರಗಃ ।
ಸಮುದ್ಧೃತ್ಯ ವಣಿಕ್ಪುತ್ರಂ ಚಕಾರಾಂತಿಕವರ್ತಿನಮ್ ॥ ೧೦೦

೧೧೧. ವಿಧಿಯು ಯಾರಿಗೆ ಏನು ಕೆಲಸ ನೀಡಿರುವುದೋ ಅದೇ ಅವನ ನಾಶಕ್ಕೆ ಕಾರಣವಾಗುವುದು. ಆತನು ಎಲ್ಲೆಲ್ಲಿ ಓಡಿದರೂ ವಿಧಿಯು ಅವನ ಹಿಂದೆಯೇ ಅಲ್ಲಿ ಓಡುತ್ತ ಹಿಂಬಾಲಿಸುವುದು.

೧೧೨. ಏಕೆಂದರೆ ಅಲ್ಲಿದ್ದ ಆ ಮೂರ್ಖನು ಗುಟ್ಟಾಗಿ ಒಡೆಯನ ಮಡದಿಯೊಂದಿಗೆ ಕೂಡಿದನು. ಅದನ್ನು ನೋಡಿದ ಕ್ರೋಧವರ್ಮನು ಅವನನ್ನು ಸಮುದ್ರಕ್ಕೆ ಎಸೆದಾಗ ಆ ವ್ಯಾಪಾರಿಯ ಮಗನು ಅಲ್ಲಿಯೇ ಸತ್ತನು.

೧೧೩–೧೧೪. ಅಷ್ಟರಲ್ಲಿ ಸಮಾಧಾನಗೊಂಡ ರಾಜ ರತ್ನಾಧಿಪತಿಯು ರಾಜದತ್ತೆಯನ್ನು ಅವಳ ಪರಿವಾರದೊಂದಿಗೆ ಶ್ವೇತರಶ್ಮಿಯ ಮೇಲೆ ಕೂರಿಸಿಕೊಂಡು ಕರೆತಂದು ರತ್ನಕೂಟವನ್ನು ತಲುಪಿ ಶೀಲವತಿಗೆ ತಂಗಿಯನ್ನು ಒಪ್ಪಿಸಿಕೊಟ್ಟು ಅವಳಿಗೂ ತನ್ನ ಮಂತ್ರಿಗಳಿಗೂ ರಾಜದತ್ತೆಯ ಕಥೆಯನ್ನು ಬಣ್ಣಿಸಿದನು.

೧೧೫. ಸಾರವೂ ರಸವೂ ಇಲ್ಲದ ಭೋಗಗಳಲ್ಲಿ ಮನಸ್ಸಿಟ್ಟು ತಾನು ಎಷ್ಟೆಲ್ಲ ಕಷ್ಟಗಳನ್ನು ಅನುಭವಿಸಿದೆನೆಂದು ಹೇಳಿದನು.

೧೧೬. ಆದ್ದರಿಂದ ಈಗ ಕಾಡಿಗೆ ಹೋಗಿ ವಿಷ್ಣುವನ್ನು ಆಶ್ರಯಿಸುತ್ತೇನೆ. ಅದರಿಂದ ಪುನಃ ಇಂತಹ ದುಃಖಗಳಿಗೆ ಈಡಾಗುವುದಿಲ್ಲ.

---

ಯಸ್ಯ ಯದ್ವಿಹಿತಂ ಧಾತ್ರಾ ಕರ್ಮ ನಾಶಾಯ ತಸ್ಯ ತತ್ ।
ಪದವೀಂ ಯತ್ರ ತತ್ರಾಪಿ ಧಾವತೋಽಪ್ಯನುಧಾವತಿ ॥ ೧೧೧

ಯತ್ಸ ತತ್ರ ಸ್ಥಿತೋ ಮೂಢಸ್ತತ್ಪತ್ನ್ಯಾ ಸಂಗತೋ ರಹಃ ।
ವಿಲೋಕ್ಯ ವಣಿಜಾ ತೇನ ಕ್ಷಿಪಿತೋಽಬ್ಧೌ ವ್ಯಪದ್ಯತ ॥ ೧೧೨

ತಾವಚ್ಚ ರತ್ನಾಧಿಪತಿಃ ಸ ರಾಜಾ ಸಪರಿಚ್ಛದಾಮ್ ।
ಆರೋಪ್ಯ ಶ್ವೇತರಶ್ಮೌ ತಾಂ ರಾಜದತ್ತಾಮಕೋಪನಃ ॥ ೧೧೩

ಪ್ರಾಪಯ್ಯ ರತ್ನಕೂಟಂ ಚ ಶೀಲವತ್ಯಾಃ ಸಮರ್ಪ್ಯ ಚ ।
ತಸ್ಯೈ ಚ ಸಚಿವೇಭ್ಯಶ್ಚ ತದ್ವೃತ್ತಾಂತಮವರ್ಣಯತ್ ॥ ೧೧೪

ಜಗಾದ ಚ ಕಿಯದ್ದುಃಖಮನುಭೂತಮಹೋ ಮಯಾ ।
ಅಸಾರವಿರಸೇಷ್ವೇಷು ಭೋಗೇಷ್ವಾಸಕ್ತಚೇತಸಾ ॥ ೧೧೫

ತದಿದಾನೀಂ ವನಂ ಗತ್ವಾ ಹರಿಂ ಶರಣಮಾಶ್ರಯೇ ।
ಯೇನ ಸ್ಯಾಂ ನೈವ ದುಃಖಾನಾಂ ಭಾಜನಂ ಪುನರೀದೃಶಾಮ್ ॥ ೧೧೬

೧೦೭. ಹೀಗೆ ಹೇಳಿದ ದುಃಖಿತನಾದ ರಾಜನು ಮಂತ್ರಿಗಳೂ ಶೀಲವತಿಯೂ ತಡೆಯುತ್ತಿದ್ದರೂ ವೈರಾಗ್ಯದಿಂದ ತನ್ನ ತೀರ್ಮಾನವನ್ನು ಬಿಡಲಿಲ್ಲ.

೧೦೮–೧೦೯. ಆಮೇಲೆ ರಾಜನು ಮೊದಲು ತನ್ನ ಕೋಶದ ಅರ್ಧಭಾಗವನ್ನು ಶೀಲವತಿಗೆ ಕೊಟ್ಟು ಉಳಿದ ಅರ್ಧವನ್ನು ಬ್ರಾಹ್ಮಣರಿಗೆ ದಾನಮಾಡಿ ಬೇರಾವ ಸುಖದ ಆಸೆಯೂ ಇಲ್ಲದವನಾಗಿ ಪಾಪಭುಂಜನ ಎಂಬ ಗುಣವಂತ ಬ್ರಾಹ್ಮಣನಿಗೆ ಶಾಸ್ತ್ರವಿಧಿಯಂತೆ ತನ್ನ ರಾಜ್ಯವನ್ನು ಕೊಟ್ಟುಬಿಟ್ಟನು.

೧೧೦. ರಾಜ್ಯವನ್ನು ದಾನ ಮಾಡಿದ ಮೇಲೆ ಅವನು ಆಕಾಶಮಾರ್ಗದಲ್ಲಿ ತಪೋವನಕ್ಕೆ ಹೋಗಲು ಪ್ರಜೆಗಳು ಕಣ್ಣೀರು ಸುರಿಸುತ್ತ ನೋಡುತ್ತಿರುವಂತೆಯೇ, ಶ್ವೇತರಶ್ಮಿಯನ್ನು ಬರಮಾಡಿಕೊಂಡನು.

೧೧೧. ಕರೆತಂದ ಕೂಡಲೇ ಆ ಆನೆಯು ತನ್ನ ಆ ಶರೀರವನ್ನು ತ್ಯಜಿಸಿ ಹಾರ ಕೇಯೂರಗಳಿಂದ ಕಂಗೊಳಿಸುವ ದಿವ್ಯ ಪುರುಷನ ರೂಪವನ್ನು ತಳೆಯಿತು.

೧೧೨. "ನೀನು ಯಾರು ? ಇದು ಏನು ?' ಎಂದು ರಾಜನು ಕೇಳಿದಾಗ ಅವನೆಂದನು: ನಾವಿಬ್ಬರೂ ಮಲಯ ಪರ್ವತದಲ್ಲಿ ವಾಸಿಸುವ ಗಂಧರ್ವ ಸೋದರರು.

೧೧೩. "ನಾನು ಹಿರಿಯವನಾದ ಸೋಮಪ್ರಭ ಇನ್ನೊಬ್ಬನಾದ ದೇವಪ್ರಭ ನನ್ನ ತಮ್ಮ. ಅವನಿಗೆ ಅತ್ಯಂತ ಪ್ರೀತಿಪಾತ್ರಳಾದ ರಾಜವತಿಯೆಂಬ ಒಬ್ಬಳೇ ಮಡದಿಯಿದ್ದಳು.

---

ಇತ್ಯೂಚಿವಾನ್ ಸ ಸಚಿವೈರ್ವಾರ್ಯಮಾಣೋಽಪಿ ದುಃಖಿತಃ ।
ಶೀಲವತ್ಯಾ ಚ ವೈರಾಗ್ಯಾನ್ನಿಶ್ಚಯಂ ನೈವ ತಜ್ಜಹೌ ॥ ೧೦೭

ತತೋಽರ್ಧಮರ್ಪಯಿತ್ವಾದಾವೇಕಂ ಸಾಧ್ವ್ಯೈ ಸ್ವಕೋಷತಃ ।
ಶೀಲವತ್ಯೈ ದ್ವಿಜೇಭ್ಯೋಽರ್ಧಂ ದತ್ವಾನ್ಯದ್ಭೋಗನಿಸ್ಪೃಹಃ ॥ ೧೦೮

ಪಾಪಭುಂಜನಸಂಜ್ಞಾಯ ಬ್ರಾಹ್ಮಣಾಯ ಯಥಾವಿಧಿ ।
ದದೌ ಗುಣಗರಿಷ್ಠಾಯ ನಿಜಂ ರಾಜ್ಯಂ ಸ ಭೂಪತಿಃ ॥ ೧೦೯

ದತ್ತರಾಜ್ಯಶ್ಚ ನಭಸಾ ಸ ಗಮಿಷ್ಯಂಸ್ತಪೋವನಮ್ ।
ಆನಾಯಯತ್ ಶ್ವೇತರಶ್ಮಿಂ ಪೌರಾಣಾಂ ಸಾಶ್ರು ಪಶ್ಯತಾಮ್ ॥ ೧೧೦

ಆನೀತಮಾತ್ರಃ ಸ ಕರೀ ಶರೀರಂ ಪ್ರವಿಮುಚ್ಯ ತತ್ ।
ಪುರುಷೋ ದಿವ್ಯರೂಪೋಽಭೂದ್ಧಾರಕೇಯೂರರಾಜಿತಃ ॥ ೧೧೧

ಕೋ ಭವಾನ್ ಕಿಮಿದಂ ಚೇತಿ ಪೃಷ್ಟೋ ರಾಜ್ಞಾ ಜಗಾದ ಸಃ ।
ಗಂಧರ್ವೌ ಭ್ರಾತರಾವಾವಾಮುಭೌ ಮಲಯವಾಸಿನೌ ॥ ೧೧೨

ಅಹಂ ಸೋಮಪ್ರಭೋ ನಾಮ ಜ್ಯೇಷ್ಠೋ ದೇವಪ್ರಭಶ್ಚ ಸಃ ।
ತಸ್ಯ ಚೈಕೈವ ಮದ್ಭ್ರಾತುರ್ಭಾರ್ಯಾ ಸಾ ಚಾತಿವಲ್ಲಭಾ ॥ ೧೧೩

೧೪. ಆತನು ಒಮ್ಮೆ ಆಕೆಯನ್ನು ತೊಡೆಯಮೇಲೆ ಕೂಡಿಸಿಕೊಂಡು ನನ್ನ ಜೊತೆ ಹೋಗುತ್ತಾ ಸಿದ್ಧವಾಸವೆಂಬ ಸ್ಥಳವನ್ನು ತಲುಪಿದನು.

೧೫. ಅಲ್ಲಿನ ವಿಷ್ಣುದೇವಾಲಯದಲ್ಲಿ ದೇವರನ್ನು ಪೂಜಿಸಿದ ನಾವೆಲ್ಲರೂ ದೇವರೆದುರಿಗೆ ಹಾಡಲು ಆರಂಭಿಸಿದೆವು.

೧೬. ಆ ವೇಳೆಗೆ ಅಲ್ಲಿಗೆ ಬಂದ ಸಿದ್ಧನೊಬ್ಬನು ರಾಜವತಿಯು ಸುಶ್ರಾವ್ಯವಾಗಿ ಹಾಡುತ್ತಿರುವುದನ್ನು ರೆಪ್ಪೆ ಮಿಟುಕಿಸದೇ ನೋಡುತ್ತಾ ನಿಂತಿದ್ದನು.

೧೭. ಆಗ ನನ್ನ ತಮ್ಮನು ಸಿಟ್ಟು ಮಾಡಿಕೊಂಡು ಸಿದ್ಧನಾಗಿದ್ದರೂ ಪರನಾರಿಯನ್ನು ಆಸೆಯಿಂದ ಏಕೆ ನೋಡುತ್ತಿರುವೆ ಎಂದು ಅಸೂಯೆಯಿಂದ ನುಡಿದನು.

೧೮. ಆಗ ಕುಪಿತನಾದ ಆ ಸಿದ್ಧನು ಶಾಪನೀಡಲು ಇಂತೆಂದನು. "ಆಶ್ಚರ್ಯಕರವಾದ ಹಾಡುಗಾರಿಕೆಯಿಂದ ನಾನು ನೋಡಿದೆನೇ ಹೊರತು, ಎಲೈ ಮೂರ್ಖನೇ ! ಕಾಮುಕತನದಿಂದಲ್ಲ.

೧೯. ಆದ್ದರಿಂದ ಅಸೂಯಾವಂತನಾದ ನೀನು ಇವಳೊಂದಿಗೆ ಕೆಳಗೆ ಮನುಷ್ಯಜನ್ಮದಲ್ಲಿ ಹುಟ್ಟು ಅಲ್ಲಿ ಇವಳೇ ಬೇರೊಬ್ಬನೊಂದಿಗೆ ಕೂಡಿರುವುದನ್ನು ಸಾಕ್ಷಾತ್ತಾಗಿ ನೋಡು.'

೨೦. ಚಿಕ್ಕವಯಸ್ಸಿನ ಕಾರಣದಿಂದ ಅವನು ಶಾಪಕೊಟ್ಟ ಕೋಪದಿಂದ ನಾನು ಕೈಯಲ್ಲಿದ್ದ ಆಟದ ಬಿಳಿಯ ಮಣ್ಣಿನ ಆನೆಯಿಂದ ಅವನಿಗೆ ಹೊಡೆದೆನು.

---

ಸ ತಾಂ ರಾಜವತೀಂ ನಾಮ ಕೃತ್ವೋತ್ಸಂಗೇ ಪರಿಭ್ರಮನ್ ।
ಏಕದಾ ಸಿದ್ಧವಾಸಾಖ್ಯಂ ಸ್ಥಾನಂ ಪ್ರಾಯಾನ್ಮಯಾ ಸಹ ॥ ೧೪

ಕೇಶವಾಯತನೇ ತತ್ರ ವಯಮಭ್ಯರ್ಚಿತಾಚ್ಯುತಾಃ ।
ಪ್ರಾವರ್ತಾಮಹಿ ಸರ್ವೇಽಪಿ ಗಾತುಂ ಭಗವತಃ ಪುರಃ ॥ ೧೫

ತಾವದಾಗತ್ಯ ತತ್ರೈಕಃ ಸಿದ್ಧಸ್ತಾಂ ಶ್ರವ್ಯಗಾಯಿನೀಮ್ ।
ದೃಶಾ ರಾಜವತೀಂ ಪಶ್ಯನ್ನತಿಷ್ಠದನಿಮೇಷಯಾ ॥ ೧೬

ಸಿದ್ಧೋಽಪಿ ಸಾಭಿಲಾಷಂ ಕಿಂ ಪರನಾರೀಂ ನಿರೀಕ್ಷಸೇ ।
ಇತಿ ಸೇರ್ಷ್ಯಃ ಸ ಮದ್ಭ್ರಾತಾ ಕ್ರುದ್ಧಃ ಸಿದ್ಧಂ ತಮಬ್ರವೀತ್ ॥ ೧೭

ತತಃ ಸ ಸಿದ್ಧಃ ಕುಪಿತಃ ಶಪ್ತುಮೇವಂ ತಮಭ್ಯಧಾತ್ ।
ಗೀತಾಶ್ಚರ್ಯಾನ್ಮಯಾ ಮೂಢ ವೀಕ್ಷಿತೇಯಂ ನ ಕಾಮತಃ ॥ ೧೮

ತನ್ಮರ್ತ್ಯಯೋನಾವೀರ್ಷ್ಯಾಲುಃ ಪತ ತ್ವಮನಯಾ ಸಹ ।
ಪಶ್ಯೈತಾಮೇವ ಭಾರ್ಯಾಂ ತ್ವಂ ಸಾಕ್ಷಾತ್ತತ್ರಾನ್ಯಸಂಗತಾಮ್ ॥ ೧೯

ಇತ್ಯುಕ್ತವಾನ್ಮಯಾ ಸೋಽಥ ಬಾಲ್ಯಾತ್ತಚ್ಛಾಪಕೋಪತಃ ।
ಹಸ್ತಸ್ಥೇನಾಹತಃ ಕ್ರೀಡಾಮೃಣ್ಮಯಶ್ವೇತಹಸ್ತಿನಾ ॥ ೨೦

೧೨೧. ಆಗ ಅವನು "ನೀನು ಆನೆಯಿಂದ ಹೊಡೆದ ಕಾರಣ ಭೂಮಿಯಲ್ಲಿ ಅಂಥದೇ ಬಿಳಿಯ ಆನೆಯಾಗಿ ಹುಟ್ಟು' ಎಂದು ನನಗೂ ಶಾಪವಿತ್ತನು.

೧೨೨. ಆಮೇಲೆ ನನ್ನ ತಮ್ಮನಾದ ದೇವಪ್ರಭನು ಅವನನ್ನು ಒಲೈಸಲು ದಯಾಳುವಾದ ಆ ಸಿದ್ಧನು ನಮ್ಮ ಶಾಪವು ಕೊನೆಗೊಳ್ಳುವ ಬಗೆಯನ್ನು ಹೇಳಿದನು.

೧೨೩. "ನೀನು ಮನುಷ್ಯನೇ ಆದರೂ ದ್ವೀಪದ ಒಡೆಯನಾಗಿ ವಿಷ್ಣುವಿನ ಪ್ರಭಾವದಿಂದ ಆನೆಯಾದ ಈ ತಮ್ಮನನ್ನು ದಿವ್ಯವಾಹನವನ್ನಾಗಿ ಪಡೆಯಲಿರುವೆ.

೧೨೪. ಎಂಬತ್ತು ಸಾವಿರ ಸ್ತ್ರೀಯರನ್ನು ಪಡೆದು ನೀನು ಎಲ್ಲ ಜನರ ಸಮ್ಮುಖದಲ್ಲಿ ಅವರ ದುರ್ನಡತೆಯನ್ನು ಅರಿಯುವೆ.

೧೨೫. ಮನುಷ್ಯಜನ್ಮದಲ್ಲಿರುವ ಈಕೆಯನ್ನೂ ನೀನು ಮದುವೆಯಾಗಲಿರುವೆ. ಇವಳೂ ಬೇರೊಬ್ಬನ ಜೊತೆ ಸೇರಿಕೊಂಡಿರುವುದನ್ನು ಪ್ರತ್ಯಕ್ಷ ನೋಡುವೆ.

೧೨೬-೧೨೭. ಅನಂತರ ವಿರಕ್ತ ಹೃದಯನಾಗಿ ರಾಜ್ಯವನ್ನು ಬ್ರಾಹ್ಮಣನಿಗೆ ನೀಡಿ ಎಲೈ ದೇವಪ್ರಭನೇ ! ಯಾವಾಗ ನೀನು ಶಮಹೊಂದಿ ಕಾಡಿಗೆ ಹೊರಡಲು ಅನುವಾಗುವೆಯೋ ಆಗ ನಿನ್ನ ತಮ್ಮನು ಮೊದಲಿಗೆ ಆನೆಯ ಜನ್ಮದಿಂದ ಬಿಡುಗಡೆ ಹೊಂದುತ್ತಾನೆ.'

---

ತತಃ ಸ ಮಾಂ ಸಮಶಪದ್ಯೇನಾಹಂ ಭವತಾ ಹತಃ ।
ತಾದೃಕ್ ಶ್ವೇತೋ ಗಜೋ ಭೂಮೌ ಭವಾನುತ್ಪದ್ಯತಾಮಿತಿ ॥ ೧೨೧

ಅಥಾನುನೀತೋ ಮದ್‌ಭ್ರಾತ್ರಾ ತೇನ ದೇವಪ್ರಭೇಣ ಸಃ ।
ಸಿದ್ಧಃ ಕೃಪಾಲುಃ ಶಾಪಾಂತಮೇವಮಸ್ಮಾಕಮಬ್ರವೀತ್ ॥ ೧೨೨

ಹರೇಃ ಪ್ರಸಾದಾನ್ಮರ್ತ್ಯೋಽಪಿ ಭೂತ್ವಾ ದ್ವೀಪೇಶ್ವರೋ ಭವಾನ್ ।
ಗಜೀಭೂತಮಿಮಂ ಪ್ರಾಪ್ಸ್ಯಸ್ಯನುಜಂ ದಿವ್ಯವಾಹನಮ್ ॥ ೧೨೩

ಅಂತಃಪುರಸಹಸ್ರಾಣಿ ತ್ವಮಶೀತಿಮವಾಪ್ಸ್ಯಸಿ ।
ತೇಷಾಂ ವೇತ್ಸ್ಯಸಿ ದೌಃಶೀಲ್ಯಂ ಸರ್ವೇಷಾಂ ಜನಸಂನಿಧೌ ॥ ೧೨೪

ಅಥೈತಾಂ ಮಾನುಷೀಭೂತಾಂ ಸ್ವಭಾರ್ಯಾಂ ಪರಿಣೇಷ್ಯಸಿ ।
ಪ್ರತ್ಯಕ್ಷಮೇನಾಮಪಿ ಚ ದ್ರಕ್ಷ್ಯಸ್ಯನ್ಯೇನ ಸಂಗತಾಮ್ ॥ ೧೨೫

ತತೋ ವಿರಕ್ತಹೃದಯೋ ದತ್ವಾ ರಾಜ್ಯಂ ದ್ವಿಜನ್ಮನೇ ।
ದೇವಪ್ರಭ ಯದಾ ಶಾಂತೋ ವನಂ ಗಂತುಂ ಪ್ರವತ್ಸ್ಯಸಿ ॥ ೧೨೬

ತದಾ ಪ್ರಥಮಮುಕ್ತೇಽಸ್ಮಿನ್ ಗಜತ್ವಾದನುಜೇ ತವ ।
ಅನಯಾ ಭಾರ್ಯಯಾ ಸಾಕಂ ಶಾಪಾತ್ ತ್ವಮಪಿ ಮೋಕ್ಷ್ಯಸೇ ॥ ೧೨೭

೧೨೮. ಸಿದ್ಧನು ನುಡಿದ ಶಾಪ ಮುಗಿಯುವವರೆಗೆ ನಾವು ನಮ್ಮ ಪೂರ್ವಜನ್ಮದ ಕರ್ಮದ ಭಿನ್ನತೆಯಿಂದಾಗಿ ಹೀಗೆ ಹುಟ್ಟಿದೆವು. ಪ್ರತಿಯೊಬ್ಬರ ಯೋಗವೂ ಬೇರೆಯಾದ್ದರಿಂದ ಇಂದು ನಮಗೆ ಹೀಗೆ ಬಿಡುಗಡೆ.'

೧೨೯. ಹೀಗೆ ಸೋಮಪ್ರಭನು ನುಡಿಯಲು ರಾಜ ರತ್ನಾಧಿಪತಿಯು ತನ್ನ ಪೂರ್ವಜನ್ಮವನ್ನು ನೆನೆಸಿಕೊಂಡು "ಓಹೋ ನಾನು ಅದೇ ದೇವಪ್ರಭನು.

೧೩೦. ಈ ರಾಜದತ್ತೆಯೂ ನನ್ನ ಮಡದಿಯಾದ ರಾಜವತಿ' ಎನ್ನುತ್ತಾ ಅವಳೊಂದಿಗೆ ತನ್ನ ಶರೀರವನ್ನು ತ್ಯಜಿಸಿದನು.

೧೩೧. ಜನರೆಲ್ಲರೂ ನೋಡುತ್ತಿರುವಾಗಲೇ ಕ್ಷಣಕಾಲದಲ್ಲೇ ಮೂವರೂ ಗಂಧರ್ವರಾಗಿ ಆಕಾಶಕ್ಕೆ ನೆಗೆದು ಸ್ವಸ್ಥಾನವಾದ ಮಲಯಪರ್ವತಕ್ಕೆ ತೆರಳಿದರು.

೧೩೨. ಶೀಲವತಿಯಾದರೋ ನನ್ನ ಸನ್ನಡತೆಯ ಮಹಿಮೆಯಿಂದ ಐಶ್ವರ್ಯವನ್ನು ಪಡೆದು ತಾಮ್ರಲಿಪ್ತಿಗೆ ಹಿಂತಿರುಗಿ ಅಲ್ಲಿ ಸ್ವಧರ್ಮವನ್ನು ಪಾಲಿಸುತ್ತಾ ಇರುತ್ತಿದ್ದಳು.

೧೩೩. ಹೀಗೆ ಈ ಜಗತ್ತಿನಲ್ಲಿ ಎಲ್ಲಿಯೂ ಯಾರೂ ಒತ್ತಾಯದಿಂದ ಹೆಣ್ಣನ್ನು ಕಾಪಾಡಲು ಶಕ್ತನಲ್ಲ. ಆದರೆ ಕುಲಸ್ತ್ರೀಯರನ್ನು ಅವರ ಶುದ್ಧ ಸತ್ತ್ವವೆಂಬ ಪಾಶದ ಕಟ್ಟು ಮಾತ್ರ ಯಾವಾಗಲೂ ಕಾಪಾಡುತ್ತದೆ.

---

ಇತಿ ಸಿದ್ಧೋಕ್ತಶಾಪಾಂತಾ ವಯಂ ಪ್ರಾಕ್ಕರ್ಮಭೇದತಃ ।<br>
ಏವಂ ಜಾತಾಃ ಪೃಥಗ್ಯೋಗಾಚ್ಛಾಪಾಂತಃ ಸೈಷ ಚಾದ್ಯ ನಃ ॥ ೧೨೮

ಏವಂ ಸೋಮಪ್ರಭೇಣೋಕ್ತೇ ಸ ರತ್ನಾಧಿಪತಿರ್ನೃಪಃ ।<br>
ಜಾತಿಂ ಸ್ಮೃತ್ವಾಬ್ರವೀದ್ಧಂತ ಸೈಷ ದೇವಪ್ರಭೋ ಹ್ಯಹಮ್ ॥ ೧೨೯

ಏಷಾಪಿ ರಾಜದತ್ತಾ ಸಾ ಪತ್ನೀ ರಾಜವತೀ ಮಮ ।<br>
ಇತ್ಯುಕ್ತ್ವಾ ಸ ತಯಾ ಸಾಕಂ ಭಾರ್ಯಯಾ ತಾಂ ತನುಂ ಜಹೌ ॥ ೧೩೦

ಕ್ಷಣಾತ್ ಸರ್ವೇಽಪಿ ಗಂಧರ್ವಾ ಭೂತ್ವಾ ಲೋಕಸ್ಯ ಪಶ್ಯತಃ ।<br>
ಖಮುತ್ಪತ್ಯ ನಿಜಂ ಧಾಮ ಯಯುಸ್ತೇ ಮಲಯಾಚಲಮ್ ॥ ೧೩೧

ಶೀಲವತ್ಯಪಿ ಶೀಲಸ್ಯ ಮಾಹಾತ್ಮ್ಯಾತ್ ಪ್ರಾಪ್ಯ ಸಂಪದಮ್ ।<br>
ತಾಮ್ರಲಿಪ್ತೀಂ ಪುರೀಂ ಗತ್ವಾ ತಸ್ಥೌ ಧರ್ಮೋಪಸೇವಿನೀ ॥ ೧೩೨

ಇತಿ ಜಗತಿ ನ ರಕ್ಷಿತುಂ ಸಮರ್ಥಃ<br>
ಕ್ವಚಿದಪಿ ಕಶ್ಚಿದಪಿ ಪ್ರಸಹ್ಯ ನಾರೀಮ್ ।<br>
ಅವತಿ ತು ಸತತಂ ವಿಶುದ್ಧ ಏಕಃ<br>
ಕುಲಯುವತೀಂ ನಿಜಸತ್ತ್ವಪಾಶಬಂಧಃ ॥ ೧೩೩

೧೩೪. ಹೀಗೆ ಈ ಮಾತ್ಸರ್ಯವೆಂಬುದು ಮನುಷ್ಯರಿಗೆ ದುಃಖವನ್ನು ಮಾತ್ರವೇ ಉಂಟುಮಾಡುವ ದೋಷ. ಅದರಿಂದ ಬೇರೆಯವರಿಗೆ ದ್ವೇಷವೂ ಉಂಟಾಗುತ್ತದೆ. ಇದು ಹೆಂಗಸರಿಗೆ ಅತಿಯಾದ ಉತ್ಸುಕತೆಯನ್ನು ಹುಟ್ಟಿಸುವುದೇ ವಿನಾ ಅವರನ್ನು ಕಾಪಾಡಲಾರದು.

೧೩೫. ಹೀಗೆ ನರವಾಹನದತ್ತನು ತನ್ನ ಹೆಂಡತಿ ರತ್ನಪ್ರಭೆಯು ಹೇಳಿದ ಅರ್ಥವತ್ತಾದ ಕಥೆಯನ್ನು ಕೇಳಿ, ಮಂತ್ರಿಗಳ ಸಹಿತ ಬಹಳ ಸಂತೋಷಪಟ್ಟನು.

ಮಹಾಕವಿ ಸೋಮದೇವಭಟ್ಟನು ವಿರಚಿಸಿದ

ಕಥಾಸರಿತ್ಸಾಗರದ

ರತ್ನಪ್ರಭಾ ಲಂಬಕದ ಎರಡನೆಯ ತರಂಗ ಮುಗಿಯಿತು.

---

ಏವಂ ಚೇರ್ಷ್ಯಾ ನಾಮ ದುಃಖೈಕಹೇತುಃ
ದೋಷಃ ಪುಂಸಾಂ ದ್ವೇಷದಾಯೀ ಪರೇಷಾಮ್ ।
ಯೋಽಯಂ ಮಾ ಭೂದ್ರಕ್ಷಣಾಯಾಂಗನಾನಾಮ್
ಅತ್ಯೌತ್ಸುಕ್ಯಂ ಪ್ರತ್ಯುತಾಸಾಂ ಕರೋತಿ ॥ ೧೩೪
ಇತಿ ನರವಾಹನದತ್ತೋ ರತ್ನಪ್ರಭಯಾ ಸ್ವಭಾರ್ಯಯಾ ಕಥಿತಾಮ್ ।
ಸ ನಿಶಮ್ಯ ಕಥಾಮರ್ಥ್ಯಾಂ ಸಚಿವೈಃ ಸಾರ್ಧಂ ಪರಂ ಮುಮುದೇ ॥ ೧೩೫

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ರತ್ನಪ್ರಭಾಲಂಬಕೇ ದ್ವಿತೀಯಸ್ತರಂಗಃ ।

## ಮೂರನೆಯ ತರಂಗ

೧ ಹೀಗೆ ರತ್ನಪ್ರಭೆಯು ಹೇಳಿದ ಕಥೆಯನ್ನು ಮುಂದುವರೆಸಿದಂತೆ ಮಂತ್ರಿಯಾದ ಗೋಮುಖನು ನರವಾಹನದತ್ತನಿಗೆ ನುಡಿದನು.

೨. ಪತಿವ್ರತಾಸ್ತ್ರೀಯರು ಅತ್ಯಂತವಿರಳ. ಹೆಂಗಸರು ಯಾವಾಗಲೂ ಚಂಚಲೆಯರು ಹಾಗೂ ನಂಬಲು ಅರ್ಹರಲ್ಲದವರೆಂಬುದೇನೋ ನಿಜವೇ. ಒಡೆಯನೇ! ಈ ಕಥೆಯನ್ನೂ ಕೇಳು:

೩. ಇಲ್ಲಿ ವಿಶ್ವವಿಖ್ಯಾತವಾದ ಉಜ್ಜಯಿನಿಯೆಂಬ ನಗರವೊಂದಿದೆ. ಅಲ್ಲಿ ಹಿಂದೆ ನಿಶ್ಚಯದತ್ತನೆಂಬ ವ್ಯಾಪಾರಿಯ ಮಗನೊಬ್ಬನಿದ್ದನು.

೪–೫. ಅವನೊಬ್ಬ ಜೂಜುಕೋರ. ಪ್ರತಿದಿನವೂ ಜೂಜಿನಲ್ಲಿ ಹಣವನ್ನು ಗೆದ್ದು ಶಿಪ್ರಾನದಿಯಲ್ಲಿ ಸ್ನಾನ ಮಾಡಿ, ಮಹಾಕಾಲನನ್ನು ಪೂಜಿಸಿ, ಉದಾರಮನಸ್ಸಿನಿಂದ ಬ್ರಾಹ್ಮಣರಿಗೂ ದೀನರಿಗೂ ಅನಾಥರಿಗೂ ಸಮಾದಾನವಾಗಿ ದಾನ ಮಾಡಿ ವಿಲೇಪನ, ಆಹಾರ, ತಾಂಬೂಲ ಮೊದಲಾದವನ್ನು ನೀಡುತ್ತಿದ್ದನು.

---

## ತೃತೀಯಸ್ತರಂಗಃ

ಏವಂ ರತ್ನಪ್ರಭಾಖ್ಯಾತಕಥಾಕ್ರಮವಶಾದಥ ।
ನರವಾಹನದತ್ತಂ ತಂ ಸಚಿವೋ ಗೋಮುಖೋಽಬ್ರವೀತ್ ॥ ೧

ಸತ್ಯಂ ಸಾಧ್ವ್ಯಃ ಪ್ರವಿರಲಾಶ್ಚಪಲಾಸ್ತು ಸದಾ ಸ್ತ್ರಿಯಃ ।
ಅವಿಶ್ವಾಸ್ಯಾಸ್ತಥಾ ಚೈತಾಮಪಿ ದೇವ ಕಥಾಂ ಶೃಣು ॥ ೨

ಇಹಾಸ್ತ್ಯುಜ್ಜಯಿನೀ ನಾಮ ನಗರೀ ವಿಶ್ವವಿಶ್ರುತಾ ।
ತಸ್ಯಾಂ ನಿಶ್ಚಯದತ್ತಾಖ್ಯೋ ವಣಿಕ್ಪುತ್ರೋಽಭವತ್ಪುರಾ ॥ ೩

ಸ ದ್ಯೂತಕಾರೋ ದ್ಯೂತೇನ ಧನಂ ಜಿತ್ವಾ ದಿನೇ ದಿನೇ ।
ಸ್ನಾತ್ವಾ ಸಿಪ್ರಾಜಲೇಽಭ್ಯರ್ಚ್ಯ ಮಹಾಕಾಲಮುದಾರಧೀಃ ॥ ೪

ದತ್ತ್ವಾ ದಾನಂ ದ್ವಿಜಾತಿಭ್ಯೋ ದೀನಾನಾಥೇಭ್ಯ ಏವ ಚ ।
ವ್ಯಧಾದ್ವಿಲೇಪನಾಹಾರತಾಂಬೂಲಾದ್ಯವಿಶೇಷತಃ ॥ ೫

೬ ಸ್ನಾನ ಪೂಜೆಗಳು ಮುಗಿದ ಮೇಲೆ ನಿತ್ಯವೂ ಮಹಾಕಾಲನ ದೇವಾಲಯದ ಬಳಿಗೆ ಹೋಗಿ ಸ್ಮಶಾನದಲ್ಲಿ ತನ್ನನ್ನು ಚಂದನ ಮುಂತಾದವುಗಳಿಂದ ಲೇಪನಮಾಡಿ ಕೊಳ್ಳುತ್ತಿದ್ದನು.

೭ ವಿಲೇಪನ ಮಾಡಿ ಆ ಒಂಟಿ ಯುವಕನು ದಿನವೂ ಅಲ್ಲಿದ್ದ ಕಲ್ಲುಕಂಭವೊಂದರಲ್ಲಿ ವಿಲೇಪನವನ್ನು ಅಂಟಿಸಿ ಬೆನ್ನನ್ನು ಉಜ್ಜುತ್ತಾ ಲೇಪನ ಮಾಡಿಕೊಳ್ಳುತ್ತಿದ್ದನು.

೮-೯. ಅದರಿಂದ ಕಾಲಕ್ರಮದಲ್ಲಿ ಆ ಕಂಭವು ಒಂದು ಭಾಗದಲ್ಲಿ ತುಂಬ ನುಣುಪಾಯಿತು. ಹೀಗಿರುವಾಗ ಒಮ್ಮೆ ಚಿತ್ರಕಾರನೊಬ್ಬನು ಬಣ್ಣಹಾಕುವವನ ಜೊತೆ ಅದೇ ಮಾರ್ಗದಲ್ಲಿ ಹೋಗುತ್ತಿದ್ದು. ಕಂಬವು ನುಣುಪಾಗಿರುವುದನ್ನು ನೋಡಿ ಕಲ್ಲಿ ಗೌರಿಯ ಚಿತ್ರವನ್ನು ಬರೆದನು. ಆ ಚಿತ್ರಕಾರನು ಆಟಕ್ಕೆಂದು ಶಸ್ತ್ರದಿಂದ ಅಲ್ಲಿ ಅದನ್ನು ಬರೆದಿದ್ದನು.

೧೦. ಅವರಿಬ್ಬರೂ ಅಲ್ಲಿಂದ ಹೋದ ಮೇಲೆ ಭಗವಾನ್ ಮಹಾಕಾಲನನ್ನು ಪೂಜಿಸಲೆಂದು ಬಂದಿದ್ದ ವಿದ್ಯಾಧರನೋರ್ವನ ಮಗಳು ಕಂಬದಲ್ಲಿ ಆ ದೇವಿಯನ್ನು ಕಂಡಳು.

೧೧. ತುಂಬ ನುಣುಪಾಗಿದ್ದ ಕಾರಣ ಅದರಲ್ಲಿ ದೇವತೆಯು ಇರಬೇಕೆಂದು ಭಾವಿಸಿ ಪೂಜೆಗೈದು ವಿಶ್ರಾಂತಿ ಪಡೆಯೋಣವೆಂದು ಯಾರಿಗೂ ಕಾಣಿಸದಂತೆ ಆ ಕಲ್ಲು ಕಂಭವನ್ನು ಪ್ರವೇಶಿಸಿದಳು.

---

ಸದಾ ಸ್ನಾನಾರ್ಚನಾದ್ಯಂತೇ ಮಹಾಕಾಲಾಲಯಾಂತಿಕೇ ।
ಗತ್ವಾ ವ್ಯಲಿಂಪದಾತ್ಮಾನಂ ಶ್ಮಶಾನೇ ಚಂದನಾದಿನಾ ॥ ೬

ತತ್ರಸ್ಥೇ ಚ ಶಿಲಾಸ್ತಂಭೇ ಸ ವಿನ್ಯಸ್ಯ ವಿಲೇಪನಮ್ ।
ವಿಲಿಲೇಪ ಕಷನ್‌ಪೃಷ್ಠಂ ಯುವಾ ಪ್ರತ್ಯಹಮೇಕಕಃ ॥ ೭

ತೇನ ಸ್ತಂಭಃ ಸ ಸುಶ್ಲಕ್ಷ್ಣಃ ಕಾಲೇನಾಭವದೇಕತಃ ।
ಅಥಾಗಾಚ್ಚಿತ್ರಕೃತ್ತೇನ ಪಥಾ ರೂಪಕೃತಾ ಸಹ ॥ ೮

ಸ ಸ್ತಂಭಂ ವೀಕ್ಷ್ಯ ಸುಶ್ಲಕ್ಷ್ಣಂ ತತ್ರ ಗೌರೀಂ ಸಮಾಲಿಖತ್ ।
ರೂಪಕಾರೋಽಪಿ ಶಸ್ತ್ರೇಣ ಕ್ರೀಡಯೈವೋಲ್ಲಿಲೇಖ ತಾಮ್ ॥ ೯

ತತಸ್ತಯೋರ್ಗತವತೋರ್ಮಹಾಕಾಲಾರ್ಚನಾಗತಾ ।
ವಿದ್ಯಾಧರಸುತೈಕಾತ್ರ ಸ್ತಂಭೇ ದೇವೀಂ ದದರ್ಶ ತಾಮ್ ॥ ೧೦

ಸುಲಕ್ಷಣತ್ವಾತ್ ಸಾನ್ನಿಧ್ಯಂ ತಸ್ಯಾಂ ಮತ್ವಾ ಕೃತಾರ್ಚನಾ ।
ಅದೃಶ್ಯಾ ವಿಶ್ರಮಾಯೈತಂ ಶಿಲಾಸ್ತಂಭಂ ವಿವೇಶ ಸಾ ॥ ೧೧

೧೨. ಆ ವೇಳೆಗೆ ವ್ಯಾಪಾರಿಯ ಮಗನಾದ ನಿಶ್ಚಯದತ್ತನು ಅಲ್ಲಿಗೆ ಬಂದು ಕಂಬದಲ್ಲಿ ಕೆತ್ತಲಾಗಿದ್ದ ಗೌರಿಯನ್ನು ನೋಡಿ ಆಶ್ಚರ್ಯಗೊಂಡನು.

೧೩. ಆ ಕಂಬದ ಬೇರೊಂದು ಜಾಗದಲ್ಲಿ ಅಂಗಾಂಗಗಳನ್ನು ವಿಲೇಪನ ಮಾಡಿ ಆಮೇಲೆ ಅನುಲೇಪನವನ್ನಿಟ್ಟು ಹಿಂಭಾಗವನ್ನು ಕೆರೆದುಕೊಳ್ಳಲು ಅವನು ಉಜ್ಜತೊಡಗಿದನು.

೧೪. ಅದನ್ನು ಕಂಡು ಬೇರೊಂದು ಕಂಬದಲ್ಲಿದ್ದ ಚಂಚಲ ಕಣ್ಣುಗಳ ಆ ವಿದ್ಯಾಧರ ಕನ್ಯೆಯು ಆತನ ರೂಪಕ್ಕೆ ಮಾರುಹೋಗಿ ಹೀಗೆ ಆಲೋಚಿಸಿದಳು.

೧೫. "ಇಷ್ಟು ರೂಪವಂತನಾಗಿರುವ ಈತನಿಗೆ ಬೆನ್ನು ಉಜ್ಜುವವರು ಯಾರೂ ಇಲ್ಲ. ಆದ್ದರಿಂದ ಇಂದು ನಾನು ಇವನ ಬೆನ್ನನ್ನು ತುರಿಸುತ್ತೇನೆ'.

೧೬. ಹೀಗೆ ಆಲೋಚಿಸಿ ಮತ್ತೊಂದು ಕಂಬದಿಂದ ಕೈಯನ್ನು ಚಾಚಿ ಆ ವಿದ್ಯಾಧರೆಯು ಪ್ರೀತಿಯಿಂದ ಆಗ ಅವನ ಬೆನ್ನನ್ನು ಉಜ್ಜಿದಳು.

೧೭. ಕೂಡಲೇ ಸುಖಸ್ಪರ್ಶವನ್ನು ಹೊಂದಿದ ಹಾಗೂ ಬಳೆಗಳ ಸದ್ದನ್ನೂ ಕೇಳಿದ ಆ ವ್ಯಾಪಾರಿಯ ಮಗನು ತನ್ನ ಕೈಯಿಂದ ಆಕೆಯ ಕೈಯನ್ನು ಹಿಡಿದುಕೊಂಡನು.

೧೮. "ಪುಣ್ಯಾತ್ಮನೇ ! ನಾನು ಮಾಡಿದ ಅಪರಾಧವಾದರೂ ಏನು ? ಕೈಯನ್ನು ಬಿಡು' ಎಂದು ವಿದ್ಯಾಧರಿಯು ಕಣ್ಣಿಗೆ ಕಾಣದೆಯೇ ಕಂಬದೊಳಗಿಂದ ಅವನಿಗೆ ಹೇಳಿದಳು.

---

ತಾವನ್ನಿಶ್ಚಯದತ್ತಃ ಸ ತತ್ರಾಗತ್ಯ ವಣಿಕ್ಸುತಃ ।
ಸಾಶ್ಚರ್ಯಃ ಸ್ತಂಭಮಧ್ಯೇ ತಾಂ ದದರ್ಶೋಲ್ಲಿಖಿತಾಮುಮಾಮ್ ॥ ೧೨

ವಿಲಿಪ್ಯಾಂಗಾನಿ ತತ್ಸ್ತಂಭಭಾಗೇಽನ್ಯತ್ರಾನುಲೇಪನಮ್ ।
ನ್ಯಸ್ಯ ಪೃಷ್ಠಂ ಸಮಾಲಬ್ಧುಂ ಪ್ರಾರೇಭೇ ನಿಕಷಂಶ್ಚ ಸಃ ॥ ೧೩

ತದ್ವಿಲೋಕ್ಯ ವಿಲೋಲಾಕ್ಷೀ ಸಾ ವಿದ್ಯಾಧರಕನ್ಯಕಾ ।
ಸ್ತಂಭಾಂತರಸ್ಥಾ ತದ್ರೂಪಹೃತಚಿತ್ತಾ ವ್ಯಚಿಂತಯತ್ ॥ ೧೪

ಈದೃಶಸ್ಯಾಪಿ ಕೋಽಪ್ಯಸ್ಯ ನಾಸ್ತಿ ಪೃಷ್ಠಾನುಲೇಪಕಃ ।
ತದಹಂ ತಾವದದ್ಯಾಸ್ಯ ಪೃಷ್ಠಮೇಷಾ ಸಮಾಲಭೇ ॥ ೧೫

ಇತ್ಯಾಲೋಚ್ಯ ಪ್ರಸಾರ್ಯೈವ ಕರಂ ಸ್ತಂಭಾಂತರಾತ್ತತಃ ।
ವ್ಯಲಿಪತ್ತ್ಯ ಸಾ ಪೃಷ್ಠಂ ಸ್ನೇಹಾದ್ವಿದ್ಯಾಧರೀ ತದಾ ॥ ೧೬

ತತ್ಕ್ಷಣಂ ಲಬ್ಧಸಂಸ್ಪರ್ಶಃ ಶ್ರುತಕಂಕಣನಿಃಸ್ವನಃ ।
ಜಗ್ರಾಹ ಹಸ್ತಂ ಹಸ್ತೇನ ಸ ತಸ್ಯಾಸ್ತಂ ವಣಿಕ್ಸುತಃ ॥ ೧೭

ಮಹಾಭಾಗಾಪರಾದ್ಧಂ ತೇ ಕಿಂ ಮಯಾ ಮುಂಚ ಮೇ ಕರಮ್ ।
ಇತ್ಯದೃಶ್ಯೈವ ತಂ ವಿದ್ಯಾಧರೀ ಸ್ತಂಭಾದುವಾಚ ಸಾ ॥ ೧೮

೧೯. "ಕಣ್ಣೆದುರಿಗೆ ಬಂದು ನೀನು ಯಾರೆಂಬುದನ್ನು ಹೇಳು. ಆಗ ನಿನ್ನ ಕೈಯನ್ನು ಬಿಡುತ್ತೇನೆ' ಎಂದು ನಿಶ್ಚಯದತ್ತನು ಅವಳಿಗೆ ಆಗ ಉತ್ತರವಿತ್ತನು.

೨೦. "ಪ್ರತ್ಯಕ್ಷಳಾಗಿ ಎಲ್ಲವನ್ನೂ ಹೇಳುತ್ತೇನೆ' ಎಂದು ವಿದ್ಯಾಧರಿಯಿಂದ ಭಾಷೆ ಪಡೆದ ಮೇಲೆ ಅವನು ಆಕೆಯ ಕೈಯನ್ನು ಬಿಟ್ಟನು.

೨೧. ಆಮೇಲೆ ಕಂಬದಿಂದ ಸಾಕ್ಷಾತ್ತಾಗಿ ಹೊರಬಂದ ಆ ಸರ್ವಾಂಗ ಸುಂದರಿಯು ಕುಳಿತುಕೊಂಡು ಅವನ ಮುಖದ ಮೇಲೆ ದೃಷ್ಟಿಯನ್ನು ಆಸೆಯಿಂದ ನೆಟ್ಟು ಹೇಳಿದಳು.

೨೨. "ಹಿಮಾಲಯಪರ್ವತದ ತುದಿಯಲ್ಲಿ ಪುಷ್ಕರಾವತಿಯೆಂಬ ನಗರವಿದೆ. ಅದರಲ್ಲಿ ವಿಂಧ್ಯಪರನೆಂಬ ವಿದ್ಯಾಧರಾಧಿಪನೊಬ್ಬನು ಇದ್ದಾನೆ.

೨೩. ಅವನ ಮಗಳಾಗಿರುವ ನನ್ನ ಹೆಸರು ಅನುರಾಗಪರಾ ಎಂದು. ಮಹಾಕಾಲನ ಪೂಜೆಗೆಂದು ಬಂದಿದ್ದ ನಾನು ಇದೀಗ ಇಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದೇನೆ.

೨೪. ಅಷ್ಟರಲ್ಲಿ ಮನ್ಮಥನ ಸಂಮೋಹನಾಸ್ತ್ರವನ್ನು ಹೋಲುವ ನೀನು ಇಲ್ಲಿಗೆ ಬಂದು ಕಂಬದಲ್ಲಿ ಬೆನ್ನು ಉಜ್ಜಿಕೊಳ್ಳುತ್ತಿರುವುದನ್ನು ನಾನು ನೋಡಿದೆ.

೨೫. ಆಗ ನನ್ನ ಮನಸ್ಸು ಅನುರಾಗದಿಂದ ಮೊದಲು ರಂಜಿತವಾಯಿತು. ಅನಂತರ ಬೆನ್ನು ಉಜ್ಜುವ ಅಂಗರಾಗದಿಂದ ನನ್ನ ಕೈ ರಂಗುಗೊಂಡಿತು.

---

ಪ್ರತ್ಯಕ್ಷಾ ಬ್ರೂಹಿ ಮೇ ಕಾ ತ್ವಂ ತತೋ ಮೋಕ್ಷ್ಯಾಮಿತೇ ಕರಮ್ ।
ಇತಿ ನಿಶ್ಚಯದತ್ತೋಽಪಿ ಪ್ರತ್ಯುವಾಚ ಸ ತಾಂ ತತಃ ॥ ೧೯

ಪ್ರತ್ಯಕ್ಷದೃಶ್ಯಾ ಸರ್ವಂ ತೇ ವಚ್ಮೀತಿ ಶಪಥೋತ್ತರಮ್ ।
ವಿದ್ಯಾಧರ್ಯಾ ತಯೋಕ್ತೋಽಥ ಕರಂ ತಸ್ಯಾ ಮುಮೋಚ ಸಃ ॥ ೨೦

ಅಥ ಸ್ತಂಭಾದ್ವಿನಿರ್ಗತ್ಯ ಸಾಕ್ಷಾತ್ ಸರ್ವಾಂಗಸುಂದರೀ ।
ತನ್ಮುಖಾಸಕ್ತನಯನಾ ತಂ ಜಗಾದೋಪವಿಶ್ಯ ಸಾ ॥ ೨೧

ಅಸ್ತಿ ಪ್ರಾಲೇಯಶೈಲಾಗ್ರೇ ನಗರೀ ಪುಷ್ಕರಾವತೀ ।
ನಾಮ್ನಾ ವಿಂಧ್ಯಪರಸ್ತಸ್ಯಾಮಾಸ್ತೇ ವಿದ್ಯಾಧರಾಧಿಪಃ ॥ ೨೨

ಅನುರಾಗಪರಾ ನಾಮ ತಸ್ಯಾಹಂ ಕನ್ಯಕಾ ಸುತಾ ।
ಮಹಾಕಾಲಾರ್ಚನಾಯಾತಾ ವಿಶ್ರಾಂತಾಸ್ಮೀಹ ಸಂಪ್ರತಿ ॥ ೨೩

ತಾವಚ್ಚ ತ್ವಮಿಹಾಗತ್ಯ ಕುರ್ವನ್ ಪೃಷ್ಠವಿಲೇಪನಮ್ ।
ದೃಷ್ಟಃ ಸ್ತಂಭೇಽತ್ರ ಮಾರೀಯಮೋಹನಾಸ್ತ್ರೋಪಮೋ ಮಯಾ ॥ ೨೪

ತತಃ ಪ್ರಾಗನುರಾಗೇಣ ರಂಜಿತಃ ಸ್ವಾಂತವಾನ್ಮಮ ।
ಪಶ್ಚಾತ್ ಪೃಷ್ಠವಿಲೇಪಿನ್ಯಾ ಅಂಗರಾಗೇಣ ಮೇ ಕರಃ ॥ ೨೫

೨೬. ಇನ್ನು ಮುಂದಿನದು ನಿನಗೆ ತಿಳಿದೇ ಇದೆ. ಆದ್ದರಿಂದ ಈಗ ತಂದೆಯ ಮನೆಗೆ ಹೋಗುತ್ತೇನೆ' ಎಂದು ಅವಳೆಂದಾಗ ಆ ವ್ಯಾಪಾರಿಯ ಮಗನು ಹೇಳಿದನು.

೨೭. "ಹೇ ಸುಂದರಿ, ನೀನು ತೆಗೆದುಕೊಂಡಿರುವ ನನ್ನ ಹೃದಯವನ್ನು ನಾನಿನ್ನೂ ಹಿಂದಕ್ಕೆ ಪಡೆದಿಲ್ಲ. ನನ್ನ ಹೃದಯವನ್ನು ಬಿಟ್ಟುಕೊಡದೆ ನೀನು ಅದು ಹೇಗೆ ಹೋಗಿ ಬಿಡುವೆ ?'

೨೮. ಅವನ ಮಾತನ್ನು ಕೇಳಿ ಬೇಗನೆ ಅನುರಾಗವಶಳಾದ ಅವಳು "ನೀನು ನಮ್ಮ ಊರಿಗೆ ಬರುವುದಾದರೆ ನಿನ್ನೊಡನೆ ಸೇರಬಲ್ಲೆ

೨೯. ಆದರೆ, ಪ್ರಿಯತಮನೇ ! ಅಲ್ಲಿಗೆ ಬರುವುದು ಅಷ್ಟು ಸುಲಭವಲ್ಲ. ಆದಾಗ್ಯೂ ನಿನ್ನ ಆಸೆಯು ನೆರವೇರುವುದು. ಪ್ರಯತ್ನ ಪಡುವವರಿಗೆ ಈ ಲೋಕದಲ್ಲಿ ಮಾಡಲಾಗದ ಕೆಲಸವು ಯಾವುದೂ ಇಲ್ಲ.'

೩೦. ಎಂದು ಹೇಳಿ ಆ ಅನುರಾಗಪರೆಯು ಗಗನ ಮಾರ್ಗದಲ್ಲಿ ಹೊರಟುಹೋದಳು. ನಿಶ್ಚಯದತ್ತನೂ ಮನಸ್ಸಿನಲ್ಲಿ ಅವಳನ್ನೇ ಆಲೋಚಿಸುತ್ತಾ ತನ್ನ ಮನೆಗೆ ಹೋದನು.

೩೧. ಮರದಿಂದ ಚಿಗುರು ಹೊರಬಂದಂತೆ ಕಂಬದಿಂದ ಹೊರಬಂದ ಚಿಗುರುಗೈಯನ್ನು ನೆನಪಿಸಿಕೊಳ್ಳುತ್ತಾ "ಅಯ್ಯೋ ಧಿಕ್ಕಾರ ! ಹಿಡಿದುಕೊಂಡ ಅವಳ ಕೈ ನನಗೆ ದಕ್ಕಲಿಲ್ಲ.

---

ಅತಃ ಪರಂ ತೇ ವಿದಿತಂ ತತ್ಪಿತುರ್ಧಾಮ ಸಂಪ್ರತಿ ।
ಗಚ್ಛಾಮೀತಿ ತಯೋಕ್ತೋಽಥ ವಣಿಕ್ಪುತ್ರೋ ಜಗಾದ ಸಃ ॥ ೨೬

ಸ್ವೀಕೃತಂ ತನ್ಮಯಾ ಚಂಡಿ ನ ಸ್ವಾಂತಂ ಭವತೀಹೃತಮ್ ।
ಅಮುಕ್ತ್ವಾಸ್ವೀಕೃತಸ್ವಾಂತಾ ಕಥಮೇವಂ ತು ಗಚ್ಛಸಿ ॥ ೨೭

ಇತಿ ತೇನೋದಿತಾ ಸಾ ಚ ಲಘುರಾಗವಶೀಕೃತಾ ।
ಸಂಗಮಿಷ್ಯೇ ತ್ವಯಾ ಕಾಮಮೇಷ್ಯಸ್ಯಸ್ಮತ್ಪುರೀಂ ಯದಿ ॥ ೨೮

ದುರ್ಗಮಾ ಸಾ ನ ತೇ ನಾಥ ಸೇತ್ಸ್ಯತೇ ತೇ ಸಮೀಹಿತಮ್ ।
ನಹಿ ದುಷ್ಕರಮಸ್ತೀಹ ಕಿಂಚಿದಧ್ಯವಸಾಯಿನಾಮ್ ॥ ೨೯

ಇತ್ಯುದೀರ್ಯ ಖಮುತ್ಪತ್ಯ ಸಾನುರಾಗಪರಾ ಯಯೌ ।
ಅಗಾನ್ನಿಶ್ಚಯದತ್ತೋಽಪಿ ಸ ತದ್ಗತಮನಾ ಗೃಹಮ್ ॥ ೩೦

ಸ್ಮರನ್ ದ್ರುಮಾದಿವ ಸ್ತಂಭಾದುದ್ಭಿನ್ನಂ ಕರಪಲ್ಲವಮ್ ।
ಹಾ ಧಿಕ್ ತಸ್ಯಾ ಗೃಹೀತ್ವಾಪಿ ನಾಪ್ತಃ ಪಾಣಿಗ್ರಹೋ ಮಯಾ ॥ ೩೧

೩೨. ಆದ್ದರಿಂದ ಪುಷ್ಕರಾವತೀ ಪಟ್ಟಣದಲ್ಲಿ ಅವಳ ಬಳಿಗೆ ಹೋಗುತ್ತೇನೆ. ಆಗದಿದ್ದರೆ ನಾನು ಪ್ರಾಣಬಿಡುತ್ತೇನೆ ಅಥವಾ ವಿಧಿಯೇ ನನಗೆ ಸಹಾಯವೆಸಗುತ್ತದೆ.'

೩೩. ಎಂದು ಚಿಂತಿಸುತ್ತಾ ಕಾಮಾರ್ತನಾದ ಅವನು ಅಂದು ಅಲ್ಲೇ ಕಳೆದು ಮಾರನೆಯ ದಿನ ಬೆಳಿಗ್ಗೆ ಉತ್ತರದಿಕ್ಕನ್ನು ಹಿಡಿದು ಹೊರಟುಬಿಟ್ಟನು.

೩೪. ಹೀಗೆ ಮುಂದುವರೆಯುತ್ತಿದ್ದ ಅವನಿಗೆ ಉತ್ತರಾಪಥಕ್ಕೆ ಹೋಗುವ ಮೂವರು ವ್ಯಾಪಾರಿಸುತರು ಸಹಪ್ರಯಾಣಿಕರಾಗಿ ದೊರಕಿದರು.

೩೫ ಅವರೊಂದಿಗೆ ಊರು ಹಳ್ಳಿ ಕಾಡು ನದಿಗಳನ್ನು ದಾಟುತ್ತಾ ಮುಂದುವರೆಯುತ್ತಾ ಅವನು ಕ್ರಮೇಣ ಮ್ಲೇಚ್ಛರೇ ಹೆಚ್ಚಾಗಿರುವ ಉತ್ತರ ಭೂಭಾಗವನ್ನು ತಲುಪಿದನು.

೩೬ ಅಲ್ಲಿ ಅವರ ಜೊತೆಗೆ ತಾಜಿಕರು (ಒಂದು ಬಗೆಯ ಮ್ಲೇಚ್ಛರು) ಸೇರಿಕೊಂಡರು. ಅವರು ಇವನನ್ನು ಒಯ್ದು ಮತ್ತೊಬ್ಬ ತಾಜಿಕನಿಗೆ ಹಣಕ್ಕೆ ಮಾರಾಟ ಮಾಡಿದರು.

೩೭ ಆ ತಾಜಿಕನೂ ಅವನನ್ನು ತನ್ನ ಸೇವಕರ ಕೈಯಲ್ಲಿ ಉಡುಗೊರೆಯ ರೂಪದಲ್ಲಿ ಮುರವಾರನೆಂಬ ತುರುಷ್ಕನ ಬಳಿಗೆ ಕಳಿಸಿಕೊಟ್ಟನು.

೩೮. ಅಲ್ಲಿ ಉಳಿದ ಮೂವರೊಂದಿಗೆ ಅವನನ್ನು ಅಲ್ಲಿಗೆ ಒಯ್ದ ಸೇವಕರು ಮುರವಾರನು ಸತ್ತಿರುವುದನ್ನು ತಿಳಿದು ಅವನು ಮಗನಿಗೆ ಅವನನ್ನು ಒಪ್ಪಿಸಿದರು.

---

ತದ್ ವ್ರಜಾಮ್ಯಂತಿಕಂ ತಸ್ಯಾಃ ಪುರೀಂ ತಾಂ ಪುಷ್ಕರಾವತೀಮ್ ।
ಪ್ರಾಣಾಂಸ್ತ್ಯಕ್ಷ್ಯಾಮಿ ದೈವಂ ವಾ ಸಾಹಾಯ್ಯಂ ಮೇ ಕರಿಷ್ಯತಿ ॥ ೩೨

ಇತಿ ಸಂಚಿಂತಯನ್ನೀತ್ವಾ ಸ್ಮರಾರ್ತಃ ಸೋಽತ್ರ ತದ್ದಿನಮ್ ।
ಪ್ರಾತಿಷ್ಠತ ತತಃ ಪ್ರಾತರವಲಂಬ್ಯೋತ್ತರಾಂ ದಿಶಮ್ ॥ ೩೩

ತತಃ ಪ್ರಕ್ರಾಮತಸ್ತಸ್ಯ ತ್ರಯೋಽನ್ಯೇ ಸಹಯಾಯಿನಃ ।
ಮಿಲಂತಿ ಸ್ಮ ವಣಿಕ್ಪುತ್ರಾ ಉತ್ತರಾಪಥಗಾಮಿನಃ ॥ ೩೪

ತೈಃ ಸಮಂ ಸಮತಿಕ್ರಾಮನ್ ಪುರಗ್ರಾಮಾಟವೀನದೀಃ ।
ಕ್ರಮಾದುತ್ತರದಿಗ್ಭೂಮಿಂ ಪ್ರಾಪ ಸ ಮ್ಲೇಚ್ಛಭೂಯಸೀಮ್ ॥ ೩೫

ತತ್ರ ತೈರೇವ ಸಹಿತಃ ಪಥಿ ಪ್ರಾಪ್ಯೈವ ತಾಜಿಕೈಃ ।
ನೀತ್ವಾ ಪರಸ್ಮೈ ಮೂಲ್ಯೇನ ದತ್ತೋಽಭೂತ್ತಾಜಿಕಾಯ ಸಃ ॥ ೩೬

ತೇನಾಪಿ ತಾವದ್ ಭೃತ್ಯಾನಾಂ ಹಸ್ತೇ ಕೋಶಲಿಕಾಕೃತೇ ।
ಮುರವಾರಾಭಿಧಾನಸ್ಯ ತುರುಷ್ಕಸ್ಯ ವ್ಯಸೃಜ್ಯತ ॥ ೩೭

ತತ್ರ ನೀತಃ ಸ ತದ್‌ಭೃತ್ಯೈರ್ಯುಕ್ತಸ್ತೈರಪರೈಸ್ತ್ರಿಭಿಃ ।
ಮುರವಾರಂ ಮೃತಂ ಬುದ್ಧ್ವಾ ತತ್ಪುತ್ರಾಯ ನ್ಯವೇದ್ಯತ ॥ ೩೮

೩೯-೪೦. ನನ್ನ ಸ್ನೇಹಿತನು ಕಳುಹಿಸಿಕೊಟ್ಟಿರುವ ನಮ್ಮ ತಂದೆಯವರ ಉಡುಗೊರೆ ಇದು. ಆದ್ದರಿಂದ ಬೆಳಿಗ್ಗೆ ಇವರನ್ನು ಗಣಿಯಲ್ಲಿ ಎಸೆದು ಅವನ ಹತ್ತಿರಕ್ಕೇ ಕಳುಹಿಸಬೇಕು ಎಂದು ಆ ತುರುಷ್ಕನ ಮಗನು ನನ್ನನ್ನೂ ಇತರೆ ಮೂವರನ್ನೂ ಸಂಕೋಲೆಗಳಿಂದ ಗಟ್ಟಿಯಾಗಿ ಕಟ್ಟಿಹಾಕಿ ಆ ರಾತ್ರಿ ಅಲ್ಲಿಯೇ ಬಂಧಿಸಿಟ್ಟನು.

೪೧. ಆಮೇಲೆ ಇಲ್ಲಿ ರಾತ್ರಿ ಸಾವಿನ ಭಯದಿಂದ ಅಂಜಿದ್ದ ಮೂವರು ಜೊತೆಗಾರರನ್ನು ಕುರಿತು ನಿಶ್ಚಯದತ್ತನು ಹೇಳಿದನು:

೪೨. "ದುಃಖಪಟ್ಟುಕೊಳ್ಳುವುದರಿಂದ ಏನು ಪ್ರಯೋಜನ ? ಧೈರ್ಯ ತಂದುಕೊಂಡು ಎದ್ದು ನಿಲ್ಲಿರಿ. ಧೀರರಿಗೆ ಹೆದರಿದಂತೆ ಕಷ್ಟಗಳು ತಾವೇ ದೂರಾಗುತ್ತವೆ.

೪೩. ಆಪತ್ತಿನಿಂದ ಬಿಡುಗಡೆ ಮಾಡುವ ದುರ್ಗಾ ಭಗವತಿಯನ್ನು ನೆನೆಯಿರಿ' ಎಂದು ಅವರನ್ನು ಹುರಿದುಂಬಿಸುತ್ತಾ ಅವನು ಭಕ್ತಿಯಿಂದ ದುರ್ಗೆಯನ್ನು ಸ್ತುತಿಸಿದನು:

೪೪. ಮಹಾದೇವಿಯೇ ! ನಿನಗೆ ನಮಸ್ಕಾರ. ನಿನ್ನ ಕಾಲುಗಳು ರಾಕ್ಷಸರನ್ನು ಕೊಂದುದರಿಂದ ಅಂಟಿಕೊಂಡ ರಕ್ತದ ಕೆಸರಿನಿಂದೆಂಬಂತೆ ಕಲೆಗಳಿಂದ ಕೂಡಿವೆ. ಅವಕ್ಕೆ ನನ್ನ ನಮಸ್ಕಾರ.

೪೫. ಸ್ವಶಕ್ತಿಯಿಂದ ನೀನು ಪರಶಿವನ ಸಕಲಸಂಪತ್ತನ್ನು ಗೆದ್ದಿರುವೆ. ಮೂರು ಲೋಕಗಳೂ ನಿನ್ನ ಉಸಿರಾಟವನ್ನೇ ಅನುಸರಿಸಿ ಬದುಕಿಕೊಂಡಿವೆ.

---

ಪಿತುಃ ಕೋಶಲಿಕಾ ಹ್ಯೇಷಾ ಮಿತ್ರೇಣ ಪ್ರೇಷಿತಾ ಮಮ ।
ತತ್ತಸ್ಯೈವಾಂತಿಕೇ ಪ್ರಾತಃ ಖಾತೇ ಕ್ಷಿಪ್ತ್ವಾ ಇಮೇ ಮಯಾ ॥ ೩೯
ಇತ್ಯಾತ್ಮನಾ ಚತುರ್ಥಂ ತಂ ತತ್ಪುತ್ರೋಽಪಿ ಸ ತಾಂ ನಿಶಾಮ್ ।
ಸಂಯಮ್ಯ ಸ್ಥಾಪಯಾಮಾಸ ತುರುಷ್ಕೋ ನಿಗಡೈರ್ದೃಢಮ್ ॥ ೪೦
ತತೋಽತ್ರ ಬಂಧನೇ ರಾತ್ರೌ ಮರಣತ್ರಾಸಕಾತರಾನ್ ।
ಸಖೀನ್ನಿಶ್ಚಯದತ್ತಸ್ತಾನ್ ಸ ಜಗಾದ ವಣಿಕ್ಸುತಾನ್ ॥ ೪೧
ಕಾ ವಿಷಾದೇನ ವಃ ಸಿದ್ಧಿಃ ಧೈರ್ಯಮಾಲಂಬ್ಯ ತಿಷ್ಠತ ।
ಭೀತಾ ಇವ ಹಿ ವೀರಾಣಾಂ ಯಾಂತಿ ದೂರೇ ವಿಪತ್ತಯಃ ॥ ೪೨
ಸ್ಮರತೈಕಾಂ ಭಗವತೀಂ ದುರ್ಗಾಮಾಪದ್ವಿಮೋಚನೀಮ್ ।
ಇತಿ ತಾನ್ ಧೀರಯನ್ ಭಕ್ತ್ಯಾ ದೇವೀಂ ತುಷ್ಟಾವ ಸೋಽಥ ತಾಮ್ ॥ ೪೩
ನಮಸ್ತುಭ್ಯಂ ಮಹಾದೇವಿ ಪಾದೌ ತೇ ಯಾವಕಾಂಕಿತೌ ।
ಮೃದಿತಾಸುರಲಗ್ನಾಸ್ರಪಂಕಾವಿವ ನಮಾಮ್ಯಹಮ್ ॥ ೪೪
ಜಿತಂ ಶಕ್ತ್ಯಾ ಶಿವಸ್ಯಾಪಿ ವಿಶ್ವೈಶ್ವರ್ಯಕೃತಾ ತ್ವಯಾ ।
ತ್ವದನುಪ್ರಾಣಿತಂ ಚೇದಂ ಚೇಷ್ಟತೇ ಭುವನತ್ರಯಮ್ ॥ ೪೫

೪೬. ಮಹಿಷಾಸುರಮರ್ದಿನಿಯೇ! ನೀನು ಲೋಕಗಳನ್ನು ಕಾಪಾಡಿದ್ದೀಯೆ. ಭಕ್ತವತ್ಸಲೆಯೇ ! ಶರಣಾಗತನಾಗಿರುವ ನನ್ನನ್ನೂ ಕಾಪಾಡು.

೪೭. ಇದೇ ಮೊದಲಾಗಿ ತನ್ನ ಸಹಚರರೊಂದಿಗೆ ದೇವಿಯನ್ನು ಚೆನ್ನಾಗಿ ಸ್ತುತಿಸಿದನು. ಅನಂತರ ಆಯಾಸಗೊಂಡಿದ್ದ ನಿಶ್ಚಯದತ್ತನು ಬೇಗನೆ ಅಲ್ಲಿಯೇ ನಿದ್ರೆ ಹೋದನು.

೪೮. 'ಮಕ್ಕಳೇ ಏಳಿ, ಹೊರಡಿ, ನಿಮ್ಮ ಬಂಧನವು ಕಳಚಿದೆ' ಎಂದು ಕನಸಿನಲ್ಲಿ ಭಗವತಿಯು ಅವನಿಗೂ ಇತರ ಮೂವರಿಗೂ ಅಪ್ಪಣೆ ಮಾಡಿದಳು.

೪೯. ಆ ರಾತ್ರಿಯಲ್ಲಿ ಎದ್ದು ತಮ್ಮ ತಮ್ಮ ಕಟ್ಟುಗಳು ತಾವೇ ಕಳಚಿರುವುದನ್ನು ಕಂಡು ಪರಸ್ಪರರ ಕನಸುಗಳನ್ನು ಹೇಳಿಕೊಂಡು ಸಂತೋಷದಿಂದ ಅವರೆಲ್ಲ ಅಲ್ಲಿಂದ ಹೊರಟು ಬಿಟ್ಟರು.

೫೦. ಮುಂದೆ ಬಹುದೂರ ಪ್ರಯಾಣ ಬೆಳೆಸಿ ರಾತ್ರಿ ಕಳೆಯುತ್ತಿರುವಾಗ ಕಷ್ಟವನ್ನು ಅನುಭವಿಸಿದ್ದ ಆ ಮೂವರು ವ್ಯಾಪಾರಿ ಮಿತ್ರರು ನಿಶ್ಚಯದತ್ತನಿಗೆ ಹೀಗೆ ಹೇಳಿದರು:

೫೧. "ಮ್ಲೇಚ್ಛರೇ ಬಹುಸಂಖ್ಯೆಯಲ್ಲಿರುವ ಈ ಉತ್ತರದಿಕ್ಕು ಇಲ್ಲಿಯೇ ಇರಲಿ. ನಾವು ದಕ್ಷಿಣಾಪಥಕ್ಕೆ ಹೋಗುತ್ತೇವೆ. ನೀನು ನಿನ್ನಿಷ್ಟದಂತೆ ನಡೆದುಕೋ.'

೫೨. ಅವರು ಹೀಗೆ ಹೇಳಿದ ಮೇಲೆ ತನ್ನಿಷ್ಟದಂತೆ ಹೋಗಲು ಅನುಮತಿ ಪಡೆದ ನಿಶ್ಚಯದತ್ತನು ಮತ್ತೆ ಉತ್ತರ ದಿಕ್ಕನ್ನೇ ಹಿಡಿದು ವೇಗವಾಗಿ ಹೊರಟನು.

---

ಪರಿತ್ರಾತಾಸ್ತ್ವಯಾ ಲೋಕಾ ಮಹಿಷಾಸುರಸೂದಿನಿ ।
ಪರಿತ್ರಾಯಸ್ವ ಮಾಂ ಭಕ್ತವತ್ಸಲೇ ಶರಣಾಗತಮ್ ॥ ೪೬

ಇತ್ಯಾದಿ ಸಮ್ಯಗ್‌ದೇವೀಂ ತಾಂ ಸ್ತುತ್ವಾ ಸಹಚರೈಃ ಸಹ ।
ಸೋಽಥ ನಿಶ್ಚಯದತ್ತೋಽತ್ರ ಶ್ರಾಂತೋ ನಿದ್ರಾಮಗಾದ್ ದ್ರುತಮ್ ॥ ೪೭

ಉತ್ತಿಷ್ಠತ ಸುತಾ ಯಾತ ವಿಗತಂ ಬಂಧನಂ ಹಿ ವಃ ।
ಇತ್ಯಾದಿದೇಶ ಸಾ ಸ್ವಪ್ನೇ ದೇವೀ ತಂ ಚಾಪರಾಂಶ್ಚ ತಾನ್ ॥ ೪೮

ಪ್ರಬುಧ್ಯ ಚ ತದಾ ರಾತ್ರೌ ದೃಷ್ಟ್ವಾ ಬಂಧಾನ್ ಸ್ವತಶ್ಚ್ಯುತಾನ್ ।
ಅನ್ಯೋನ್ಯಂ ಸ್ವಪ್ನಮಾಖ್ಯಾಯ ಹೃಷ್ಟಾಸ್ತೇ ನಿರ್ಯಯುಸ್ತತಃ ॥ ೪೯

ಗತ್ವಾ ದೂರಮಥಾಧ್ವಾನಂ ಕ್ಷೀಣಾಯಾಂ ನಿಶಿತೇಽಪರೇ ।
ಊಚುರ್ನಿಶ್ಚಯದತ್ತಂ ತಂ ದೃಷ್ಟತ್ರಾಸಾ ವಣಿಕ್ಸುತಾಃ ॥ ೫೦

ಆಸ್ತಾಂ ಬಹುಮ್ಲೇಚ್ಛತಯಾ ದಿಗೇಷಾ ದಕ್ಷಿಣಾಪಥಮ್ ।
ವಯಂ ಯಾಮಃ ಸಖೇ ತ್ವಂತು ಯಥಾಭಿಮತಮಾಚರ ॥ ೫೧

ಇತ್ಯುಕ್ತಸ್ತೈರನುಜ್ಞಾಯ ಯಥೇಷ್ಟಾಗಮನಾಯ ತಾನ್ ।
ಉದೀಚೀಮೇವ ತಾಮಾಶಾಮವಲಂಬ್ಯ ಪುನಶ್ಚ ಸಃ ॥ ೫೨

೨೩. ಅನುರಾಗಪರೆಯ ಪ್ರೇಮಪಾಶದಿಂದ ಸೆಳೆಯಲ್ಪಟ್ಟು, ಮತಿಗೆಟ್ಟು ಒಬ್ಬನೇ ವೇಗವಾಗಿ ಮಾರ್ಗವನ್ನು ಸವೆಸಿದನು.

೨೪. ಕ್ರಮೇಣ ಅವನು ಮಹಾವ್ರತಿಕರಾದ ನಾಲ್ವರನ್ನು ಸಂಧಿಸಿದನು. ಅವರ ಜೊತೆ ವಿತಸ್ತಾ ನದಿಯನ್ನು ದಾಟಿದನು.

೨೫. ನದಿಯನ್ನು ದಾಟಿ ಆಹಾರವನ್ನು ಸ್ವೀಕರಿಸಿದ ಅವನು ಅವರೊಂದಿಗೆ ಸೂರ್ಯನು ಮುಳುಗುವ ವೇಳೆಗೆ ಮಾರ್ಗಮಧ್ಯೆ ಸಿಕ್ಕಿದ ಕಾಡನ್ನು ಹೊಕ್ಕನು.

೨೬. ಅಲ್ಲಿಗೆ ಈ ಮೊದಲೇ ಬಂದಿದ್ದ ಕೆಲವು ಕಟ್ಟಿಗೆ ಹೊರುವವರು ಹೇಳಿದರು. 'ಹೊತ್ತು ಮುಳುಗಿದ ಮೇಲೆ ಎಲ್ಲಿಗೆ ಹೋಗುವಿರಿ ? ಮುಂದೆ ಯಾವ ಹಳ್ಳಿಯೂ ಇಲ್ಲ.

೨೭–೨೮. ಈ ಕಾಡಿನ ಮಧ್ಯದಲ್ಲಿ ನಿರ್ಜನವಾದ ಶಿವಮಂದಿರವೊಂದಿದೆ. ಅಲ್ಲಿ ಯಾರು ರಾತ್ರಿ ವೇಳೆಯಲ್ಲಿ ಒಳಗೋ ಹೊರಗೋ ಇರುವರೋ, ಅವರನ್ನು ಶೃಂಗೋತ್ಪಾದಿನಿಯೆಂಬ ಯಕ್ಷಿಣಿಯು ಕೋಡನ್ನು ಉಂಟುಮಾಡಿ ಮೋಹಗೊಳಿಸಿ ಪಶುವನ್ನಾಗಿಸಿ ತಿಂದುಬಿಡುತ್ತಾಳೆ.'

೨೯. ಇದನ್ನು ಕೇಳಿಯೂ ಆ ನಾಲ್ವರು ಮಹಾವ್ರತಿಕರು ತಿರಸ್ಕಾರ ಭಾವದಿಂದ ನಿಶ್ಚಯದತ್ತನಿಗೆ ಹೇಳಿದರು:

---

ಏಕೋ ನಿಶ್ಚಯದತ್ತೋಽಥ ಪ್ರತಸ್ಥೇ ಪ್ರಸಭಂ ಪಥಿ ।
ಅನುರಾಗಪರಾಪ್ರೇಮಪಾಶಾಕೃಷ್ಟೋ ನಿರಸ್ತಧೀಃ ॥ ೨೩

ಕ್ರಮೇಣ ಗಚ್ಛನ್ ಮಿಲಿತಃ ಸ ಮಹಾವ್ರತಿಕೈಃ ಸಹ ।
ಚತುರ್ಭಿಃ ಪ್ರಾಪ್ಯ ಸರಿತಂ ವಿತಸ್ತಾಮುತ್ತತಾರ ಸಃ ॥ ೨೪

ಉತ್ತೀರ್ಯ ಚ ಕೃತಾಹಾರಃ ಸೂರ್ಯೇಽಸ್ತಾಚಲಚುಂಬಿನಿ ।
ವಿವೇಶ ತೈರೇವ ಸಮಂ ವನಂ ಮಾರ್ಗವಶಾಗತಮ್ ॥ ೨೫

ತತ್ರ ಚಾಗ್ರಾಗತಾಃ ಕೇಚಿತ್ತಮೂಚುಃ ಕಾಷ್ಠಭಾರಿಕಾಃ ।
ಕ್ವ ಗಚ್ಛಥ ದಿನೇ ಯಾತೇ ಗ್ರಾಮಃ ಕೋಽಪ್ಯಸ್ತಿ ನಾಗ್ರತಃ ॥ ೨೬

ಏಕಸ್ತು ವಿಪಿನೇಽಮುಷ್ಮಿನ್ನಸ್ತಿ ಶೂನ್ಯಃ ಶಿವಾಲಯಃ ।
ತತ್ರ ತಿಷ್ಠತಿ ಯೋ ರಾತ್ರಾವಂತರ್ವಾ ಬಹಿರೇವ ವಾ ॥ ೨೭

ತಂ ಶೃಂಗೋತ್ಪಾದಿನೀ ನಾಮ ಶೃಂಗೋತ್ಪಾದನಪೂರ್ವಕಮ್ ।
ಮೋಹಯಿತ್ವಾ ಪಶೂಕೃತ್ಯ ಭಕ್ಷಯತ್ಯೇವ ಯಕ್ಷಿಣೀ ॥ ೨೮

ಏತಚ್ಛ್ರುತ್ವಾಪಿ ಸಾವಜ್ಞಾಸ್ತೇ ಮಹಾವ್ರತಿನಸ್ತದಾ ।
ಊಚುರ್ನಿಶ್ಚಯದತ್ತಂ ತೇ ಚತ್ವಾರಃ ಸಹಯಾಯಿನಃ ॥ ೨೯

೬೦. "ಬಾ, ಆ ಬಡಪಾಯಿ ಯಕ್ಷಿಣಿಯು ನಮಗೇನು ಮಾಡಿಯಾಳು ? ಎಂತೆಂತಹ ಸ್ಮಶಾನಗಳಲ್ಲಿ ರಾತ್ರಿಗಳನ್ನು ನಾವು ಕಳೆದು ಬಂದಿದ್ದೇವೆ.'

೬೧. ಅವರು ಹೀಗೆ ಹೇಳಲು ಅವರೊಂದಿಗೆ ನಿರ್ಜನವಾದ ಶಿವಮಂದಿರವನ್ನು ತಲುಪಿದ ನಿಶ್ಚಯದತ್ತನು ಆ ರಾತ್ರಿಯನ್ನು ಅಲ್ಲಿಯೇ ಕಳೆಯಲು ಒಳಹೊಕ್ಕನು.

೬೨–೬೩. ದೇವಾಲಯದ ಪ್ರಾಂಗಣದಲ್ಲಿ ಬೇಗನೆ ಬೂದಿಯಿಂದ ದೊಡ್ಡ ಮಂಡಳವೊಂದನ್ನು ಮಾಡಿ, ಅದರ ಒಳಗೆ ಹೋಗಿ, ಕಟ್ಟಿಗೆಗಳಿಂದ ಬೆಂಕಿಯನ್ನು ಉರಿಸಿ ಧೀರನಾದ ನಿಶ್ಚಯದತ್ತನೂ ಆ ನಾಲ್ವರು ಮಹಾವ್ರತಿಗಳೂ ಆತ್ಮರಕ್ಷಣೆಗೆಂದು ಮಂತ್ರವನ್ನು ಜಪಿಸುತ್ತಾ ಎಚ್ಚರವಾಗಿದ್ದರು.

೬೪. ಆ ರಾತ್ರಿವೇಳೆಯಲ್ಲಿ ಶೃಂಗೋತ್ಪಾದಿನಿಯೆಂಬ ಯಕ್ಷಿಣಿಯು ದೂರದಿಂದಲೇ ಅಸ್ಥಿಪಂಜರದ ಕಿನ್ನರಿಯನ್ನು ನುಡಿಸುತ್ತಾ, ಕುಣಿಯುತ್ತಾ, ಅಲ್ಲಿಗೆ ಬಂದಳು.

೬೫ ಅವರಲ್ಲಿ ಒಬ್ಬ ಮಹಾವ್ರತಿಯನ್ನು ಕಣ್ಣಿನಿಂದ ನೋಡಿ ನರ್ತಿಸುತ್ತಾ ಮಂಡಲದ ಹೊರಗಿನಿಂದಲೇ ಮಂತ್ರವನ್ನು ಪಠಿಸಿದಳು.

೬೬ ಆ ಮಂತ್ರದಿಂದ ತಲೆಯ ಮೇಲೆ ಕೋಡು ಬೆಳೆದ ಆತನು ಎಚ್ಚರ ಕಳೆದುಕೊಂಡು ಎದ್ದನು. ಮಹಾವ್ರತಿಕನು ಕುಣಿಯುತ್ತಾ ಉರಿವ ಬೆಂಕಿಯಲ್ಲಿ ಬಿದ್ದನು.

---

ಏಹಿ ಕಿಂ ಕುರುತೇಽಸ್ಮಾಕಂ ವರಾಕೀ ಸಾತ್ರ ಯಕ್ಷಿಣೀ ।
ತೇಷು ತೇಷು ಶ್ಮಶಾನೇಷು ನಿಶಾಸು ಹಿ ವಯಂ ಸ್ಥಿತಾಃ ॥ ೬೦

ಇತ್ಯುಕ್ತವದ್ಭಿಸ್ತೈಃ ಸಾಕಂ ಗತ್ವಾ ಪ್ರಾಪ್ಯ ಶಿವಾಲಯಮ್ ।
ಶೂನ್ಯಂ ನಿಶ್ಚಯದತ್ತಸ್ತಾಂ ರಾತ್ರಿಂ ನೇತುಂ ವಿವೇಶ ಸಃ ॥ ೬೧

ತತ್ರಾಂಗಣೇ ವಿಧಾಯಾಶು ಭಸ್ಮನಾ ಮಂಡಲಂ ಮಹತ್ ।
ಪ್ರವಿಶ್ಯ ಚಾಂತರೇ ತಸ್ಯ ಪ್ರಜ್ವಾಲ್ಯಾಗ್ನಿಂ ಸಹೇಂಧನೈಃ ॥ ೬೨

ಧೀರೋ ನಿಶ್ಚಯದತ್ತಃ ಸ ತೇ ಮಹಾವ್ರತಿನಸ್ತಥಾ ।
ಮಂತ್ರಂ ಜಪಂತೋ ರಕ್ಷಾರ್ಥಂ ಸರ್ವ ಏವಾವತಸ್ಥಿರೇ ॥ ೬೩

ಅಥಾಯಯೌ ವಾದಯಂತೀ ದೂರಾತ್ಕಂಕಾಲಕಿಂನರೀಮ್ ।
ನೃತ್ಯಂತೀ ಯಕ್ಷಿಣೀ ತತ್ರ ಸಾ ಶೃಂಗೋತ್ಪಾದಿನೀ ನಿಶಿ ॥ ೬೪

ಏತ್ಯ ತೇಷು ಚತುರ್ಷ್ವೇಕಂ ಸಾ ಮಹಾವ್ರತಿನಂ ಪ್ರತಿ ।
ದತ್ತದೃಙ್ಮಂತ್ರಮಪಠನ್ನೃತ್ತಂ ಮಂಡಲಾದ್ಬಹಿಃ ॥ ೬೫

ತೇನ ಮಂತ್ರೇಣ ಸಂಜಾತಶೃಂಗೋ ಮೋಹಿತ ಉತ್ಥಿತಃ ।
ನೃತ್ಯಂಸ್ತಸ್ಮಿನ್ ಜ್ವಲತ್ಯಗ್ನೌ ಸ ಮಹಾವ್ರತಿಕೋಽಪತತ್ ॥ ೬೬

೬೭. ಬೆಂಕಿಯಲ್ಲಿ ಬಿದ್ದು ಅರ್ಧ ಬೆಂದಿದ್ದ ಅವನನ್ನು ಅಲ್ಲಿಂದ ಮೇಲಕ್ಕೆಳೆದು ಆ ಶೃಂಗೋತ್ಪಾದಿನಿಯು ಸಂತೋಷದಿಂದ ತಿಂದುಹಾಕಿದಳು.

೬೮. ಅಂತೆಯೇ ಎರಡನೆಯವನನ್ನೂ ಕಣ್ಣಿಂದ ನೋಡಿ ಕೋಡು ಮೂಡಿಸುವ ಆ ಮಂತ್ರವನ್ನು ಹೇಳಿ ಮತ್ತೆ ನರ್ತಿಸಿದಳು.

೬೯. ಆ ಎರಡನೆಯ ವ್ರತಿಗೂ ಕೋಡು ಮೂಡಲು ಅಂತೆಯೇ ಕುಣಿಯುತ್ತ ಬೆಂಕಿಗೆ ಬಿದ್ದನು. ಉಳಿದ ಮೂವರು ನೋಡುತ್ತಿರುವಂತೆಯೇ ಅವನನ್ನು ಎಳೆದು ತಿಂದಳು.

೭೦. ಹೀಗೆ ಕ್ರಮವಾಗಿ ನಾಲ್ವರು ಮಹಾ ವ್ರತಿಕರಿಗೂ ಕೋಡು ಮೂಡಿಸಿ ಮೋಹಗೊಳಿಸಿ ಯಕ್ಷಿಣಿಯು ಅಂದೇ ರಾತ್ರಿ ಕೋಡುಬೆಳೆದ ಆ ನಾಲ್ವರನ್ನೂ ಕೊಂದು ತಿಂದಳು.

೭೧. ನಾಲ್ಕನೆಯವನನ್ನು ತಿನ್ನುತ್ತಿರುವಾಗ ರಕ್ತ ಮಾಂಸಗಳಿಂದ ಮತ್ತೇರಿದ ಆಕೆಯಿಂದ ಅದೃಷ್ಟವಶಾತ್ ಕಿನ್ನರಿವಾದ್ಯವು ನೆಲದಮೇಲೆ ಇಡಲ್ಪಟ್ಟಿತು.

೭೨–೭೩. ಅಷ್ಟರಲ್ಲಿ ಬೇಗನೆ ಎದ್ದು ಧೀರನಾದ ನಿಶ್ಚಯದತ್ತನು ಕಿನ್ನರಿಯನ್ನು ಎತ್ತಿಕೊಂಡು ನುಡಿಸುತ್ತಾ ನರ್ತಿಸುತ್ತಾ ನಗುತ್ತಾ ಸುತ್ತುತ್ತಾ ಅನೇಕ ಬಾರಿ ಕೇಳಿದ್ದರಿಂದ ಕಲಿತ ಆ ಕೋಡುಮೂಡಿಸುವ ಮಂತ್ರವನ್ನು ಯಕ್ಷಿಣಿಯ ಮುಖದ ಮೇಲೆ ಕಣ್ಣಿಟ್ಟು ಜಪಿಸತೊಡಗಿದನು.

---

ಪತಿತಂ ಚಾರ್ಧದಗ್ಧಂ ತಮಾಕೃಷ್ಯೈವಾಗ್ನಿಮಧ್ಯತಃ ।
ಸಾ ಶೃಂಗೋತ್ಪಾದಿನೀ ಹೃಷ್ಟಾ ಭಕ್ಷಯಾಮಾಸ ಯಕ್ಷಿಣೀ ॥ ೬೭

ತತೋ ದ್ವಿತೀಯೇ ವ್ರತಿನಿ ನ್ಯಸ್ತದೃಷ್ಟಿಸ್ತಥೈವ ಸಾ ।
ತಂ ಶೃಂಗೋತ್ಪಾದನಂ ಮಂತ್ರಂ ಪಪಾಠ ಚ ನನರ್ತ ಚ ॥ ೬೮

ಸೋಽಪಿ ದ್ವಿತೀಯಸ್ತನ್ಮಂತ್ರಜಾತಶೃಂಗಃ ಪ್ರನರ್ತಿತಃ ।
ಪತಿತೋಽಗ್ನೌ ತಯಾಕೃಷ್ಯ ಪಶ್ಯತ್ಸ್ವನ್ಯೇಷ್ವಭಕ್ಷ್ಯತ ॥ ೬೯

ಏವಂ ಕ್ರಮೇಣ ಸಂಮೋಹ್ಯ ತಾನ್ ಮಹಾವ್ರತಿನೋ ನಿಶಿ ।
ತಯಾಭಕ್ಷ್ಯಂತ ಯಕ್ಷಿಣ್ಯಾ ಚತ್ವಾರೋಽಪಿ ಸಶೃಂಗಕಾಃ ॥ ೭೦

ಚತುರ್ಥಂ ಭಕ್ಷಯಂತ್ಯಾ ಚ ತಯಾ ಮಾಂಸಾಸ್ರಮತ್ತಯಾ ।
ಸ್ವಯಂ ಕಿಂನರಿಕಾತೋದ್ಯಂ ದೈವಾದ್ಭೂಮೌ ನ್ಯಧೀಯತ ॥ ೭೧

ತಾವಚ್ಚ ಕ್ಷಿಪ್ರಮುತ್ಥಾಯ ತದ್ಗೃಹೀತ್ವೈವ ವಾದಯನ್ ।
ಧೀರೋ ನಿಶ್ಚಯದತ್ತೋಽಪಿ ಪ್ರನೃತ್ಯನ್ ವಿಹಸನ್ ಭ್ರಮನ್ ॥ ೭೨

ತಂ ಶೃಂಗೋತ್ಪಾದನಂ ಮಂತ್ರಮಸಕೃತ್ ಶ್ರುತಶಿಕ್ಷಿತಮ್ ।
ಪಾಪಠ್ಯತೇ ಸ್ಮ ಯಕ್ಷಿಣ್ಯಾಸ್ತಸ್ಯಾ ನ್ಯಸ್ತೇಕ್ಷಣೋ ಮುಖೇ ॥ ೭೩

೭೪. ಆ ಮಂತ್ರದ ಪ್ರಯೋಗದಿಂದ ವಿವಶಳಾಗಿ ಸಾವನ್ನು ಶಂಕಿಸಿದ ಕೋಡು ಮೂಡಿದ್ದ ಯಕ್ಷಿಣಿಯು ಏಳ ಬಯಸಿ ವಿನಯದಿಂದ ಅವನನ್ನು ಬೇಡಿಕೊಂಡಳು:

೭೫. "ಎಲೈ ಮಹಾನುಭಾವನೇ, ಈ ಬಡ ಹೆಣ್ಣನ್ನು ಕೊಲ್ಲದಿರು. ಈಗ ನನಗೆ ನೀನೇ ಶರಣು. ಮಂತ್ರಪಠನೆಯನ್ನು ನಿಲ್ಲಿಸು.

೭೬. ನನ್ನನ್ನು ಕಾಪಾಡು. ನಿನ್ನ ಆಸೆಯೆಲ್ಲವನ್ನೂ ನಾನು ಬಲ್ಲೆನು. ನಿನಗೆ ಅದನ್ನು ಸಾಧಿಸಿಕೊಡುತ್ತೇನೆ. ಅನುರಾಗಪರೆಯು ಎಲ್ಲಿರುವಳೋ ಅಲ್ಲಿಗೇ ನಿನ್ನನ್ನು ಕರೆದೊಯ್ಯುತ್ತೇನೆ.'

೭೭. ಹೀಗೆ ಅವಳು ನಂಬಿಕೆ ಬರುವಂತೆ ಮಾತನಾಡಲು ಹಾಗೆಯೇ ಆಗಲೆಂದು ಧೀರನಾದ ನಿಶ್ಚಯದತ್ತನು ಮಂತ್ರಪಾಠಾದಿಗಳನ್ನು ಉಪಸಂಹರಿಸಿದನು.

೭೮. ಆಮೇಲೆ ಅವಳ ಮಾತಿನಂತೆ ಯಕ್ಷಿಣಿಯ ಹೆಗಲನ್ನೇರಿ ಆಕಾಶ ಮಾರ್ಗದಲ್ಲಿ ತನ್ನ ಪ್ರಿಯೆಯನ್ನು ಕುರಿತು ಹೊರಟನು.

೭೯. ರಾತ್ರಿಯು ಮುಗಿದು ಬೆಳಗಾದ ಮೇಲೆ ಬೆಟ್ಟದ ಕಾಡೊಂದನ್ನು ತಲುಪಲು ಯಕ್ಷಿಣಿಯು ಅವನಿಗೆ ಹೇಳಿದಳು:

೮೦. "ಸೂರ್ಯೋದಯವಾದ ಬಳಿಕ ನನಗೆ ಇನ್ನು ಮುಂದೆ ಹೋಗಲು ಶಕ್ತಿಯಿಲ್ಲ. ಆದ್ದರಿಂದ ಒಡೆಯನೇ, ಈ ಸುಂದರ ವನದಲ್ಲಿ ಹಗಲನ್ನು ಕಳೆ.

---

ತತ್ಪ್ರಯೋಗಪ್ರಭಾವೇಣ ವಿವಶಾ ಮೃತ್ಯುಶಂಕಿನೀ ।
ಉತ್ಥಾತುಕಾಮಶೃಂಗೀ ಸಾ ಪ್ರಹ್ವಾ ತಂ ಪ್ರಾಹ ಯಕ್ಷಿಣೀ ॥ ೭೪

ಮಾ ವಧೀಸ್ತ್ವಂ ಮಹಾಸತ್ತ್ವ ಸ್ತ್ರಿಯಂ ಮಾಂ ಕೃಪಣಾಮಿಮಾಮ್ ।
ಇದಾನೀಂ ಶರಣಂ ತ್ವಂ ಮೇ ಮಂತ್ರಪಾಠಾದಿ ಸಂಹರ ॥ ೭೫

ರಕ್ಷ ಮಾಂ ವೇದ್ಮ್ಯಹಂ ಸರ್ವಮೀಪ್ಸಿತಂ ಸಾಧಯಾಮಿ ತೇ ।
ಅನುರಾಗಪರಾ ಯತ್ರ ತತ್ರ ತ್ವಾಂ ಪ್ರಾಪಯಾಮ್ಯಹಮ್ ॥ ೭೬

ಇತಿ ಸಪ್ರತ್ಯಯಂ ಪ್ರೋಕ್ತಸ್ತಯಾ ಧೀರಸ್ತಥೇತಿ ಸಃ ।
ಚಕ್ರೇ ನಿಶ್ಚಯದತ್ತೋಽತ್ರ ಮಂತ್ರಪಾಠಾದಿಸಂಹೃತಿಮ್ ॥ ೭೭

ತತಃ ಸ ತಸ್ಯಾ ಯಕ್ಷಿಣ್ಯಾಃ ಸ್ಕಂಧಮಾರುಹ್ಯ ತದ್ಗಿರಾ ।
ನೀಯಮಾನಸ್ತಯಾ ವ್ಯೋಮ್ನಾ ಪ್ರತಸ್ಥೇ ತಾಂ ಪ್ರಿಯಾಂ ಪ್ರತಿ ॥ ೭೮

ಪ್ರಭಾತಾಯಾಂ ಚ ರಜನೌ ಪ್ರಾಪ್ಯೈಕಂ ಗಿರಿಕಾನನಮ್ ।
ನಮ್ರಾ ನಿಶ್ಚಯದತ್ತಂ ತಂ ಗುಹ್ಯಕೀ ಸಾ ವ್ಯಜಿಜ್ಞಪತ್ ॥ ೭೯

ಸೂರ್ಯೋದಯೇಽಧುನಾ ಗಂತುಂ ಶಕ್ತಿರ್ನಾಸ್ತಿ ಮಮೋಪರಿ ।
ತದಸ್ಮಿನ್ಕಾನನೇ ಕಾಂತೇ ಗಮಯೇದಂ ದಿನಂ ಪ್ರಭೋ ॥ ೮೦

೮೧. ಸಿಹಿ ಹಣ್ಣುಗಳನ್ನು ತಿನ್ನು. ತೊರೆಗಳ ತಿಳಿನೀರನ್ನು ಕುಡಿ. ನಾನು ಸ್ವಸ್ಥಾನಕ್ಕೆ ಹೋಗಿ ಸಂಜೆವೇಳೆಗೆ ಹಿಂತಿರುಗುತ್ತೇನೆ.

೮೨. ಆಗ ಹಿಮಾಲಯದ ಶಿರಸ್ಸಿನ ಹಾರದಂತಿರುವ ಪುಷ್ಕರಾವತಿ ನಗರಿಯಲ್ಲಿ ನಿನ್ನನ್ನು ಅನುರಾಗಪರೆಯ ಒಳಗೆ ಒಯ್ಯುತ್ತೇನೆ.'

೮೩. ಹೀಗೆ ಹೇಳಿ ಅವನ ಅನುಮತಿ ಪಡೆದು ಹೆಗಲಿನಿಂದ ಅಲ್ಲಿ ಕೆಳಗಿಳಿಸಿ ಸತ್ಯಸಂಧೆಯಾದ ಆ ಯಕ್ಷಿಣಿಯು ಮತ್ತೆ ಬರಲು ಹೊರಟುಹೋದಳು.

೮೪. ಅವಳು ಹೋದಮೇಲೆ ನಿಶ್ಚಯದತ್ತನು ಅಲ್ಲಿ ಒಳಗೆ ವಿಷ ತುಂಬಿದ್ದರೂ ಹೊರಗೆ ತಣ್ಣನೆಯ ತಿಳಿ ನೀರಿನಿಂದ ತುಂಬಿದ್ದ ಒಂದು ಅಗಾಧವಾದ ಸರೋವರವನ್ನು ಕಂಡನು.

೮೫. ಅದು "ಎಲೈ ರಾಗಿಯೇ (=ಕಾಮಿಯೇ) ಹೆಂಗಸಿನ ಮನಸ್ಸೂ ಈ ರೀತಿಯದು' ಎಂದು ಕೈ ಚಾಚಿ (= ಕಿರಣ ಸೂಸಿ) ಸೂರ್ಯನು ಉದಾಹರಣೆಯನ್ನು ತೋರಿಸಿದಂತಿತ್ತು.

೮೬. ಅವನು ಆ ನೀರು ವಿಷಯುಕ್ತವಾಗಿರುವುದನ್ನು ವಾಸನೆಯಿಂದ ಮತ್ತು ಮನುಷ್ಯಕೃತ್ಯಗಳಿಂದ ತಿಳಿದು ಅದನ್ನು ಬಿಟ್ಟು ದಿವ್ಯವಾದ ಆ ಬೆಟ್ಟದಲ್ಲಿ ಬಾಯಾರಿಕೆಯಿಂದ ನೀರಿಗಾಗಿ ಅಲೆದಾಡಿದನು.

---

ಫಲಾನಿ ಭುಂಕ್ಷ್ವ ಸ್ವಾದೂನಿ ನಿರ್ಝರಾಂಭಃ ಶುಭಂ ಪಿಬ ।
ಅಹಂ ಯಾಮಿ ನಿಜಂ ಸ್ಥಾನಮೇಷ್ಯಾಮಿ ಚ ನಿಶಾಗಮೇ ॥ ೮೧

ನೇಷ್ಯಾಮಿ ಚ ತದೈವ ತ್ವಾಮನುರಾಗಪರಾಂತಿಕಮ್ ।
ಮೌಲಿಮಾಲಾಂ ಹಿಮಗಿರೇರ್ನಗರೀಂ ಪುಷ್ಕರಾವತೀಮ್ ॥ ೮೨

ಇತ್ಯುಕ್ತ್ವಾ ತದನುಜ್ಞಾತಾ ಸ್ಕಂಧಾತ್ತತ್ರಾವತಾರ್ಯ ತಮ್ ।
ಯಕ್ಷಿಣೀ ಪುನರಾಗಂತುಂ ಸತ್ಯಸಂಧಾ ಜಗಾಮ ಸಾ ॥ ೮೩

ತತೋ ನಿಶ್ಚಯದತ್ತೋಽಸ್ಯಾಂ ಗತಾಯಾಮೈಕ್ಷತಾತ್ರ ಸಃ ।
ಅಗಾಧಮಂತಃ ಸವಿಷಂ ಸ್ವಚ್ಛ ಶೀತಂ ಬಹಿಃ ಸರಃ ॥ ೮೪

ರಾಗಿನ್ಸ್ತ್ರೀಚಿತ್ತಮೇತಾದೃಗಿತ್ಯರ್ಕೇಣ ನಿದರ್ಶನಮ್ ।
ಪ್ರಸಾರಿತಕರೇಣೇವ ಪ್ರಕಟೀಕೃತ್ಯ ದರ್ಶಿತಮ್ ॥ ೮೫

ಸ ತದ್ವಿಷಾಕ್ತಂ ಗಂಧೇನ ಬುದ್ಧ್ವಾ ಮಾನುಷಕೃತ್ಯತಃ ।
ತ್ಯಕ್ತ್ವಾಂಭೋರ್ಥೀ ತೃಷಾರ್ತಃಸನ್ ದಿವ್ಯೇ ತತ್ರಾಭ್ರಮದ್ಗಿರೌ ॥ ೮೬

೬೭. ಹೀಗೆ ಅಲೆಯುತ್ತಾ ಎತ್ತರದ ಪ್ರದೇಶವೊಂದರಲ್ಲಿ ಎರಡು ಪದ್ಮರಾಗಮಣಿಗಳಂತೆ ಏನೋ ಹೊಳೆಯುತ್ತಿದ್ದುದನ್ನು ಕಂಡು ಆ ನೆಲವನ್ನು ಅಗೆದನು.

೬೮. ಮಣ್ಣನ್ನು ತೆಗೆದ ಮೇಲೆ ಬದುಕಿರುವ ಕೋತಿಯೊಂದರ ತಲೆಯು ಅವನಿಗೆ ಕಂಡಿತು. ಅದರ ಕಣ್ಣುಗಳೆರಡೂ ಪದ್ಮರಾಗ ಮಣಿಗಳಂತೆ ಹೊಳೆಯುತ್ತಿದ್ದವು.

೬೯. ಆಗ ಇದೇನು ಎಂದು ಅವನು ಯೋಚಿಸುತ್ತಾ ಆಶ್ಚರ್ಯಪಡುತ್ತಿರುವಾಗ ಮನುಷ್ಯರ ಮಾತಿನಿಂದ ಕಪಿಯು ಅವನಿಗೆ ಹೇಳಿತು.

೭೦. "ಈಗ ಕಪಿಯಾಗಿರುವ ನಾನು ಒಬ್ಬ ಮನುಷ್ಯ. ಬ್ರಾಹ್ಮಣನಾದ ನನ್ನನ್ನು ಉದ್ಧಾರ ಮಾಡು. ಆಮೇಲೆ, ಪುಣ್ಯಾತ್ಮನೇ ! ನಿನಗೆ ನನ್ನ ಕಥೆಯೆಲ್ಲವನ್ನೂ ಹೇಳುತ್ತೇನೆ.'

೭೧. ಇದನ್ನು ಕೇಳುತ್ತಲೇ ಅಚ್ಚರಿಗೊಂಡ ನಿಶ್ಚಯದತ್ತನು ಮಣ್ಣನ್ನು ತೆಗೆದು ಆ ಕೋತಿಯನ್ನು ನೆಲದಿಂದ ಮೇಲಕ್ಕೆ ಎತ್ತಿದನು.

೭೨. ಎತ್ತಿದ ಮೇಲೆ ಆ ಕಪಿಯು ಮತ್ತೆ ಅವನ ಕಾಲುಗಳಿಗೆ ಬಿದ್ದು "ಕಷ್ಟದಿಂದ ನನ್ನನ್ನು ಉದ್ಧರಿಸಿದ ನೀನು ನನಗೆ ಪ್ರಾಣವನ್ನು ನೀಡಿರುವೆ.

೭೩. ಆದ್ದರಿಂದ ಬಾ, ಆಯಾಸಗೊಂಡಿರುವ ನೀನು ಹಣ್ಣು ನೀರುಗಳನ್ನು ಸೇವಿಸು. ನಿನ್ನ ಅನುಗ್ರಹದಿಂದ ನಾನೂ ಎಷ್ಟೋ ಕಾಲವಾದ ಬಳಿಕ ಇಂದು ಪಾರಣೆಯನ್ನು ಮಾಡುತ್ತೇನೆ.'

---

ಭ್ರಮನ್ನುನ್ನತಭೂಭಾಗೇ ಪದ್ಮರಾಗಮಣೀ ಇವ ।
ಸ್ಫುರಂತೌ ದ್ವಾವಪಶ್ಯಚ್ಚ ಭುವಂ ತಾಂ ನಿಚಖಾನ ಚ ॥ ೬೭

ಅಪಾಸ್ತಮೃತ್ತಿಕಶ್ಚಾಸ್ಯ ಜೀವತೋ ಮರ್ಕಟಸ್ಯ ಸಃ ।
ಶಿರೋ ದದರ್ಶ ತೇ ಚಾಸ್ಯ ಪದ್ಮರಾಗಾವಿವಾಕ್ಷಿಣೀ ॥ ೬೮

ತತೋ ವಿಸ್ಮಯತೇ ಯಾವತ್ ಕಿಮೇತದಿತಿ ಚಿಂತಯನ್ ।
ತಾವನ್ಮನುಷ್ಯವಾಚಾಸೌ ಮರ್ಕಟಸ್ತಮಭಾಷತ ॥ ೬೯

ಮಾನುಷೋ ಮರ್ಕಟೀಭೂತೋ ವಿಪ್ರೋಽಹಂ ಮಾಂ ಸಮುದ್ಧರ ।
ಕಥಯಿಷ್ಯಾಮಿ ತೇ ಸಾಧೋ ಸ್ವವೃತ್ತಾಂತಂ ತತೋಽಖಿಲಮ್ ॥ ೭೦

ಏತತ್ ಶ್ರುತ್ವೈವ ಸಾಶ್ಚರ್ಯೋ ಮೃತ್ತಿಕಾಮಪನೀಯ ಸಃ ।
ಭೂಮೇರ್ನಿಶ್ಚಯದತ್ತಸ್ತಮುಜ್ಜಹಾರಾಥ ಮರ್ಕಟಮ್ ॥ ೭೧

ಉದ್ಧೃತಃ ಪಾದಪತಿತಸ್ತಂ ಭೂಯೋಽಪಿ ಸ ಮರ್ಕಟಃ ।
ಉವಾಚ ದತ್ತಾಃ ಪ್ರಾಣಾ ಮೇ ಕೃಚ್ಛ್ರಾದುದ್ಧರತಾ ತ್ವಯಾ ॥ ೭೨

ತದೇಹಿ ಯಾವತ್ ಶ್ರಾಂತಸ್ತ್ವಮುಪಯುಂಕ್ಷ್ವ ಫಲಾಂಬುನೀ ।
ತ್ವತ್ಪ್ರಸಾದಾದಹಂ ಚಾಪಿ ಕರಿಷ್ಯೇ ಪಾರಣಂ ಚಿರಾತ್ ॥ ೭೩

೯೪. ಹೀಗೆ ಹೇಳಿ ಆ ಕಪಿಯು, ತನ್ನ ನೆಲೆಯಲ್ಲಿದ್ದ ಸಿಹಿ ಹಣ್ಣು ಹಾಗೂ ಒಳ್ಳೆಯ ನೆರಳುಗಳಿಂದ ಕೂಡಿದ್ದ ಮರಗಳುಳ್ಳ ದೂರದ ಬೆಟ್ಟದ ನದಿಯ ದಡಕ್ಕೆ ಅವನನ್ನು ಒಯ್ದಿತು.

೯೫. ಅಲ್ಲಿ ಸ್ನಾನಮಾಡಿ ನೀರು ಹಣ್ಣುಗಳನ್ನು ಸೇವಿಸಿ ನಿಶ್ಚಯದತ್ತನು ಹಿಂತಿರುಗಿ ಬಂದು ಪಾರಣೆ ಮಾಡಿದ್ದ ಆ ಕಪಿಯನ್ನು ಹೀಗೆ ಪ್ರಶ್ನಿಸಿದನು.

೯೬ "ಮನುಷ್ಯನಾಗಿದ್ದ ನೀನು ಮರ್ಕಟನಾದದ್ದು ಹೇಗೆಂಬುದನ್ನು ಹೇಳು' ಎಂದು ಆಗ ಕಪಿಯು ""ಅದನ್ನೀಗ ಹೇಳುತ್ತೇನೆ ಕೇಳು" ಎಂದಿತು.

೯೭ ""ವಾರಾಣಸಿಯಲ್ಲಿ ಚಂದ್ರಸ್ವಾಮಿಯೆಂಬ ಬ್ರಾಹ್ಮಣೋತ್ತಮನೊಬ್ಬನು ಇದ್ದಾನೆ. ಅವನ ಮಡದಿ ಸುವೃತ್ತೆಯಲ್ಲಿ ಹುಟ್ಟಿದ ಮಗನೇ ನಾನು.

೯೮. ಎಲೈ ಗೆಳೆಯನೇ ! ನಮ್ಮ ತಂದೆಯು ನನಗೆ ಸೋಮಸ್ವಾಮಿ ಎಂದು ಹೆಸರಿಟ್ಟನು. ಕ್ರಮೇಣ ನಾನು ಕೊಬ್ಬಿನಿಂದ ಹತೋಟಿಮೀರಿ ಮನ್ಮಥನೆಂಬ ಮತ್ತಗಜವನ್ನೇರಿದೆನು.

೯೯. ಅಂತಹ ನನ್ನನ್ನು ಒಮ್ಮೆ ಅದೇ ಊರಿನಲ್ಲಿದ್ದ ಶ್ರೀಗರ್ಭನೆಂಬ ವೈಶ್ಯನ ಮಗಳು ಕಿಟಕಿಯ ತುದಿಯಲ್ಲಿದ್ದು ದೂರದಿಂದಲೇ ನೋಡಿದಳು.

೧೦೦. ಮಾಥುರನೆಂಬ ವೈಶ್ಯನಾಯಕನ ಮಡದಿಯಾದ ಬಂಧುದತ್ತೆಯೆಂಬ ಆ ತರುಣಿಯು ತಂದೆಯಾದ ವರಾಹದತ್ತನ ಮನೆಯಲ್ಲಿ ನೆಲೆಸಿದ್ದಳು.

---

ಇತ್ಯುಕ್ತ್ವಾ ತಮನೈಷೀತ್ಸ ದೂರಂ ಗಿರಿನದೀತಟಮ್ ।
ಕಪಿಃ ಸ್ವಾಧೀನಸುಸ್ವಾದುಫಲಸಚ್ಛಾಯಪಾದಪಮ್ ॥ ೯೪
ತತ್ರ ಸ್ನಾತ್ವೋಪಭುಕ್ತಾಂಬುಫಲಃ ಸ ಕೃತಪಾರಣಮ್ ।
ಕಪಿಂ ನಿಶ್ಚಯದತ್ತಸ್ತಂ ಪ್ರತ್ಯಾಗತ್ಯ ತತೋಽಬ್ರವೀತ್ ॥ ೯೫
ಕಥಂ ತ್ವಂ ಮರ್ಕಟೀಭೂತೋ ಮಾನುಷೋಽಪ್ಯುಚ್ಯತಾಮಿತಿ ।
ತತಃ ಸ ಮರ್ಕಟೋಽ ವಾದೀತ್ ಶೃಣ್ವಿದಾನೀಂ ವದಾಮ್ಯದಃ ॥ ೯೬
ಚಂದ್ರಸ್ವಾಮೀತಿ ನಾಮ್ನಾಸ್ತಿ ವಾರಾಣಸ್ಯಾಂ ದ್ವಿಜೋತ್ತಮಃ ।
ತಸ್ಯ ಪತ್ನ್ಯಾಂ ಸುವೃತ್ತಾಯಾಂ ಜಾತೋಽಸ್ಮ್ಯೇಷ ಸುತಃ ಸಖೇ ॥ ೯೭
ಸೋಮಸ್ವಾಮೀತಿ ಪಿತ್ರಾ ಚ ಕೃತನಾಮಾ ಕ್ರಮಾದಹಮ್ ।
ಆರೂಢೋ ಮದನವ್ಯಾಲಗಜಂ ಮದನಿರಂಕುಶಮ್ ॥ ೯೮
ತಂ ಮಾಂ ಕದಾಚಿದದ್ರಾಕ್ಷೀತ್ ದೂರಾದ್ವಾತಾಯನಾಗ್ರಗಾ ।
ಶ್ರೀಗರ್ಭಾಖ್ಯಸ್ಯ ವಣಿಜಸ್ತತ್ಪುರೀವಾಸಿನಃ ಸುತಾ ॥ ೯೯
ತರುಣೀ ಬಂಧುದತ್ತಾಖ್ಯಾ ಮಾಥುರಸ್ಯ ವಣಿಕ್ಪತೇಃ ।
ಭಾರ್ಯಾ ವರಾಹದತ್ತಸ್ಯ ಪಿತುರ್ವೇಶ್ಮನ್ಯವಸ್ಥಿತಾ । ೧೦೦

೧೧೧. ನನ್ನನ್ನು ನೋಡಿದ ಕೂಡಲೇ ಬಯಕೆ ಹುಟ್ಟಿದ ಅವಳು ನನ್ನ ಹೆಸರನ್ನು ಹುಡುಕಿ ತನ್ನ ಆಪ್ತಸಖಿಯನ್ನು ನನ್ನ ಸಮಾಗಮ ಬೇಡಿ ನನ್ನೆಡೆಗೆ ಕಳುಹಿಸಿಕೊಟ್ಟಳು.

೧೧೨. ಅವಳ ಆ ಸಖಿಯು ಅವಳು ಕಾಮಾಂಧಳಾಗಿರುವುದನ್ನು ತಿಳಿದು ನನ್ನನ್ನು ಏಕಾಂತದಲ್ಲಿ ಸಂಧಿಸಿ, ಅವಳ ಅಭಿಲಾಷೆಯನ್ನು ನನಗೆ ತಿಳಿಸಿ, ನನ್ನನ್ನು ತನ್ನ ಮನೆಗೆ ಕರೆದೊಯ್ದಳು.

೧೧೩. ನನ್ನನ್ನು ಅಲ್ಲಿರಿಸಿ ಆಗಲೇ ಗುಟ್ಟಾಗಿ ಹೋಗಿ ತವಕದಿಂದಾಗಿ ಲಜ್ಜೆಯನ್ನು ಲೆಕ್ಕಿಸದ ಬಂಧುದತ್ತೆಯನ್ನು ಅಲ್ಲಿಗೆ ಕರೆತಂದಳು.

೧೧೪. ಬಂದಕೂಡಲೇ ಅವಳು ನನ್ನನ್ನು ಬಿಗಿಯಾಗಿ ಅಪ್ಪಿಕೊಂಡು ಬಿಟ್ಟಳು. ಮೇರೆಮೀರಿದ ಮನ್ಮಥನು ಹೆಂಗಸರಿಗೆ ಏಕಾಂಗವೀರನೇ ಸರಿ.

೧೧೫. ಹೀಗೆ ಪ್ರತಿದಿನವೂ ಬಂಧುದತ್ತೆಯು ತಂದೆಯ ಮನೆಯಿಂದ ಗೆಳತಿಯ ಮನೆಗೆ ಬಂದು ಸ್ವಚ್ಛಂದವಾಗಿ ನನ್ನೊಡನೆ ಸುಖಿಸಿದಳು.

೧೧೬. ಒಂದುದಿನ ಆಕೆಯು ಇಲ್ಲಿದ್ದು ಬಹಳ ದಿನಗಳಾದವೆಂದು ಅವಳನ್ನು ತನ್ನ ಮನೆಗೆ ಕರೆದೊಯ್ಯಲು ಮಥುರೆಯಿಂದ ಅವಳ ಪತಿಯಾದ ದೊಡ್ಡ ವ್ಯಾಪಾರಿಯು ಅಲ್ಲಿಗೆ ಬಂದನು.

೧೧೭. ಅನಂತರ ತಂದೆಯ ಅನುಮತಿ ಪಡೆದು ಪತಿಯೊಂದಿಗೆ ಹೋಗಬೇಕಾದ ಬಂಧುದತ್ತೆಯು ತನ್ನ ರಹಸ್ಯವನ್ನು ತಿಳಿದಿದ್ದ ಎರಡನೆಯ ಗೆಳತಿಗೆ ಇಂತೆಂದಳು:

---

ಸಾ ಮದಾಲೋಕಸಂಜಾತಮನ್ಮಥಾನ್ವಿಷ್ಯ ನಾಮ ಮೇ ।
ವಯಸ್ಯಾಂ ಪ್ರಾಹಿಣೋದಾಪ್ತಾಂ ಮಹ್ಯಂ ಮತ್ಸಂಗಮಾರ್ಥಿನೀ ॥ ೧೧೧

ಸಾ ತದ್ವಯಸ್ಯಾ ಕಾಮಾಂಧಾಮುಪಗಮ್ಯ ಜನಾಂತಿಕಮ್ ।
ಆಖ್ಯಾತತದಭಿಪ್ರಾಯಾ ಮಾಮನೈಷೀನ್ನಿಜಂ ಗೃಹಮ್ ॥ ೧೧೨

ತತ್ರ ಮಾಂ ಸ್ಥಾಪಯಿತ್ವಾ ಚ ಗತ್ವಾ ಗುಪ್ತಂ ತದೈವ ಸಾ ।
ತಾಂ ಬಂಧುದತ್ತಾಮಾನೈಷೀದೌತ್ಸುಕ್ಯಾಗಣಿತತ್ರಪಾಮ್ ॥ ೧೧೩

ಆನೀತೈವ ಚ ಸಾ ಮೇಽತ್ರ ಕಂಠಾಶ್ಲೇಷಮುಪಾಗಮತ್ ।
ಏಕವೀರೋ ಹಿ ನಾರೀಣಾಮತಿಭೂಮಿಂ ಗತಃ ಸ್ಮರಃ ॥ ೧೧೪

ಏವಂ ದಿನೇ ದಿನೇ ಸ್ವೈರಮಾಗತ್ಯಾತ್ರ ಪಿತುರ್ಗೃಹಾತ್ ।
ಅರಂಸ್ತ ಬಂಧುದತ್ತಾ ಸಾ ಮಯಾ ಸಹ ಸಖೀಗೃಹೇ ॥ ೧೧೫

ಏಕದಾಂ ತಾಂ ನಿಜಗೃಹಂ ನೇತುಂ ತತ್ರ ಚಿರಸ್ಥಿತಾಮ್ ।
ಆಗತಃ ಸ ಪತಿಸ್ತಸ್ಯಾ ಮಥುರಾತೋ ಮಹಾವಣಿಕ್ ॥ ೧೧೬

ತತಃ ಪಿತ್ರಾಭ್ಯನುಜ್ಞಾತಾ ಪತ್ಯಾ ತೇನ ನಿನೀಷತಾ ।
ರಹಸ್ಯಜ್ಞಾಂ ದ್ವಿತೀಯಾಂ ಸಾ ಬಂಧುದತ್ತಾಬ್ರವೀತ್ಸಖೀಮ್ ॥ ೧೧೭

೧೦೮. "ಗೆಳತಿಯೇ, ನನ್ನ ಗಂಡನು ಮಥುರೆಗೆ ನನ್ನನ್ನು ಕರೆದೊಯ್ಯುವುದು ನಿಶ್ಚಿತ. ಆದರೆ ನಾನು ಸೋಮಸ್ವಾಮಿಯಿಲ್ಲದೆ ಅಲ್ಲಿ ಬದುಕಿರಲಾರೆ.

೧೦೯. ಆದ್ದರಿಂದ ಈಗೇನು ಮಾಡಬೇಕೆಂದು ಹೇಳಿಕೊಡು' ಎನ್ನಲು ಸುಖಶಯೆಯೆಂಬ ಆ ಯೋಗಿನೀ ಗೆಳತಿಯು ಅವಳಿಗೆ ಹೇಳಿದಳು.

೧೧೦. "ಎರಡು ಮಂತ್ರ ಪ್ರಯೋಗಗಳು ನನಗೆ ತಿಳಿದಿವೆ. ಅವುಗಳಲ್ಲಿ ಒಂದರಿಂದ ಕೊರಳಿಗೆ ದಾರವನ್ನು ಕಟ್ಟಿದ ಕೂಡಲೇ ಮನುಷ್ಯನು ಮಂಗನಾಗಿ ಮಾರ್ಪಡು ತ್ತಾನೆ

೧೧೧. ಎರಡನೆಯದರಿಂದ ದಾರವನ್ನು ಬಿಚ್ಚಿದರೆ ಈತನು ಮತ್ತೆ ಮನುಷ್ಯನಾಗುವನು. ಆಮೇಲೆ ಮತ್ತೆ ಕಪಿ ರೂಪದಲ್ಲಿದ್ದರೂ ಇವನ ಬುದ್ಧಿಯು ಹಾಗೆಯೇ ಇರುತ್ತದೆ.

೧೧೨. ಆದ್ದರಿಂದ ನೀನು ಪ್ರಿಯಕರನಾದ ಸೋಮಸ್ವಾಮಿಯನ್ನು ಬಯಸುವಿಯಾದರೆ ಇವನನ್ನು ಈಗಲೇ ಮಂಗದ ಮರಿಯನ್ನಾಗಿ ಮಾಡುತ್ತೇನೆ.

೧೧೩. ಆಮೇಲೆ ಆಟದ ನೆಪದಿಂದ ಈತನನ್ನು ಮಥುರೆಗೆ ಒಯ್ಯಿ. ನಿನಗೆ ಇವೆರಡೂ ಮಂತ್ರ ಯುಕ್ತಿಗಳನ್ನು ಹೇಳಿಕೊಡುತ್ತೇನೆ.

೧೧೪. ಅದರಿಂದ ನೀನು ಪಕ್ಕದಲ್ಲೇ ಇರುವ ಈ ಮಂಗವನ್ನು ರಹಸ್ಯವಾದ ಸ್ಥಳದಲ್ಲಿ ಪುರುಷನನ್ನಾಗಿಸಿ ಇಷ್ಟಾರ್ಥವನ್ನು ಸಾಧಿಸಿಕೊಳ್ಳುವೆ.'

---

ನಿಶ್ಚಿತಂ ಸಖಿ ನೇತವ್ಯಾ ಭರ್ತ್ರಾಹಂ ಮಥುರಾಂ ಪುರೀಮ್ ।
ನ ಚ ಜೀವಾಮ್ಯಹಂ ತತ್ರ ಸೋಮಸ್ವಾಮಿವಿನಾಕೃತಾ ॥ ೧೦೮

ತದತ್ರ ಕೋಽಭ್ಯುಪಾಯೋ ಮೇ ಕಥಯೇತ್ಯುದಿತಾ ತಯಾ ।
ಸಖೀ ಸುಖಶಯಾ ನಾಮ ಯೋಗಿನೀ ತಾಂ ಜಗಾದ ಸಾ ॥ ೧೦೯

ದ್ವೌ ಸ್ತೋ ಮಂತ್ರಪ್ರಯೋಗೌ ಮೇ ಯಯೋರೇಕೇನ ಸೂತ್ರಕೇ ।
ಕಂಠಬದ್ಧೇ ಝಗಿತ್ಯೇವ ಮಾನುಷೋ ಮರ್ಕಟೋ ಭವೇತ್ ॥ ೧೧೦

ದ್ವಿತೀಯೇನ ಚ ಮುಕ್ತೇಽಸ್ಮಿನ್ ಸೂತ್ರಕೇ ಸೈಷ ಮಾನುಷಃ ।
ಪುನರ್ಭವೇತ್ ಕಪಿತ್ವೇ ಚ ನಾಸ್ಯ ಪ್ರಜ್ಞಾ ವಿಲುಪ್ಯತೇ ॥ ೧೧೧

ತದ್ಯದೀಚ್ಛತಿ ಸುಶ್ರೋಣಿ ಸೋಮಸ್ವಾಮೀ ಪ್ರಿಯಃ ಸ ತೇ ।
ತದೇತಂ ಮರ್ಕಟಶಿಶುಂ ಸಂಪ್ರತ್ಯೇವ ಕರೋಮ್ಯಹಮ್ ॥ ೧೧೨

ತತಃ ಕ್ರೀಡಾನಿಭಾದೇತಂ ಗೃಹೀತ್ವಾ ಮಥುರಾಂ ವ್ರಜ ।
ಮಂತ್ರಯುಕ್ತಿದ್ವಯಂ ಚೈತದ್ಭವತೀಂ ಶಿಕ್ಷಯಾಮ್ಯಹಮ್ ॥ ೧೧೩

ಸಂವಿಧಾಸ್ಯಸಿ ಯೇನೈನಂ ಪಾರ್ಶ್ವಸ್ಥಂ ಮರ್ಕಟಾಕೃತಿಮ್ ।
ರಹಃಸ್ಥಾನೇ ಚ ಪುರುಷಂ ಪ್ರಿಯಂ ಸಂಪಾದಯಿಷ್ಯಸಿ ॥ ೧೧೪

೧೧೫. ಆ ಸಖಿಯು ಹಾಗೆ ಹೇಳಲು ಬಂಧುದತ್ತೆಯು ಗುಟ್ಟಾಗಿ ನನ್ನನ್ನು ಕರೆಸಿ ಪ್ರೀತಿಯಿಂದ ಈ ಸಂಗತಿಯನ್ನು ಅಂತೆಯೇ ತಿಳಿಯಹೇಳಿದಳು.

೧೧೬. ನಾನು ಒಪ್ಪಿಕೊಳ್ಳಲು ಮಂತ್ರದ ದಾರವನ್ನು ನನ್ನ ಕೊರಳಿಗೆ ಹಾಕಿ ಸಖಿ ಸುಖಶಯೆಯು ಕ್ಷಣಕಾಲದಲ್ಲಿಯೇ ನನ್ನನ್ನು ಮಂಗನಮರಿಯನ್ನಾಗಿಸಿ ಬಿಟ್ಟಳು.

೧೧೭. ಅದೇ ರೂಪದಲ್ಲಿ ಬಂಧುದತ್ತೆಯು ನನ್ನನ್ನು ಒಯ್ದು ಗಂಡನಿಗೆ ನನ್ನ ಗೆಳತಿಯು ಆಟಕ್ಕೆಂದು ಇದನ್ನು ನೀಡಿದಳೆಂದು ತೋರಿಸಿದಳು.

೧೧೮. ಅವಳ ಮಡಿಲಲ್ಲಿದ್ದ ಆಟಿಕೆಯಾದ ನನ್ನನ್ನು ನೋಡಿ ಅವನು ಸಂತೋಷಪಟ್ಟನು. ಬುದ್ಧಿವಂತನಾದರೂ ಮಾತುಬರುತ್ತಿದ್ದರೂ ನಾನು ಮಂಗನಾಗಿಯೇ ಇದ್ದು ಬಿಟ್ಟೆನು.

೧೧೯. ಅಬ್ಬಾ ! ಹೆಂಗಸರ ನಡವಳಿಕೆಯೇ, ಎಂದು ಒಳಗಡೆಯೇ ನಗುತ್ತಿದ್ದರೂ ನಾನು ಹಾಗೆಯೇ ಇದ್ದೆನು. ಕಾಮನು ಯಾರನ್ನು ತಾನೇ ಹಾಸ್ಯಕ್ಕೆ ಗುರಿಮಾಡಲಾರ ?

೧೨೦. ಇನ್ನೊಂದು ದಿನ ಗೆಳತಿಯಿಂದ ಮಂತ್ರೋಪದೇಶ ಪಡೆದ ಬಂಧುದತ್ತೆಯು ತಂದೆಯ ಮನೆಯಿಂದ ಗಂಡನ ಜೊತೆ ಅವನ ಮನೆಗೆಂದು ಮಥುರೆಗೆ ಹೋದಳು.

---

ಏವಮುಕ್ತಾ ತಯಾ ಸಖ್ಯಾ ಬಂಧುದತ್ತಾ ತಥೈವ ಸಾ ।
ರಹಸ್ಯಾನಾಯ್ಯ ಸಸ್ನೇಹಂ ತದರ್ಥಂ ಮಾಮಬೋಧಯತ್ ॥ ೧೧೫
ಕೃತಾನುಜ್ಞಂ ಚ ಮಾಂ ಬದ್ಧಮಂತ್ರಸೂತ್ರಂ ಗಲೇಕ್ಷಣಾತ್ ।
ತತ್ಸಖೀ ಸಾ ಸುಖಶಯಾ ವ್ಯಧಾನ್ಮರ್ಕಟಪ್ರೋತಕಮ್ ॥ ೧೧೬
ತದ್ರೂಪೇಣ ಸ್ವಭರ್ತ್ರೇ ಸಾ ಬಂಧುದತ್ತೋಪನೀಯ ಮಾಮ್ ।
ಸಖ್ಯಾ ಮಹ್ಯಂ ವಿನೋದಾಯ ದತ್ತೋಽಸಾವಿತ್ಯದರ್ಶಯತ್ ॥ ೧೧೭
ಅತುಷ್ಯತ್ಸ ಚ ಮಾಂ ದೃಷ್ಟ್ವಾ ಕ್ರೀಡನೀಯಂ ತದಂಕಗಮ್ ।
ಅಹಂ ಚ ಕಪಿರೇವಾಸಂ ಪ್ರಾಜ್ಞೋಽಪಿ ವ್ಯಕ್ತವಾಗಪಿ ॥ ೧೧೮
ಅಹೋ ಸ್ತ್ರೀಚರಿತಂ ಚಿತ್ರಮಿತ್ಯಂತಶ್ಚ ಹಸನ್ನಪಿ ।
ತಥಾತಿಷ್ಠಮಹಂ ಕೋಹಿ ಕಾಮೇನ ನ ವಿಡಂಬ್ಯತೇ ॥ ೧೧೯
ಸಖ್ಯಾ ಶಿಕ್ಷಿತತನ್ಮಂತ್ರಾ ಬಂಧುದತ್ತಾಹ್ನ್ಯಥಾಪರೇ ।
ಮಥುರಾಂ ಪ್ರತಿ ಸಾ ಪ್ರಾಯಾದ್ಭರ್ತ್ರಾ ಸಹ ಪಿತುರ್ಗೃಹಾತ್ ॥ ೧೨೦

೧೨೧. ಆಗ ಆಕೆಯ ಗಂಡನು ಮಾರ್ಗದಲ್ಲಿ ಹೆಂಡತಿಗೆ ಸಂತೋಷವಾಗಲೆಂದು ನನ್ನನ್ನು ಸೇವಕನೊಬ್ಬನ ಹೆಗಲನ್ನೇರಿಸಿದನು.

೧೨೨. ಅನಂತರ ನಾವೆಲ್ಲ ಪ್ರಯಾಣಿಸುತ್ತಾ ಎರಡು ಮೂರು ದಿನಗಳಲ್ಲಿ ತುಂಬ ಕೋತಿಗಳಿಂದ ಭಯಂಕರವಾಗಿದ್ದ ಮಾರ್ಗಮಧ್ಯದಲ್ಲಿದ್ದ ಕಾಡೊಂದನ್ನು ಪ್ರವೇಶಿಸಿದೆವು.

೧೨೩. ಆಗ ನನ್ನನ್ನು ನೋಡಿದ ಕಾಡು ಮಂಗಗಳು ಹಿಂಡು ಹಿಂಡಾಗಿ ಎಲ್ಲ ಕಡೆಗಳಿಂದಲೂ ಬಂದು ಪರಸ್ಪರ ಕಿಲಕಿಲ ಎಂದು ಕೂಗಿ ಕರೆಯುತ್ತಾ ನನ್ನನ್ನು ಮುತ್ತಿಕೊಂಡುವು.

೧೨೪–೧೨೫. ತಡೆಯಲಸಾಧ್ಯವಾದ ಆ ಕಪಿಗಳು ಬಂದು ನನ್ನನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡಿದ್ದ ಸೇವಕನನ್ನು ತಿನ್ನಲು ಪ್ರಾರಂಭಿಸಿದುವು. ಅವನು ಹೆದರಿ ನನ್ನನ್ನು ಹೆಗಲ ಮೇಲಿನಿಂದ ಇಳಿಸಿ ಓಡಿಹೋದನು. ನಂತರ ಮಂಗಗಳೆಲ್ಲ ನನ್ನನ್ನು ಹಿಡಿದುಕೊಂಡುಬಿಟ್ಟವು.

೧೨೬. ನನ್ನ ಮೇಲಣ ಪ್ರೀತಿಯಿಂದ ಬಂಧುದತ್ತೆಯೂ ಆಕೆಯ ಗಂಡನೂ ಅವನ ಅನುಚರನೂ ಕಲ್ಲುಗಳಿಂದಲೂ ಕೋಲುಗಳಿಂದಲೂ ಹೊಡೆಯುತ್ತಿದ್ದರೂ ಆ ಕೋತಿಗಳನ್ನು ಸೋಲಿಸಲು ಸಮರ್ಥರಾಗಲಿಲ್ಲ.

---

ಮಾಂ ಚಾಪ್ಯೇಕಸ್ಯ ಭೃತ್ಯಸ್ಯ ಸ್ಕಂಧಮಾರೋಪಯತ್ತದಾ ।
ಸಭರ್ತಾ ಬಂಧುದತ್ತಾಯಾಃ ಪಥಿ ತತ್ಪ್ರಿಯಕಾಮ್ಯಯಾ ॥ ೧೨೧

ತತೋ ವಯಂ ತೇ ಸರ್ವೇಽಪಿ ಯಾಂತೋ ಮಧ್ಯೇ ಪಥಿ ಸ್ಥಿತಮ್ ।
ದಿನೈರ್ದ್ವಿತ್ರೈರ್ವನಂ ಪ್ರಾಪ್ತಾ ಬಹುಮರ್ಕಟಭೀಷಣಮ್ ॥ ೧೨೨

ತತೋಽಭ್ಯಧಾವನ್ ದೃಷ್ಟ್ವಾ ಮಾಂ ಮರ್ಕಟಾ ಗಣಶೋಽಭಿತಃ ।
ಕ್ಷಿಪ್ರಂ ಕಿಲಕಿಲಾರಾವೈರಾಹ್ವಯಂತಃ ಪರಸ್ಪರಮ್ ॥ ೧೨೩

ಆಗತ್ಯ ಖಾದಿತುಂ ತೇ ಚ ಪ್ರಾರಭಂತ ಪ್ಲವಂಗಮಾಃ ।
ದುರ್ವಾರಾಸ್ತಾಂ ವಣಿಗ್‌ಭೃತ್ಯಂ ಯಸ್ಯ ಸ್ಕಂಧೇಽಹಮಾಸಿತಃ ॥ ೧೨೪

ಸ ತೇನ ವಿಹ್ವಲಃ ಸ್ಕಂಧಾತ್ ತ್ಯಕ್ತ್ವೈವ ಭುವಿ ಮಾಂ ಭಯಾತ್ ।
ಪಲಾಯಿತೋಽಭೂದಥ ಮಾಮಗೃಹ್ಣಂಸ್ತೇ ಪ್ಲವಂಗಮಾಃ ॥ ೧೨೫

ಮತ್‌ಸ್ನೇಹಾದ್ಬಂಧುದತ್ತಾ ಚ ತದ್ಭರ್ತಾ ತಸ್ಯ ಚಾನುಗಾಃ ।
ಪಾಷಾಣೈರ್ಲಗುಡೈರ್ಘ್ನಂತೋ ಜೇತುಂ ತಾನ್ನಾಶಕನ್ ಕಪೀನ್ ॥ ೧೨೬

೧೨೭. ಆಮೇಲೆ ಆ ಕೋತಿಗಳು, ಕೆಟ್ಟ ಕೆಲಸದಿಂದ ಸಿಟ್ಟು ಮಾಡಿಕೊಂಡಿವೆಯೆಂಬಂತೆ, ಮುಗ್ಧನಾದ ನನ್ನ ಅಂಗಾಂಗಗಳಲ್ಲಿ ಒಂದೊಂದು ಕೂದಲನ್ನೂ ಉಗುರುಗಳಿಂದಲೂ ಹಲ್ಲುಗಳಿಂದಲೂ ಕಿತ್ತುಹಾಕಿದುವು.

೧೨೮. ಅನಂತರ ಕೊರಳಿನಲ್ಲಿದ್ದ ದಾರದ ಮಹಿಮೆಯಿಂದಲೂ ಶಿವನ ಸ್ಮರಣೆಯಿಂದಲೂ ನಾನು ಶಕ್ತಿಪಡೆದು ಅವುಗಳ ಹಿಡಿತದಿಂದ ಬಿಡಿಸಿಕೊಂಡು ಓಡಿದೆನು.

೧೨೯. ದಟ್ಟವಾದ ಕಾಡಿನೊಳಕ್ಕೆ ಹೋಗಿ ಅವುಗಳ ಕಣ್ಣೋಟಕ್ಕೆ ಸಿಕ್ಕಿ ಬೀಳದೆ ಕಾಡಿನಿಂದ ಕಾಡಿಗೆ ಹೋಗುತ್ತಾ ಕ್ರಮೇಣ ಈ ಕಾಡನ್ನು ತಲುಪಿದೆನು.

೧೩೦. ನೀತಿಭ್ರಷ್ಟನಾದ ನನಗೆ ಬಂಧುದತ್ತೆಯ ಜನ್ಮದಲ್ಲಿ ಇಲ್ಲಿಯೇ ಹೀಗೆ ಪರಸ್ತ್ರೀ ಸಮಾಗಮವು ಕೋತಿಯ ಜನ್ಮವನ್ನು ತಂದುಕೊಟ್ಟಿತಲ್ಲ.

೧೩೧. ಎಂದು ದುಃಖದಿಂದ ಕುರುಡಾಗಿ ಮಳೆಯಲ್ಲಿ ಅಲೆದಾಡುತ್ತಿದ್ದ ನನಗೆ ಅಸಂತುಷ್ಟನಾದ ವಿಧಿಯು ಇನ್ನೊಂದು ದುಃಖವನ್ನು ತಂದುಕೊಟ್ಟಿತು.

೧೩೨. ಅಕಸ್ಮಾತ್ ಬಂದಿದ್ದ ಹೆಣ್ಣಾನೆಯೊಂದು ಸೊಂಡಿಲಿನಲ್ಲಿ ನನ್ನನ್ನು ಹಿಡಿದೆತ್ತಿ ಮೋಡದ ನೀರಿನಿಂದ ಕರಗಿದ್ದ ಹುತ್ತದ ಕೆಸರಿನ ಒಳಗಡೆ ಹಾಕಿತು.

೧೩೩ ಅದು ಭವಿತವ್ಯದಿಂದ ನಿಯುಕ್ತವಾಗಿದ್ದ ಯಾರೋ ದೇವತೆಯೇ ಇರಬೇಕೆಂದು ಅಂದುಕೊಂಡಿದ್ದೇನೆ. ಏಕೆಂದರೆ ನಾನು ಎಷ್ಟೇ ಕಷ್ಟಪಟ್ಟರೂ ಆ ಕೆಸರಿನಿಂದ ಅಲುಗಾಡಲೂ ಶಕ್ತನಾಗಲಿಲ್ಲ.

---

ತತಸ್ತೇ ಮರ್ಕಟಾ ಮೂಢಸ್ಯಾಂಗೇಽಂಗೇ ಲೋಮ ಲೋಮ ಮೇ ।
ನಖೈರ್ವ್ಯಲುಂಪನ್ ದಂತೈಶ್ಚ ಕುಕರ್ಮಕುಪಿತಾ ಇವ ॥ ೧೨೭

ಕಂಠಸೂತ್ರಸ್ಯ ಮಾಹಾತ್ಮ್ಯಾಚ್ಛಂಭೋಶ್ಚ ಸ್ಮರಣಾತ್ತತಃ ।
ಅಹಂ ಲಬ್ಧಬಲಸ್ತೇಭ್ಯೋ ಬಂಧಮುನ್ಮುಚ್ಯ ವಿದ್ರುತಃ ॥ ೧೨೮

ಪ್ರವಿಶ್ಯ ಗಹನೇ ತೇಷಾಂ ವ್ಯತೀತೋ ದೃಷ್ಟಿಗೋಚರಾತ್ ।
ಕ್ರಮಾದ್ವನಾದ್ವನಂ ಗಚ್ಛನ್ನಿದಂ ಪ್ರಾಪ್ತೋಽಸ್ಮಿ ಕಾನನಮ್ ॥ ೧೨೯

ಭ್ರಷ್ಟಸ್ಯ ಬಂಧುದತ್ತಾಯಾ ಜನ್ಮನ್ಯತ್ರೈವ ತೇ ಕಥಮ್ ।
ಮರ್ಕಟತ್ವಫಲೋ ಜಾತಃ ಪರದಾರಸಮಾಗಮಃ ॥ ೧೩೦

ಇತಿ ದುಃಖತಮೋಽಂಧಸ್ಯ ಭ್ರಮತಃ ಪ್ರಾವೃಷೀಹ ಮೇ ।
ದುಃಖಾಂತರಮಪಿ ಪ್ರತ್ತಮಸಂತುಷ್ಟೇನ ವೇಧಸಾ ॥ ೧೩೧

ಯನ್ಮಾಮಕಸ್ಮಾದಾಗತ್ಯ ಕರಾಕ್ರಾಂತಂ ಕರೇಣುಕಾ ।
ಮೇಘಾಂಭಃಪ್ಲುತವಲ್ಮೀಕಕರ್ದಮಾಂತರ್ನ್ಯವೇಶಯತ್ ॥ ೧೩೨

ಭವಿತವ್ಯನಿಯುಕ್ತಾ ಚ ಜಾನೇ ಸಾ ಕಾಪಿ ದೇವತಾ ।
ಯದ್ಯತ್ನಾನ್ನಾಶಕಂ ತಸ್ಮಾತ್ ಪಂಕಾಚ್ಚಲಿತುಮಪ್ಯಲಮ್ ॥ ೧೩೩

೧೩೪. ನಾನು ಸಾಯಲಿಲ್ಲವಲ್ಲ ಎಂದು ಸಮಾಧಾನ ಪಟ್ಟುಕೊಂಡಿದ್ದ ನಾನು ಎಡಬಿಡದೆ ಶಿವನನ್ನು ಧ್ಯಾನ ಮಾಡುತ್ತಿದ್ದೆ.

೧೩೫–೧೩೬. ಎಲೈ ಗೆಳೆಯನೇ ! ನೀನು ನನ್ನನ್ನು ಈ ಒಣಕೆಸರಿನಿಂದ ಮೇಲಕ್ಕೆ ಎತ್ತುವವರೆಗೆ ನನಗೆ ಹಸಿವು ಬಾಯಾರಿಕೆಯು ಇರಲೇ ಇಲ್ಲ. ತಿಳಿವಳಿಕೆ ಇದ್ದರೂ ನನ್ನನ್ನು ಕೋತಿಯ ರೂಪದಿಂದ ಬಿಡಿಸಿಕೊಳ್ಳುವಷ್ಟು ಶಕ್ತಿಯು ನನಗೆ ಇಲ್ಲವಾಗಿದೆ

೧೩೭ ಯಾವಾಗ ಯಾರಾದರೂ ಯೋಗಿನಿಯು ಅದೇ ಮಂತ್ರದಿಂದ ನನ್ನ ಕೊರಳ ದಾರವನ್ನು ಬಿಚ್ಚುವಳೋ ಆಗ ನಾನು ಮತ್ತೆ ಮನುಷ್ಯನಾಗಲಿರುವೆ.

೧೩೮. ಇದಿಷ್ಟೂ ನನ್ನ ಕಥೆ. ಇನ್ನು ನೀನು ದುರ್ಗಮವಾದ ಈ ಕಾಡಿಗೆ ಏಕೆ ಮತ್ತು ಹೇಗೆ ಬಂದೆಯೆಂಬುದನ್ನು ನನಗೆ ತಿಳಿಸು."

೧೩೯. ಹೀಗೆ ಮಂಗನ ರೂಪದಲ್ಲಿದ್ದ ಸೋಮಸ್ವಾಮಿಯೆಂಬ ವಿಪ್ರನು ಹೇಳಿದಾಗ ನಿಶ್ಚಯದತ್ತನು ಅವನಿಗೆ ತನ್ನ ಕಥೆಯನ್ನು ಹೇಳಿದನು .

---

ಆಶ್ವಾಸ್ಯಮಾನೇ ಚೈತಸ್ಮಿನ್ನಮೃತೋಽಸ್ಮಿ ನ ಕೇವಲಮ್ ।
ಯಾವಜ್‌ಜ್ಞಾನಂ ಮಮೋತ್ಪನ್ನಮನಿಶಂ ಧ್ಯಾಯತೋ ಹರಮ್ ॥ ೧೩೪
ತಾವತ್ಕಾಲಂ ಚ ನೈವಾಸೀತ್ ಕ್ಷುತ್‌ತೃಷ್ಣಾ ಚ ಸಖೇ ಮಮ ।
ಯಾವದದ್ಯೋದ್‌ಧೃತಃ ಶುಷ್ಕಪಂಕಕೂಟಾದಹಂ ತ್ವಯಾ ॥ ೧೩೫
ಜ್ಞಾನೇ ಪ್ರಾಪ್ತೇಽಪಿ ಶಕ್ತಿರ್ಮೇ ತಾವತೀ ನೈವ ವಿದ್ಯತೇ ।
ಮೋಚಯೇಯಂ ಯಯಾತ್ಮಾನಮಿತೋ ಮರ್ಕಟಭಾವತಃ ॥ ೧೩೬
ಕಂಠಸೂತ್ರಂ ಯದಾ ಕಾಪಿ ತನ್ಮಂತ್ರೇಣೈವ ಮೋಕ್ಷ್ಯತಿ ।
ಯೋಗಿನೀ ಮೇ ತದಾ ಭೂಯೋ ಭವಿತಾಸ್ಮೀಹ ಮಾನುಷಃ ॥ ೧೩೭
ಇತ್ಯೇಷ ಮಮ ವೃತ್ತಾಂತಃ ತ್ವಂ ತ್ವಗಮ್ಯಮಿದಂ ವನಮ್ ।
ಕಿಮಾಗತಃ ಕಥಂ ಚೇತಿ ಬ್ರೂಹೀದಾನೀಂ ವಯಸ್ಯ ಮೇ ॥ ೧೩೮
ಏವಮ ಮರ್ಕಟರೂಪೇಣ ಸೋಮಸ್ವಾಮಿದ್ವಿಜೇನ ಸಃ ।
ಉಕ್ತೋ ನಿಶ್ಚಯದತ್ತಃ ಸ್ವಂ ತಸ್ಮೈ ವೃತ್ತಾಂತಮಬ್ರವೀತ್ ॥ ೧೩೯

೧೪೦-೧೪೧. ತಾನು ಹೇಗೆ ವಿದ್ಯಾಧರಿಯ ಸಲುವಾಗಿ ಉಜ್ಜಯಿನಿಯಿಂದ ಬಂದದ್ದು, ಧೈರ್ಯದಿಂದ ಯಕ್ಷಿಣಿಯನ್ನು ಗೆದ್ದು ಆ ಯಕ್ಷಿಣಿಯು ರಾತ್ರಿವೇಳೆಯಲ್ಲಿ ಇಲ್ಲಿಗೆ ತನ್ನನ್ನು ತಂದದ್ದು ಇತ್ಯಾದಿಗಳನ್ನು ಹೇಳಿದಾಗ ಆತನ ಆಶ್ಚರ್ಯಕಾರಕ ಕಥೆಯನ್ನು ಕೇಳಿ ಕಪಿಯ ರೂಪ ಧರಿಸಿದ್ದ ಧೀಮಂತನಾದ ಸೋಮಸ್ವಾಮಿಯು ನಿಶ್ಚಯದತ್ತನಿಗೆ ಹೇಳಿದನು:

೧೪೨. "ಹೆಣ್ಣಿನ ಸಲುವಾಗಿ ನೀನು ತುಂಬ ಕಷ್ಟವನ್ನು ಅನುಭವಿಸಿದೆ. ನಾನೂ ಹಾಗೆಯೇ. ಈ ಲೋಕದಲ್ಲಿ ಸಂಪತ್ತುಗಳೂ ಸುಂದರಿಯರೂ ಯಾರಿಗೂ ಎಂದಿಗೂ ಸ್ಥಿರವಲ್ಲ.

೧೪೩. ಹೆಂಗಸರು ಸಂಧ್ಯಾ ಸಮಯದಂತೆ ಕ್ಷಣಕಾಲ ರಾಗ (=ಕೆಂಪುಬಣ್ಣ ಹಾಗೂ ಪ್ರೀತಿ) ಉಳ್ಳವರು, ನದಿಯಂತೆ ವಕ್ರವಾದ ಅಭಿಪ್ರಾಯ (ನೀರಿನ ಪಾತ್ರ) ಹೊಂದಿರುವವರು, ಹೆಣ್ಣು ಹಾವಿನಂತೆ ನಂಬಬಾರದವರು ಮತ್ತು ಮಿಂಚಿನಂತೆ ಚಂಚಲೆಯರು.

೧೪೪. ಆದ್ದರಿಂದ ಆ ವಿದ್ಯಾಧರಿ ಅನುರಾಗಪರೆಯೂ ಸಹ ತಮ್ಮ ಜಾತಿಯವನನ್ನು ಪಡೆದ ಕೂಡಲೇ ಮನುಷ್ಯನಾದ ನಿನ್ನಲ್ಲಿ ಪ್ರೀತಿಯಿದ್ದರೂ ಆಗ ಪ್ರೀತಿರಹಿತಳಾಗ ಬಹುದು.

೧೪೫ ಆದ್ದರಿಂದ ಸರಿಯಾಗಿ ಮಾಗದ ಫಲಕ್ಕೆ ಸಮಾನವಾದ, ಕೊನೆಯಲ್ಲಿ ವಿರಸದಲ್ಲಿ ಪರ್ಯವಸಾನವಾಗುವ ಈ ಸ್ತ್ರೀನಿಮಿತ್ತಕವಾದ ಪ್ರಯಾಸವು ಇಲ್ಲಿಗೆ ಇಷ್ಟು ಸಾಕು.

---

ಯಥಾ ವಿದ್ಯಾಧರೀಹೇತೋರುಜ್ಜಯಿನ್ಯಾ ಸಮಾಗತಃ ।
ಆನೀತೋ ಧೈರ್ಯಜಿತಯಾ ಯಕ್ಷಿಣ್ಯಾ ಚ ತಯಾ ನಿಶಿ ॥ ೧೪೦
ತತಃ ಶ್ರುತತದಾಶ್ಚರ್ಯವೃತ್ತಾಂತಃ ಕಪಿರೂಪಧೃತ್ ।
ಧೀಮಾನ್ನಿಶ್ಚಯದತ್ತಂ ತಂ ಸೋಮಸ್ವಾಮೀ ಜಗಾದ ಸಃ ॥ ೧೪೧
ಅನುಭೂತಂ ತ್ವಯಾ ದುಃಖಂ ಮಯ್ಯೈವ ಸ್ತ್ರೀಕೃತೇ ಮಹತ್ ।
ನ ಚ ಶ್ರಿಯಃ ಸ್ತ್ರಿಯಶ್ಚೇಹ ಕದಾಚಿತ್ ಕಸ್ಯಚಿತ್ ಸ್ಥಿರಾಃ ॥ ೧೪೨
ಸಂಧ್ಯಾವತ್ ಕ್ಷಣರಾಗಿಣ್ಯೋ ನದೀವತ್ ಕುಟಿಲಾಶಯಾಃ ।
ಭುಜಗೀವದವಿಶ್ವಾಸ್ಯಾ ವಿದ್ಯುದ್ವಚ್ಚಪಲಾಃ ಸ್ತ್ರಿಯಃ ॥ ೧೪೩
ತತ್ಸಾ ವಿದ್ಯಾಧರೀ ರಕ್ತಾಪ್ಯನುರಾಗಪರಾ ಕ್ಷಣಾತ್ ।
ಪ್ರಾಪ್ಯ ಕಂಚಿತ್ ಸ್ವಜಾತೀಯಂ ವಿರಜ್ಯೇತ್ ತ್ವಯಿ ಮಾನುಷೇ ॥ ೧೪೪
ತದಲಂ ಸ್ತ್ರೀನಿಮಿತ್ತೇನ ಪ್ರಯಾಸೇನಾಮುನಾಧುನಾ ।
ಕಿಂಪಾಕಫಲತುಲ್ಯೇನ ವಿಪಾಕವಿರಸೇನ ತೇ ॥ ೧೪೫

೧೪೬ ಗೆಳೆಯನೇ, ವಿದ್ಯಾಧರರ ಪಟ್ಟಣವಾದ ಪುಷ್ಕರಾವತಿಗೆ ಹೋಗಲೇ ಬೇಡ. ಯಕ್ಷಿಣಿಯ ಹೆಗಲನ್ನೇರಿ ಅದೇ ಉಜ್ಜಯಿನಿಗೇ ಹಿಂದಿರುಗು.

೧೪೭ ಮಿತ್ರನೇ, ನನ್ನ ಮಾತನ್ನು ಕೇಳು. ಹಿಂದೆ ಗೆಳೆಯನ ಮಾತನ್ನು ಅನುರಾಗಕ್ಕೆ ವಶನಾದ ನಾನು ಕೇಳಲಿಲ್ಲ. ಅದಕ್ಕಾಗಿ ಈಗಲೂ ನಾನು ಪರಿತಪಿಸುತ್ತಿದ್ದೇನೆ.

೧೪೮ ಅಂದು ಬಂಧುದತ್ತೆಯಲ್ಲಿ ಅನುರಕ್ತನಾಗಿದ್ದ ನನಗೆ ಭವಶರ್ಮನೆಂಬ ನನ್ನ ಒಳ್ಳೆಯ ಸ್ನೇಹಿತನು ಬೇಡವೆಂದು ತಡೆಯುತ್ತಾ ಹೀಗೆ ಹೇಳಿದನು:

೧೪೯. "ಗೆಳೆಯನೇ, ಹೆಂಗಸರ ವಶಕ್ಕೆ ಮಾತ್ರ ಸಿಲುಕಬೇಡ. ಹೆಂಗಸರ ಮನಸ್ಸು ಯಾವಾಗಲೂ ಬಲು ದುರ್ಗಮ. ಅಂತೆಯೇ ನನ್ನ ಜೀವನದಲ್ಲಿ ನಡೆದ ಘಟನೆಯನ್ನು ಈಗ ಹೇಳುವೆನು ಕೇಳು:

೧೫೦. ಇದೇ ವಾರಾಣಸಿಯಲ್ಲಿ ತರುಣಿಯೂ ಸುಂದರಿಯೂ ಚಂಚಲೆಯೂ ಮತ್ತು ಗುಪ್ತಯೋಗಿನಿಯೂ ಆಗಿದ್ದ ಸೋಮದಾ ಎಂಬ ಬ್ರಾಹ್ಮಣಿಯೊಬ್ಬಳಿದ್ದಳು.

೧೫೧. ವಿಧಿಯ ಕಾರಣ ನನಗೆ ಅವಳೊಂದಿಗೆ ಗುಟ್ಟಾಗಿ ಸಂಗಮವಾಯಿತು. ಅದೇ ಸಂಗಮವು ಮುಂದುವರೆದು ಅವಳಲ್ಲಿ ನನಗೆ ಪ್ರೀತಿಯು ಬೆಳೆಯಲಾರಂಭಿಸಿತು.

೧೫೨. ಅವಳನ್ನೊಮ್ಮೆ ನಾನು ಅಸೂಯೆಯ ಕೋಪದಿಂದ ಸುಮ್ಮನೆ ಹೊಡೆದೆನು. ಆ ಘಾತುಕಿಯು ಕೂಡಲೇ ಕೋಪವನ್ನು ಮರೆಮಾಚಿ ಅದನ್ನು ಸಹಿಸಿಕೊಂಡಳು.

---

ಮಾಗಾ ವಿದ್ಯಾಧರಪುರೀಂ ತಾಂ ಸಖೇ ಪುಷ್ಕರಾವತೀಮ್ ।
ಯಕ್ಷಿಣೀಸ್ಕಂಧಮಾರುಹ್ಯ ತಾಮೇವೋಜ್ಜಯಿನೀಂ ವ್ರಜ ॥ ೧೪೬

ಕುರು ಮದ್ವಚನಂ ಮಿತ್ರ ಪೂರ್ವಂ ಮಿತ್ರವಚೋ ಮಯಾ ।
ನ ಕೃತಂ ರಾಗಿಣಾ ತೇನ ಪರಿತಪ್ಯೇಽಧುನಾಪ್ಯಹಮ್ ॥ ೧೪೭

ಬಂಧುದತ್ತಾನುರಕ್ತಂ ಹಿ ಸುಸ್ನಿಗ್ಧೋ ಬ್ರಾಹ್ಮಣಸ್ತದಾ ।
ವಾರಯನ್ ಭವಶರ್ಮಾಖ್ಯಃ ಸುಹೃನ್ಮಾಮೇವಮಬ್ರವೀತ್ ॥ ೧೪೮

ಸ್ತ್ರಿಯಾಃ ಸಖೇ ವಶಂ ಮಾ ಗಾಃ ಸ್ತ್ರೀಚಿತ್ತಂ ಹ್ಯತಿದುರ್ಗಮಮ್ ।
ತಥಾ ಚ ಮಮ ಯದ್ವೃತ್ತಂ ತದಿದಂ ವಚ್ಮಿ ತೇ ಶೃಣು ॥ ೧೪೯

ವಾರಾಣಸ್ಯಾಮಿಹೈವಾಸೀತ್ತರುಣೀ ರೂಪಶಾಲಿನೀ ।
ಬ್ರಾಹ್ಮಣೀ ಸೋಮದಾ ನಾಮ ಚಪಲಾ ಗುಪ್ತಯೋಗಿನೀ ॥ ೧೫೦

ತಯಾ ಚ ಸಹ ಮೇ ದೈವಾತ್ ಸಮಭೂತ್ ಸಂಗಮೋ ರಹಃ ।
ತತ್ಸಂಗಮಕ್ರಮಾತ್ತಸ್ಯಾಂ ಮಮ ಪ್ರೀತಿರವರ್ಧತ ॥ ೧೫೧

ಏಕದಾ ತಾಮಹಂ ಸ್ವೈರಮೀರ್ಷ್ಯಾಕೋಪಾದತಾಡಯಮ್ ।
ತಚ್ಚಾಸಹಿಷ್ಟ ಸಾ ಕ್ರೂರಾ ಕೋಪಂ ಪ್ರಚ್ಛಾದ್ಯ ತತ್ಕ್ಷಣಮ್ ॥ ೧೫೨

೧೫೩. ಮಾರನೆಯ ದಿನ ಪ್ರೇಮಕ್ರೀಡೆಯ ನೆಪದಿಂದ ಅವಳು ನನ್ನ ಕೊರಳಿಗೆ ದಾರವೊಂದನ್ನು ಕಟ್ಟಿದಳು. ನಾನು ಆ ಕೂಡಲೇ ಮೆತ್ತಗಾದ ಬಸವನಾಗಿ ಬಿಟ್ಟೆನು.

೧೫೪. ಆಮೇಲೆ ಬಸವನಾದ ನನ್ನನ್ನು ಎತ್ತು-ಒಂಟೆಗಳಿಂದ ಜೀವನ ನಡೆಸುತ್ತಿದ್ದ ಒಬ್ಬಾತನಿಗೆ ತನಗೆ ಬೇಕಾದ ಬೆಲೆಗೆ ಅವಳು ಮಾರಿಬಿಟ್ಟಳು.

೧೫೫. ಅವನು ನನ್ನ ಮೇಲೆ ಹೊರಿಸಿದ ಭಾರದಿಂದ ಹಿಂಸೆಪಟ್ಟುಕೊಳ್ಳುತ್ತಿದ್ದ ನನ್ನನ್ನು ಬಂಧಮೋಚನಿಕೆಯೆಂಬ ಯೋಗಿನಿಯು ದಯೆಯಿಂದ ನೋಡಿದಳು.

೧೫೬. ನನ್ನನ್ನು ಸೋಮದೆಯು ಪಶುವನ್ನಾಗಿಸಿರುವುದನ್ನು ಜ್ಞಾನದಿಂದ ತಿಳಿದ ಅವಳು ನನ್ನ ಯಜಮಾನನು ನೋಡದೇ ಇರುವಾಗ ನನ್ನ ಕೊರಳಿನಿಂದ ದಾರವನ್ನು ತೆಗೆದು ಹಾಕಿದಳು.

೧೫೭. ಮನುಷ್ಯ ರೂಪಕ್ಕೆ ಬಂದ ನನ್ನನ್ನು ನೋಡಿ ಬಸವನು ಓಡಿಹೋಯಿತೆಂದು ತಿಳಿದು ನನ್ನ ಯಜಮಾನನು ಊರೆಲ್ಲ ಹೋಗಿ ಹುಡುಕಿದನು.

೧೫೮. ಅನಂತರ ನಾನು ಆ ಬಂಧಮೋಚನಿಯೊಂದಿಗೆ ಅಲ್ಲಿಂದ ಹೋಗುತ್ತಿರುವಾಗ ಅಕಸ್ಮಾತ್ತಾಗಿ ಬಂದ ಸೋಮದೆಯು ದೂರದಿಂದಲೇ ನನ್ನನ್ನು ಕಂಡಳು.

---

ಅನ್ಯೇದ್ಯುಃ ಪ್ರಣಯಕ್ರೀಡಾವ್ಯಾಜಾಚ್ಚ ಮಮ ಸೂತ್ರಕಮ್ ।
ಗಲೇಽಬಧ್ನಾದಹಂ ದಾಂತಸ್ತತ್‌ಕ್ಷಣಂ ಬಲದೋಽಭವಮ್ ॥ ೧೫೩

ತತೋಽಹಂ ಬಲದೀಭೂತಸ್ತಯಾ ದಾಂತೋಷ್ಟ್ರಜೀವಿನಃ ।
ಏಕಸ್ಯ ಪುಂಸೋ ವಿಕ್ರೀತೋ ಗೃಹೀತಾಭೀಷ್ಟಮೂಲ್ಯಯಾ ॥ ೧೫೪

ತೇನಾರೋಪಿತಭಾರಂ ಮಾಂ ಕ್ಲಿಶ್ಯಮಾನಮವೈಕ್ಷತ ।
ಬಂಧಮೋಚನಿ ಕಾ ನಾಮ ಯೋಗಿನ್ಯತ್ರ ಕೃಪಾನ್ವಿತಾ ॥ ೧೫೫

ಸಾ ಜ್ಞಾನತಃ ಸೋಮದಯಾ ವಿದಿತ್ವಾ ಮಾಂ ಪಶೂಕೃತಮ್ ।
ಮುಮೋಚ ಕಂಠಾತ್ ಸೂತ್ರಂ ಮೇ ಮದ್ಗೋಸ್ವಾಮಿನ್ಯಪಶ್ಯತಿ ॥ ೧೫೬

ತತೋಽಹಂ ಮಾನುಷೀಭೂತಃ ಸ ಚ ಕ್ಷಿಪ್ರಾದ್ವಿಲೋಕಯನ್ ।
ಪಲಾಯಿತಂ ಮಾಂ ಮನ್ವಾನೋ ಮತ್‌ಸ್ವಾಮೀ ಪ್ರಾಭ್ರಮದ್ದಿಶಃ ॥ ೧೫೭

ಅಹಂ ಚ ಬಂಧಮೋಚನ್ಯಾ ತಯಾ ಸಹ ತತೋವ್ರಜನ್ ।
ದೈವಾದಾಗತಯಾ ದೂರಾದ್ ದೃಷ್ಟಃ ಸೋಮದಯಾ ತಯಾ ॥ ೧೫೮

೧೫೯. ಕ್ರೋಧದಿಂದ ಸುಡುತ್ತಿದ್ದ ಆ ಸೋಮದೆಯು ಜ್ಞಾನಿಯಾದ ಬಂಧಮೋಚನಿಯನ್ನು "ನೀನೇಕೆ ಈ ಪಾಪಿಯನ್ನು ಪ್ರಾಣಿ ಜನ್ಮದಿಂದ ಬಿಡುಗಡೆಗೊಳಿಸಿದೆ ?' ಎಂದು ಕೇಳಿದಳು.

೧೬೦. "ಎಲೈ ದುರಾಚಾರಳೇ, ನಿನಗೆ ಧಿಕ್ಕಾರವಿರಲಿ. ನಿನ್ನ ಈ ಕೆಟ್ಟ ಕೆಲಸಕ್ಕೆ ತಕ್ಕ ಫಲವನ್ನು ಪಡೆಯಲಿರುವೆ. ಈ ಪಾಪಿಯೊಂದಿಗೆ ನಿನ್ನನ್ನೂ ನಾಳೆ ಬೆಳಿಗ್ಗೆ ಕೊಲ್ಲಲಿದ್ದೇನೆ.'

೧೬೧. ಹೀಗೆ ಹೇಳಿ ಹೊರಟುಹೋದಳು. ಅದಕ್ಕೆ ಪ್ರತೀಕಾರ ಮಾಡುವ ಉದ್ದೇಶದಿಂದ ಸಿದ್ಧಯೋಗಿನಿಯಾದ ಬಂಧಮೋಚನಿಯು ನನಗೆ ಹೇಳಿದಳು:

೧೬೨. ನನ್ನನ್ನು ಕೊಲ್ಲಲು ಇವಳು ಹೆಣ್ಣು ಕಪ್ಪು ಕುದುರೆಯ ರೂಪದಲ್ಲಿ ಬರಲಿದ್ದಾಳೆ. ನಾನು ಶೋಣವರ್ಣದ ಹೆಣ್ಣು ಕುದುರೆಯ ರೂಪವನ್ನು ತಾಳಲಿದ್ದೇನೆ.

೧೬೩. ಆಮೇಲೆ ನಮ್ಮಿಬ್ಬರಲ್ಲಿ ಕಾಳಗವು ನಡೆಯುತ್ತಿರುವಾಗ ನೀನು ಕೈಯಲ್ಲಿ ಖಡ್ಗವನ್ನು ಹಿಡಿದು ಹಿಂದಿನಿಂದ ಬಂದು ತಪ್ಪದೇ ಆ ಸೋಮದೆಗೆ ಎಚ್ಚರಿಕೆಯಿಂದ ಹೊಡೆಯಬೇಕು.

೧೬೪. ಹೀಗೆ ಇಬ್ಬರೂ ಸೇರಿ ಇವಳನ್ನು ಕೊಲ್ಲೋಣ. ಆದ್ದರಿಂದ ಬೆಳಿಗ್ಗೆ ನೀನು ನನ್ನ ಮನೆಗೆ ಬರಬೇಕು ಎಂದು ಹೇಳಿ ನನಗೆ ಅವಳ ಮನೆಯನ್ನು ತೋರಿಸಿದಳು.

೧೬೫. ಅವಳು ಒಳಕ್ಕೆ ಹೋದ ಮೇಲೆ ಒಂದೇ ಜನ್ಮದಲ್ಲಿ ಅದ್ಭುತವಾದ ಅನೇಕ ಜನ್ಮಗಳನ್ನು ಅನುಭವಿಸಿದ್ದ ನಾನು ನನ್ನ ಮನೆಗೆ ಹೋದೆನು.

---

ಸಾ ಕ್ರೋಧೇನ ಜ್ವಲಂತೀ ತಾಂ ಜ್ಞಾನಿನೀಂ ಬಂಧಮೋಚನೀಮ್ ।
ಅವಾದೀತ್ ಕಿಮಯಂ ಪಾಪಃ ತಿರ್ಯಕ್ತ್ವಾನ್ಮೋಚಿತೋ ತ್ವಯಾ ॥ ೧೫೯
ಧಿಕ್ ಪ್ರಾಪ್ಸ್ಯಸಿ ದುರಾಚಾರೇ ಫಲಮಸ್ಯ ಕುಕರ್ಮಣಃ ।
ಪ್ರಾತಸ್ತ್ವಾಂ ನಿಹನಿಷ್ಯಾಮಿ ಸಹಿತಾಂ ಪಾಪ್ಮನಾಮುನಾ ॥ ೧೬೦
ಇತ್ಯುಕ್ತ್ವೈವ ಗತಾಯಾಂಚ ತಸ್ಯಾಂ ಸಾ ಸಿದ್ಧಯೋಗಿನೀ ।
ತತ್ಪ್ರತೀಘಾತಹೇತೋರ್ಮಾಮವೋಚದ್ಬಂಧಮೋಚನೀ ॥ ೧೬೧
ಹಂತುಂ ಮಾಂ ಕೃಷ್ಣತುರಗೀರೂಪೇಣೈಷಾಭ್ಯುಪೈಷ್ಯತಿ ।
ಮಯಾ ಚ ಶೋಣವಡವಾರೂಪಮತ್ರಾಶ್ರಯಿಷ್ಯತೇ ॥ ೧೬೨
ತತೋ ಯುದ್ಧೇ ಪ್ರವೃತ್ತೇ ನೌ ಪೃಷ್ಠತಃ ಖಡ್ಗಪಾಣಿನಾ ।
ಸೋಮದಾಯಾಂ ಪ್ರಹರ್ತವ್ಯಂ ತ್ವಯಾಸ್ಯಾಮಪ್ರಮಾದಿನಾ ॥ ೧೬೩
ಏವಮೇತಾಂ ಹನಿಷ್ಯಾವಃ ತತ್ ಪ್ರಾತಸ್ತ್ವಂ ಗೃಹೇ ಮಮ ।
ಆಗಚ್ಛೇರಿತ್ಯುದಿತ್ವಾ ಸಾ ಗೃಹಂ ಮೇ ಸ್ವಮದರ್ಶಯತ್ ॥ ೧೬೪
ತತ್ರ ತಸ್ಯಾಂ ಪ್ರವಿಷ್ಟಾಯಾಮಹಂ ನಿಜಗೃಹಾನಗಾಮ್ ।
ಅನುಭೂತಾದ್ಭುತಾನೇಕಜನ್ಮಾಮುತ್ರೈವ ಜನ್ಮನಿ ॥ ೧೬೫

೧೬೬. ಬೆಳಿಗ್ಗೆ ನಾನು ಕೈಯಲ್ಲಿ ಖಡ್ಗವನ್ನು ಹಿಡಿದು ಅವಳ ಮನೆಗೆ ಹೋದೆನು. ಆಗ ಸೋಮದೆಯು ಕರಿಯ ಹೆಣ್ಣು ಕುದುರೆಯ ರೂಪವನ್ನು ಧರಿಸಿ ಅಲ್ಲಿಗೆ ಬಂದಳು.

೧೬೭. ಬಂಧಮೋಚನಿಯೂ ಸಹ ಶೋಣವರ್ಣದ ಹೆಣ್ಣು ಕುದುರೆಯ ರೂಪವನ್ನು ತಾಳಿದಳು. ಗೊರಸು ಹಲ್ಲುಗಳ ಹೊಡೆತಗಳಿಂದ ಅವರಿಬ್ಬರಿಗೂ ಯುದ್ಧವು ನಡೆಯಿತು.

೧೬೮. ಆಗ ನಾನು ಖಡ್ಗದಿಂದ ಸೋಮದೆಗೆ ಪ್ರಹಾರ ಮಾಡಲು ಕ್ಷುದ್ರಶಾಕಿನಿಯಾದ ಆ ಸೋಮದೆಯು ಬಂಧಮೋಚನಿಯಿಂದ ಆಮೇಲೆ ಹತಳಾದಳು.

೧೬೯. ಅನಂತರ ನಿರ್ಭಯನಾದ ನಾನು ಪ್ರಾಣಿ ಜನ್ಮದ ದುಃಸ್ಥಿತಿಯನ್ನು ದಾಟಿ ಮತ್ತೆಂದೂ ಕೆಟ್ಟ ಸ್ತ್ರೀಯರ ಸಂಗಮವನ್ನು ಮನದಲ್ಲಿಯೂ ಚಿಂತಿಸಲಿಲ್ಲ.

೧೭೦. ಚಪಲತೆ, ದುಡುಕು, ಶಾಕಿನಿ, ಶಂಬರ ಮೊದಲಾದ ಮಾಯಾ ಮಂತ್ರಗಳು ಮುಂತಾದ ಮೂರು ಸ್ತ್ರೀ ದೋಷಗಳು ಪ್ರಾಯಃ ಮೂರು ಲೋಕಗಳಿಗೂ ಭಯವುಂಟು ಮಾಡುವಂತಹವು.

೧೭೧–೧೭೨. ಆ ಕಾರಣ ಶಾಕಿನಿಯ ಗೆಳತಿಯಾದ ಬಂಧುದತ್ತೆಯ ಹಿಂದೇಕೆ ಓಡುವೆ ? ಯಾರಿಗೆ ತನ್ನ ಗಂಡನಲ್ಲಿಯೇ ಸ್ನೇಹವಿಲ್ಲವೋ ಅಂಥವಳಿಗೆ ನಿನ್ನ ಮೇಲೆ ಸ್ನೇಹವೆಲ್ಲಿಯದು ?' ಹೀಗೆ ನನ್ನ ಮಿತ್ರನಾದ ಭವಶರ್ಮನು ಹೇಳಿದರೂ ನಾನು ಅವನ ಮಾತನ್ನು ನಡೆಸಲಿಲ್ಲ. ಅದಕ್ಕೇ ಈ ಸ್ಥಿತಿಗೆ ಬಂದಿದ್ದೇನೆ.

---

ಪ್ರಾತಃ ಕೃಪಾಣಪಾಣಿಶ್ಚ ಗತವಾನಸ್ಮಿ ತದ್ಗೃಹಮ್ ।
ಅಥಾಗಾತ್ ಸೋಮದಾ ಸಾತ್ರ ಕೃಷ್ಣಾಶ್ವಾರೂಪಧಾರಿಣೀ ॥ ೧೬೬

ಸಾಪಿ ಶೋಣಹಯಾರೂಪಮಕರೋದ್ಬಂಧಮೋಚನೀ ।
ಖುರದಂತಪ್ರಹಾರೈಶ್ಚ ತತೋ ಯುದ್ಧಮಭೂತ್ತಯೋಃ ॥ ೧೬೭

ಮಯಾ ಪ್ರದತ್ತನಿಸ್ತ್ರಿಂಶಪ್ರಹಾರಾ ಕ್ಷುದ್ರಶಾಕಿನೀ ।
ನಿಹತಾ ಬಂಧಮೋಚಿನ್ಯಾ ತಯಾ ಸಾ ಸೋಮದಾ ತತಃ ॥ ೧೬೮

ಅಥಾಹಂ ನಿರ್ಭಯೀಭೂತಸ್ತೀರ್ಣತಿರ್ಯಕ್ತ್ವದುರ್ಗತಿಃ ।
ನ ಕುಸ್ತ್ರೀಸಂಗಮಂ ಭೂಯಃ ಮನಸಾ ಸಮಚಿಂತಯಮ್ ॥ ೧೬೯

ಚಾಪಲಂ ಸಾಹಸಿಕತಾ ಶಾಕಿನೀಶಂಬರಾದಯಃ ।
ದೋಷಾಃ ಸ್ತ್ರೀಣಾಂ ತ್ರಯಃ ಪ್ರಾಯೋ ಲೋಕತ್ರಯಭಯಾವಹಾಃ ॥ ೧೭೦

ತಚ್ಛಾಕಿನೀಸಖೀಂ ಬಂಧುದತ್ತಾಂ ಕಿಮನುಧಾವಸಿ ।
ಸ್ನೇಹೋ ಯಸ್ಯಾ ನ ಪತ್ಯೌ ಸ್ವೇ ತಸ್ಯಾಸ್ತು ತ್ವಯ್ಯಸೌ ಕುತಃ ॥ ೧೭೧

ಏವಮುಕ್ತೋಽಪ್ಯಹಂ ತೇನ ಮಿತ್ರೇಣ ಭವಶರ್ಮಣಾ ।
ನಾಕಾರ್ಷಂ ವಚನಂ ತಸ್ಯ ಪ್ರಾಪ್ತೋಽಸ್ಮೀಮಾಂ ಗತಿಂ ತತಃ ॥ ೧೭೨

೧೭೩. ಆದ್ದರಿಂದಲೇ ನಾನು ನಿನಗೆ ಹೇಳುತ್ತೇನೆ. ಅನುರಾಗಪರೆಯ ಬಗ್ಗೆ ಕಷ್ಟಪಡಬೇಡ. ಅವಳು ತನ್ನ ಜಾತಿಯವನು ಸಿಕ್ಕ ಕೂಡಲೇ ನಿನ್ನನ್ನು ತ್ಯಜಿಸುವುದು ನಿಶ್ಚಿತ.

೧೭೪. ಹೆಣ್ಣು ದುಂಬಿಯು ಹೊಸ ಹೂವನ್ನು ಅರಸಿಹೋಗುವಂತೆ ಹೆಂಗಸೂ ಹೊಸ ಹೊಸ ಗಂಡನನ್ನು ಅಪೇಕ್ಷಿಸುತ್ತಾಳೆ. ಆದ್ದರಿಂದ ಗೆಳೆಯನೇ, ನನ್ನಂತೆಯೇ ನಿನಗೂ ಪಶ್ಚಾತ್ತಾಪವಾಗಲಿದೆ."

೧೭೫. ಆದರೆ ಕಪಿಯ ರೂಪದಲ್ಲಿದ್ದ ಸೋಮಸ್ವಾಮಿಯ ಈ ಮಾತುಗಳಾವುವೂ ಅನುರಾಗದಿಂದ ತುಂಬಿದ್ದ ನಿಶ್ಚಯದತ್ತನ ಮನದೊಳಕ್ಕೆ ಇಳಿಯಲೇ ಇಲ್ಲ.

೧೭೬. ಆತನು ಕಪಿಗೆ ಹೇಳಿದನು. "ಅವಳು ಶುದ್ಧವಾದ ವಿದ್ಯಾಧರಾಧಿಪನ ಕುಲದಲ್ಲಿ ಹುಟ್ಟಿದವಳು. ಅವಳೆಂದೂ ನನಗೆ ಮೋಸಮಾಡುವುದಿಲ್ಲ.'

೧೭೭. ಅವರು ಹೀಗೆ ಮಾತನಾಡುತ್ತಿರುವಾಗ ಅಸ್ತಾಚಲವು ಸಂಜೆಯಿಂದ ಕೆಂಪಾಯಿತು. ನಿಶ್ಚಯದತ್ತನ ಪ್ರಿಯವನ್ನೇ ಬಯಸುವವನಂತೆ ಸೂರ್ಯನು ಅಸ್ತಾಚಲದ ಹಿಂದೆ ಹೋದನು.

೧೭೮. ರಾತ್ರಿಯು ಬರಲು ಅಗ್ರದೂತಿಯಂತೆ ಯಕ್ಷಿಣಿಯಾದ ಶೃಂಗೋತ್ಪಾದಿನಿಯು ಅವನ ಬಳಿಗೆ ಬಂದಳು.

೧೭೯. "ನನ್ನನ್ನು ಮರೆಯಬೇಡ' ಎನ್ನುತ್ತಿದ್ದ ಕಪಿಯಿಂದ ಬೀಳ್ಕೊಂಡ ನಿಶ್ಚಯದತ್ತನು ಆಕೆಯ ಹೆಗಲನ್ನೇರಿ ಪ್ರಿಯೆಯನ್ನು ಅರಸುತ್ತಾ ಹೊರಟನು.

---

ಅತಸ್ತ್ವಾಂ ವಚ್ಮಿ ಮಾ ಕಾರ್ಷೀರನುರಾಗಪರಾಂ ಪ್ರತಿ ।
ಕ್ಲೇಶಂ ಸಾ ಹಿ ಸ್ವಜಾತೀಯೇ ಪ್ರಾಪ್ತೇ ತ್ವಾಂ ತ್ಯಕ್ಷ್ಯತಿ ಧ್ರುವಮ್ ॥ ೧೭೩

ಭೃಂಗೀವ ಪುಷ್ಪಂ ಪುರುಷಂ ಸ್ತ್ರೀ ವಾಂಛತಿ ನವಂ ನವಮ್ ।
ಅತೋಽನುತಾಪೋ ಭವಿತಾ ಮಮೇವ ಭವತಃ ಸಖೇ ॥ ೧೭೪

ಇತ್ಯೇತತ್ ಕಪಿರೂಪಸ್ಥಸೋಮಸ್ವಾಮಿವಚೋ ಹೃದಿ ।
ತಸ್ಯ ನಿಶ್ಚಯದತ್ತಸ್ಯ ನಾವಿಶದ್ರಾಗನಿರ್ಭರೇ ॥ ೧೭೫

ಉವಾಚ ಸ ಕಪಿಂ ತಂ ಹಿ ನ ಸಾ ವ್ಯಭಿಚರೇನ್ಮಯಿ ।
ವಿದ್ಯಾಧರಾಧಿಪಕುಲೇ ಶುದ್ಧೇ ಜಾತಾ ಹ್ಯಸಾವಿತಿ ॥ ೧೭೬

ಏವಂ ತಯೋರಾಲಪತೋಃ ಸಂಧ್ಯಾರಕ್ತೋಽಸ್ತಭೂಧರಮ್ ।
ಯಯೌ ನಿಶ್ಚಯದತ್ತಸ್ಯ ಪ್ರಿಯೇಚ್ಛುರಿವ ಭಾಸ್ಕರಃ ॥ ೧೭೭

ಅಥಾಗತಾಯಾಂ ರಜನಾವಗ್ರದೂತ್ಯಾಮಿವಾಯಯೌ ।
ಸಾ ಶೃಂಗೋತ್ಪಾದಿನೀ ತಸ್ಯ ನಿಕಟಂ ತತ್ರ ಯಕ್ಷಿಣೀ ॥ ೧೭೮

ಯಯೌ ನಿಶ್ಚಯದತ್ತಸ್ತತ್ ಸ್ಕಂಧಾರೂಢಃ ಪ್ರಿಯಾಂ ಪ್ರತಿ ।
ಪ್ರಯಾತುಮಾಪೃಚ್ಛ್ಯ ಕಪಿಂ ಸ್ಮರ್ತವ್ಯೋಽಸ್ಮೀತಿ ವಾದಿನಮ್ ॥ ೧೭೯

೧೮೦. ರಾತ್ರಿವೇಳೆಯಲ್ಲಿ ಹಿಮಾಲಯದಲ್ಲಿ, ಅನುರಾಗಪರೆಯ ತಂದೆ ವಿದ್ಯಾಧರಪತಿಯ ಊರಾದ ಪುಷ್ಕರಾವತಿಯನ್ನು ತಲುಪಿದನು.

೧೮೧. ಅಷ್ಟರಲ್ಲಿ ಅವನ ಬರುವನ್ನು ತನ್ನ ಪ್ರಭಾವದಿಂದ ಅರಿತುಕೊಂಡು ಅನುರಾಗಪರೆಯು ಅವನನ್ನು ಎದುರುಗೊಳ್ಳಲು ಆ ಊರಿನ ಹೊರಕ್ಕೆ ಹೋದಳು.

೧೮೨. "ನಿನ್ನ ಈ ಪ್ರಿಯತಮೆಯು ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಾ ರಾತ್ರಿಯಲ್ಲಿ ಎರಡನೆಯ ಚಂದ್ರನಂಬಂತೆ ಬರುತ್ತಿದ್ದಾಳೆ. ಆದ್ದರಿಂದ ನಾನಿನ್ನು ಹೋಗುತ್ತೇನೆ'

೧೮೩. ಎಂದು ಹೇಳಿ ಅವಳನ್ನು ನಿಶ್ಚಯದತ್ತನಿಗೆ ತೋರಿಸಿ ಅವನನ್ನು ಹೆಗಲಿನಿಂದ ಇಳಿಸಿ, ಅವನಿಗೆ ವಂದಿಸಿ ಯಕ್ಷಿಣಿಯು ಹೊರಟು ಹೋದಳು.

೧೮೪. ಅನಂತರ ಆ ಅನುರಾಗಪರೆಯು ಬಳಿಬಂದು ಚಿರಕಾಲದ ತವಕದ ಭರದಿಂದ ಆಲಿಂಗನವೇ ಮೊದಲಾದ ರೀತಿಯಲ್ಲಿ ಅವನನ್ನು ಅಭಿನಂದಿಸಿದಳು.

೧೮೫–೧೮೬. ಅವನೂ ಸಹ ಬಹಳ ಕಷ್ಟಗಳನ್ನು ಅನುಭವಿಸಿ ಆಕೆಯ ಸಮಾಗಮವನ್ನು ಪಡೆದದ್ದರಿಂದ ಸಂತೋಷಗೊಂಡು ಆಲಿಂಗಿಸಿ, ತನ್ನ ದೇಹದಲ್ಲಿ ತಾನು ಇಲ್ಲವೇನೋ ಎಂಬಂತೆ ಆಕೆಯ ಶರೀರವನ್ನು ಪ್ರವೇಶಿಸಿದನು. ಗಾಂಧರ್ವ ವಿಧಿಯಿಂದ ಅವನ ಮಡದಿಯಾಗಿ ಮಾರ್ಪಟ್ಟ ಅನುರಾಗಪರೆಯು ಕೂಡಲೇ ತನ್ನ ವಿದ್ಯಾಪ್ರಭಾವದಿಂದ (ಅವನಿಗೊಂದು) ಪಟ್ಟಣವನ್ನು ನಿರ್ಮಿಸಿದಳು.

---

ನಿಶೀಥೇ ಚ ಹಿಮಾದ್ರೌ ತಾಮನುರಾಗಪರಾ ಪಿತುಃ ।
ಪುರೀಂ ವಿಧ್ಯಾಧರಪತೇಃ ಪ್ರಾಪ್ತವಾನ್ ಪುಷ್ಕರಾವತೀಮ್ ॥ ೧೮೦

ತಾವತ್ ಪ್ರಭಾವತೋ ಬುದ್ಧ್ವಾ ತದಭ್ಯಾಗಮನಾಯ ಸಾ ।
ತತೋ ನಗರ್ಯಾ ನಿರಗಾದನುರಾಗಪರಾ ಬಹಿಃ ॥ ೧೮೧

ಇಯಮಾಯಾತಿ ತೇ ಕಾಂತಾ ನಿಶಿ ನೇತ್ರೋತ್ಸವಪ್ರದಾ ।
ಇಂದುಮೂರ್ತಿರ್ದ್ವಿತೀಯೇವ ತದಿದಾನೀಂ ವ್ರಜಾಮ್ಯಹಮ್ ॥ ೧೮೨

ಇತ್ಯುಕ್ತ್ವಾ ದರ್ಶಯಿತ್ವಾ ತಾಮಂಸಾಗ್ರಾದವತಾರಿತಮ್ ।
ನತ್ವಾ ನಿಶ್ಚಯದತ್ತಂ ತಮಥ ಸಾ ಯಕ್ಷಿಣೀ ಯಯೌ ॥ ೧೮೩

ತತಃ ಸಾಪಿ ಚಿರೌತ್ಸುಕ್ಯಸಂರಂಭಾಲಿಂಗನಾದಿಭಿಃ ।
ಉಪಗಮ್ಯಾಭ್ಯನಂದತ್ತಮನುರಾಗಪರಾ ಪ್ರಿಯಮ್ ॥ ೧೮೪

ಸೋಽಪ್ಯಾಶ್ಲಿಷ್ಯ ಬಹುಕ್ಲೇಶಲಬ್ಧತತ್ಸಂಗಮೋತ್ಸವಃ ।
ಅವರ್ತಮಾನಃ ಸ್ವೇ ದೇಹೇ ತನುಂ ತಸ್ಯಾ ಇವಾವಿಶತ್ ॥ ೧೮೫

ತೇನ ಗಾಂಧರ್ವವಿಧಿನಾ ಭಾರ್ಯಾ ಭೂತ್ವಾಥ ತಸ್ಯ ಸಾ ।
ಅನುರಾಗಪರಾ ಸದ್ಯೋ ವಿದ್ಯಯಾ ನಿರ್ಮಮೇ ಪುರಮ್ ॥ ೧೮೬

೧೭೭. ಅವಳ ವಿದ್ಯೆಯಿಂದ ಆಕೆಯ ಮಾತಾಪಿತೃಗಳ ಕಣ್ಣಿಗೆ ಮರೆಯಾಗಿ ಊಹಿಸಲೂ ಆಗದಂತೆ ಆ ಪರವೂರಿನಲ್ಲಿ ನಿಶ್ಚಯದತ್ತನು ಅವಳೊಂದಿಗೆ ಇರುತ್ತಿದ್ದನು.

೧೭೮. ಅವಳು ಪ್ರಯಾಣದ ಮಧ್ಯೆ ಎದುರಿಸಬೇಕಾಗಿ ಬಂದ ಎಡರುತೊಡರುಗಳನ್ನು ಹೇಳೆಂದು ಕೇಳಿದಾಗ ಅವನು ಅವೆಲ್ಲವನ್ನೂ ಒಂದೊಂದಾಗಿ ವರ್ಣಿಸಲು ಅವನನ್ನು ಇನ್ನಷ್ಟು ಗೌರವಿಸಿದ ಅವಳು ಅವನಿಗೆ ಇಷ್ಟವಾಗುವ ಭೋಗಗಳನ್ನು ಒದಗಿಸುವುದರ ಮೂಲಕ ಉಪಚರಿಸಿದಳು.

೧೭೯. ಆಮೇಲೆ ನಿಶ್ಚಯದತ್ತನು ಮಂಗದ ರೂಪದಲ್ಲಿದ್ದ ಸೋಮಸ್ವಾಮಿಯ ಅದ್ಭುತವಾದ ಕಥೆಯನ್ನು ಈ ವಿದ್ಯಾಧರಿಗೆ ನಿವೇದಿಸಿದನು.

೧೮೦. ಅಲ್ಲದೇ "ನಿನ್ನ ಯಾವುದಾದರೂ ಪ್ರಯತ್ನದಿಂದ ನನ್ನ ಈ ಗೆಳೆಯನು ಕೀಳು ಜನ್ಮದಿಂದ ಏನಾದರೂ ಬಿಡುಗಡೆ ಹೊಂದಿದರೆ, ತುಂಬ ಉಪಕಾರ ಮಾಡಿದಂತಾದೀತು' ಎಂದೂ ಅವಳಿಗೆ ಹೇಳಿದನು.

೧೮೧. ಹೀಗೆಂದಾಗ ಅನುರಾಗಪರೆಯು "ಇದು ಯೋಗಿನಿಯ ಮಂತ್ರದ ಮಾರ್ಗ. ನಮ್ಮ ವ್ಯಾಪ್ತಿಗೆ ಬರುವಂಥದಲ್ಲ' ಎಂದು ನುಡಿದಳು.

೧೮೨. "ಆದರೂ ನಾನು ನನ್ನ ಗೆಳತಿಯೂ ಸಿದ್ಧಯೋಗಿನಿಯೂ ಆದ ಭದ್ರರೂಪೆಯೆಂಬುವಳನ್ನು ಬೇಡಿ ನಿನಗೆ ಪ್ರಿಯವಾಗುವ ಈ ಕೆಲಸವನ್ನು ಸಾಧಿಸಿಕೊಡುತ್ತೇನೆ.'

---

ತಸ್ಮಿನ್ನಿಶ್ಚಯದತ್ತೋಽಸೌ ಬಾಹ್ಯೇ ತಸ್ಥೌ ತಯಾ ಸಹ ।
ತದ್ವಿದ್ಯಾಛನ್ನದೃಷ್ಟಿಭ್ಯಾಂ ತತ್ಪಿತೃಭ್ಯಾಮತರ್ಕಿತಃ ॥ ೧೭೭

ಪೃಷ್ಟಸ್ತಾಂಸ್ತಾದೃಶಾಂಸ್ತಸ್ಯೈ ಮಾರ್ಗಕ್ಲೇಶಾನ್ ಶಶಂಸ ಯತ್ ।
ತೇನ ಸಾ ಬಹು ಮೇನೇ ತಂ ಭೋಗೈಶ್ಚೇಷ್ಟೈರುಪಾಚರತ್ ॥ ೧೭೮

ಅಥ ತನ್ಮರ್ಕಟೀಭೂತಸೋಮಸ್ವಾಮಿಕಥಾದ್ಭುತಮ್ ।
ಸೋಽತ್ರ ನಿಶ್ಚಯದತ್ತೋಽಸ್ಯೈ ವಿದ್ಯಾಧರ್ಯೈ ನ್ಯವೇದಯತ್ ॥ ೧೭೯

ಜಗಾದ ಚೈತನ್ಮಿತ್ರಂ ಮೇ ತ್ವತ್‌ಪ್ರಯತ್ನೇನ ಕೇನಚಿತ್ ।
ತಿರ್ಯಕ್‌ತ್ವಾದ್ಯದಿ ಮುಚ್ಯೇತ ತತ್ಪ್ರಿಯೇ ಸುಕೃತಂ ಭವೇತ್ ॥ ೧೮೦

ಇತ್ಯುಕ್ತಾ ತೇನ ಸಾವೋಚದನುರಾಗಪರಾಪಿ ತಮ್ ।
ಯೋಗಿನ್ಯಾ ಮಂತ್ರ ಮಾರ್ಗೋಽಯಂ ನಾಸ್ಮಾಕಂ ವಿಷಯಃ ಪುನಃ ॥ ೧೮೧

ತಥಾಪಿ ಸಾಧಯಿಷ್ಯಾಮಿ ಪ್ರಿಯಮೇತದಹಂ ತವ ।
ಅಭ್ಯರ್ಥ್ಯ ಭದ್ರರೂಪಾಖ್ಯಾಂ ವಯಸ್ಯಾಂ ಸಿದ್ಧಯೋಗಿನೀಮ್ ॥ ೧೮೨

೧೯೩. ಇದನ್ನು ಕೇಳಿದ ನಿಶ್ಚಯದತ್ತನು ಸಂತೋಷಗೊಂಡು "ಹಾಗಾದರೆ ಬಾ, ನನ್ನ ಆ ಕಪಿಮಿತ್ರನನ್ನು ನೋಡಲು ಅವನೆಡೆಗೆ ಹೋಗೋಣ' ಎಂದು ತನ್ನ ಪ್ರಿಯತಮೆಗೆ ಹೇಳಿದನು.

೧೯೪. ಆಗಲಿ ಎಂದು ಅವಳು ಹೇಳಲು ಮಾರನೆಯ ದಿನ ಆಕೆಯ ಮಡಿಲಲ್ಲಿ ಕುಳಿತು ಆಕಾಶಮಾರ್ಗದಿಂದ ನಿಶ್ಚಯದತ್ತನು ತನ್ನ ಗೆಳೆಯನಾದ ಕಪಿಯಿದ್ದ ಕಾಡಿಗೆ ಹೋದನು.

೧೯೫. ಅಲ್ಲಿ ಕಪಿ ರೂಪದಲ್ಲಿದ್ದ ಗೆಳೆಯನ ಬಳಿ ಹೋಗಿ ನೋಡಿ ತನ್ನ ಪ್ರಿಯೆಯೊಂದಿಗೆ ವಂದಿಸಿದ ನಿಶ್ಚಯದತ್ತನು ಕುಶಲವನ್ನೂ ವಿಚಾರಿಸಿದನು.

೧೯೬–೧೯೮. "ನಿನ್ನನ್ನು ಅನುರಾಗಪರೆಯೊಂದಿಗೆ ನೋಡಿದ ನನಗೆ ಈಗ ಕ್ಷೇಮವುಂಟಾಯಿತು' ಎಂದು ಸೋಮಸ್ವಾಮಿ ಕಪಿಯು ಹೇಳಿ ಅವನನ್ನು ಅಭಿನಂದಿಸಿ ಅವನ ಪ್ರಿಯತಮೆಗೆ ಆಶೀರ್ವಾದ ನೀಡಿತು. ಆಮೇಲೆ ಎಲ್ಲರೂ ಮನೋಹರವಾದ ಕಲ್ಲುಬಂಡೆಯ ಮೇಲೆ ಕುಳಿತು ವಾರ್ತಾಲಾಪಗಳನ್ನು ಮಾಡಿಕೊಂಡರು. ಮೊದಲಿಗೆ ಮಡದಿಯೊಂದಿಗೆ ಕಪಿಯ ಸಲುವಾಗಿ ನಿಶ್ಚಯದತ್ತನು ಯೋಚಿಸಿದ್ದನ್ನೂ ಹೇಳಿದರು.

೧೯೯. ಆಮೇಲೆ ಕಪಿಯಿಂದ ಬೀಳ್ಕೊಂಡು ನಿಶ್ಚಯದತ್ತನು ಮಡದಿಯ ಮಡಿಲನ್ನು ಸೇರಿ ಆಕಾಶಕ್ಕೆ ಹಾರಿ ಪ್ರೇಯಸಿಯ ಮನೆಯನ್ನು ತಲುಪಿದನು.

---

ತಚ್ಛ್ರುತ್ವಾ ಸ ವಣಿಕ್ಪುತ್ರೋ ಹೃಷ್ಟಸ್ತಾಮವದತ್ ಪ್ರಿಯಾಮ್ ।
ತರ್ಹಿ ತಂ ಪಶ್ಯ ಮನ್ಮಿತ್ರಮೇಹಿ ಯಾವ ತದಂತಿಕಮ್ ॥ ೧೯೩

ತಥೇತ್ಯುಕ್ತೇ ತಯಾನ್ಯೇದ್ಯುಸ್ತದುತ್ಸಂಗಸ್ಥಿತಶ್ಚ ಸಃ ।
ವ್ಯೋಮ್ನಾ ನಿಶ್ಚಯದತ್ತೋಗಾತ್ ಸಖ್ಯುಸ್ತಸ್ಯಾಸ್ಪದಂ ವನಮ್ ॥ ೧೯೪

ತತ್ರ ತಂ ಸುಹೃದಂ ದೃಷ್ಟ್ವಾ ಕಪಿರೂಪಮುಪೇತ್ಯ ಸಃ ।
ಪ್ರಣಮತ್ ಪ್ರಿಯಯಾ ಸಾಕಮಪೃಚ್ಛತ್ ಕುಶಲಂ ತದಾ ॥ ೧೯೫

ಅದ್ಯ ಮೇ ಕುಶಲಂ ಯತ್ ತ್ವಮನುರಾಗಪರಾಯುತಃ ।
ದೃಷ್ಟೋ ಮಯೇತಿ ಸೋಽಪ್ಯುಕ್ತ್ವಾ ಸೋಮಸ್ವಾಮಿಕಪಿಃ ಕಿಲ ॥ ೧೯೬

ತಮಭ್ಯನಂದತ್ ಪ್ರದದೌ ತತ್ಪ್ರಿಯಾಯೈ ತಥಾಶಿಷಮ್ ।
ತತಃ ಸರ್ವೇಽಪ್ಯುಪಾವಿಕ್ಷನ್ಸ್ತತ್ರ ರಮ್ಯೇ ಶಿಲಾತಲೇ ॥ ೧೯೭

ಚಕ್ರುಶ್ಚ ತತ್ಕಥಾಲಾಪಂ ತತ್ತಸ್ಯ ಕಪೇಃ ಕೃತೇ ।
ಆದೌ ನಿಶ್ಚಯದತ್ತೇನ ಚಿಂತಿತಂ ಕಾಂತಯಾ ಸಹ ॥ ೧೯೮

ತತಸ್ತಂ ಕಪಿಮಾಪೃಚ್ಛ್ಯ ಪ್ರೇಯಸೀಸದನಂ ಚ ತತ್ ।
ಯಯೌ ನಿಶ್ಚಯದತ್ತೋ ದ್ಯಾಮುತ್ಪತ್ಯಾಂಕೇ ಧೃತಸ್ತಯಾ ॥ ೧೯೯

೨೦೦. ಮತ್ತೊಂದು ದಿನ ನಿಶ್ಚಯದತ್ತನು ಮಡದಿಗೆ ಹೇಳಿದನು. "ಅನುರಾಗಪರೆ, ಬಾ. ಇನ್ನೊಮ್ಮೆ ಸ್ವಲ್ಪ ಹೊತ್ತು ಕಪಿಮಿತ್ರನ ಬಳಿಗೆ ಹೋಗಿಬರೋಣ.'

೨೦೧. ಅವಳು ಅವನಿಗೆ "ಇಂದು ನೀನೊಬ್ಬನೇ ಹೋಗಿ ಬಾ, ಅದಕ್ಕಾಗಿ ನನ್ನಿಂದ ಮೇಲೆ ಹಾರುವ ಕೆಳಗೆ ಇಳಿಯುವ ಎರಡೂ ವಿದ್ಯೆಗಳನ್ನು ಸ್ವೀಕರಿಸು' ಎಂದು ಹೇಳಿದಳು.

೨೦೨. ಹೀಗೆ ಹೇಳಿದ ಆಕೆಯಿಂದ ಉತ್ಪತನೀ ಮತ್ತು ಅವತರಣೀ ಎಂಬ ಎರಡೂ ವಿದ್ಯೆಗಳನ್ನು ಪಡೆದು ನಿಶ್ಚಯದತ್ತನು ಆಕಾಶಮಾರ್ಗದಿಂದ ಗೆಳೆಯನಾದ ಕಪಿಯ ಸನಿಹಕ್ಕೆ ಹೋದನು.

೨೦೩. ಅಲ್ಲಿ ಗೆಳೆಯನೊಂದಿಗೆ ಬಹಳ ಹೊತ್ತು ಏನೇನೋ ಮಾತನಾಡುತ್ತಿರುವಾಗ ಇತ್ತ ಅನುರಾಗಪರೆಯು ಮನೆಯಿಂದ ಹೊರಗಡೆಯ ಉದ್ಯಾನಕ್ಕೆ ಹೋದಳು.

೨೦೪. ಅವಳು ಅಲ್ಲಿ ಕುಳಿತಿರುವಾಗ ಆಕಾಶದಲ್ಲಿ ಸುಮ್ಮನೆ ಅಲೆದಾಡುತ್ತಾ ಯಾರೋ ಒಬ್ಬ ವಿದ್ಯಾಧರ ಯುವಕನು ಬಂದನು.

೨೦೫. ಅವನು ಅವಳನ್ನು ಕಂಡೊಡನೆಯೇ ಭೂಲೋಕದ ಗಂಡನನ್ನು ಹೊಂದಿರುವ ವಿದ್ಯಾಧರಿಯಿವಳೆಂದು ಅರಿತು ಮನ್ಮಥನ ಆವೇಶದಿಂದ ವಿವಶನಾಗಿ ಅವಳನ್ನು ಸಮೀಪಿಸಿದನು.

---

ಅನ್ಯೇದ್ಯುಸ್ತಾಮುವಾದೀಚ್ಚ ಸೋಽನುರಾಗಪರಾಂ ಪುನಃ ।
ಏಹಿ ತಸ್ಯಾಂತಿಕಂ ಸಖ್ಯುಃ ಕ್ಷಣಂ ಯಾವ ಕಪೇರಿತಿ ॥ ೨೦೦

ತತಃ ಸಾಪಿ ತಮಾಹ ಸ್ಮ ತ್ವಮೇವಾದ್ಯ ವ್ರಜ ಸ್ವಯಮ್ ।
ಗೃಹಾಣೋತ್ಪತನೀಂ ವಿದ್ಯಾಂ ಮತ್ತೋಽವತರಣೀಂ ತಥಾ ॥ ೨೦೧

ಇತ್ಯುಕ್ತಃ ಸ ತದಾದಾಯ ತದ್ವಿದ್ಯಾದ್ವಿತಯಂ ತತಃ ।
ವ್ಯೋಮ್ನಾ ನಿಶ್ಚಯದತ್ತೋಽಗಾತ್ ಸಖ್ಯುಸ್ತಸ್ಯಾಂತಿಕಂ ಕಪೇಃ ॥ ೨೦೨

ತತ್ರ ಯಾವತ್ಸ ಕುರುತೇ ತೇನ ಸಾಕಂ ಚಿರಂ ಕಥಾಃ ।
ಸಾನುರಾಗಪರಾ ತಾವದುದ್ಯಾನಂ ನಿರ್ಯಯೌ ಗೃಹಾತ್ ॥ ೨೦೩

ತತ್ರ ತಸ್ಯಾಂ ನಿಷಣ್ಣಾಯಾಂ ವಿದ್ಯಾಧರಕುಮಾರಕಃ ।
ಕೋಽಪ್ಯಾಜಗಾಮ ನಭಸಾ ಪರಿಭ್ರಾಮ್ಯನ್ ಯದೃಚ್ಛಯಾ ॥ ೨೦೪

ಸ ದೃಷ್ಟ್ವೈವ ಸ್ಮರಾವೇಶವಿವಶಸ್ತಾಮುಪಾಯಯೌ ।
ವಿದ್ಯಾಧರೀಂ ಸ ತಾಂ ಬುದ್ಧ್ವಾ ವಿದ್ಯಯಾ ಮರ್ತ್ಯಭರ್ತೃಕಾಮ್ ॥ ೨೦೫

೨೦೬. ಅನುರಾಗಪರೆಯೂ ಸಹ, ಹತ್ತಿರಕ್ಕೆ ಬಂದ ಆ ಸುಂದರನನ್ನು ಕಂಡು, ತಲೆತಗ್ಗಿಸಿ, "ನೀನು ಯಾರು ? ಇಲ್ಲಿಗೇಕೆ ಬಂದೆ ? ಎಂದು ಕುತೂಹಲದಿಂದ ಮೆಲುಧ್ವನಿಯಲ್ಲಿ ಪ್ರಶ್ನಿಸಿದಳು.

೨೦೭. ಆಗ ಅವನು ಉತ್ತರವಿತ್ತನು – "ಎಲೈ ಮುಗ್ಧೆಯೇ ! ಸ್ವ ವಿದ್ಯಾಜ್ಞಾನವುಳ್ಳ ವಿದ್ಯಾಧರನು ನಾನೆಂದು ತಿಳಿ.  ನನ್ನ ಹೆಸರು ರಾಜಭಂಜನ.

೨೦೮. ನಾನು ನಿನ್ನನ್ನು ನೋಡಿದಾಕ್ಷಣ, ಎಲೈ ಜಿಂಕೆಯ ಕಣ್ಣಿನವಳೇ ! ಇದ್ದಕ್ಕಿದ್ದಂತೆ ಮನ್ಮಥನ ವಶಕ್ಕೆ ಸಿಲುಕಿ ನಿನಗೆ ಅರ್ಪಿತನಾಗಿದ್ದೇನೆ.

೨೦೯. ಆದ್ದರಿಂದ, ದೇವಿ ! ಭೂಮಿಯಲ್ಲಿ ಕಾಣಬರುವ ಮರ್ತ್ಯನ ಸೇವೆಗೈದದ್ದು ಸಾಕು. ನಿಮ್ಮ ತಂದೆಯು ಅರಿಯುವ ಮುನ್ನವೇ ನಿನಗೆ ಸಮಾನನಾದ ನನ್ನನ್ನು ಸ್ವೀಕರಿಸು.'

೨೧೦. ಅವನು ಹೇಳುತ್ತಿರುವಾಗ ಚಂಚಲವಾದ ಆಶಯವುಳ್ಳ ಆ ಅನುರಾಗಪರೆಯು ಅರೆಗಣ್ಣಿನಿಂದ ಅವನನ್ನೇ ನೋಡುತ್ತಾ ಇವನೇ ನನಗೆ ತಕ್ಕವನು ಎಂದು ಆಲೋಚನೆ ಮಾಡಿದಳು.

೨೧೧. ಅವಳ ಇಂಗಿತವನ್ನು ತಿಳಿದು ಅವನು ಅವಳನ್ನು ಅಲ್ಲಿಯೇ ಹೆಂಡತಿಯನ್ನಾಗಿ ಮಾಡಿಕೊಂಡನು.  ಇಬ್ಬರೂ ಒಂದೇ ಮನಸ್ಸಿನವರಾಗಿ ಗುಟ್ಟಾಗಿರುವಾಗ ಮನ್ಮಥನು ಇನ್ನೇನನ್ನು ಬಯಸಿಯಾನು ?

---

ಸಾಪ್ಯಪೇತಂ ತಮಾಲೋಕ್ಯ ಸುಭಗಂ ವಿನತಾನನಾ ।
ಕಸ್ತ್ವಂ ಕಿಮಾಗತೋಽಸೀತಿ ಶನೈಃ ಪಪ್ರಚ್ಛ ಕೌತುಕಾತ್ ॥ ೨೦೬

ತತಃ ಸ ಪ್ರತ್ಯವೋಚತ್ತಾಂ ಸ್ವವಿದ್ಯಾಜ್ಞಾನಶಾಲಿನಮ್ ।
ವಿದ್ಧಿ ವಿದ್ಯಾಧರಂ ಮುಗ್ಧೇ ನಾಮ್ನಾ ಮಾಂ ರಾಜಭಂಜನಮ್ ॥ ೨೦೭

ಸೋಽಹಂ ಸಂದರ್ಶನಾದೇವ ಸಹಸಾ ಹರಿಣೇಕ್ಷಣೇ ।
ಮನೋಭುವಾ ವಶೀಕೃತ್ಯ ತುಭ್ಯಮೇವ ಸಮರ್ಪಿತಃ ॥ ೨೦೮

ತದಲಂ ದೇವಿ ಸೇವಿತ್ವಾ ಮರ್ತ್ಯಂ ಧರಣಿಗೋಚರಮ್ ।
ಪಿತಾ ವೇತ್ತಿ ನ ಯಾವತ್ತೇ ತಾವತ್ತುಲ್ಯಂ ಭಜಸ್ವ ಮಾಮ್ ॥ ೨೦೯

ಇತಿ ತಸ್ಮಿನ್ ಬ್ರುವಾಣೇ ಸಾ ಕಟಾಕ್ಷಾರ್ಧವಿಲೋಕಿನೀ ।
ಅಚಿಂತಯದಯಂ ಯುಕ್ತೋ ಮಮೇತಿ ಚಪಲಾಶಯಾ ॥ ೨೧೦

ತತೋ ಲಬ್ಧಾಶಯಂ ಚಕ್ರೇ ಭಾರ್ಯಾಂ ತೇನೈವ ತತ್ರ ಸಾ ।
ಅಪೇಕ್ಷತೇ ದ್ವಯೋರೈಕಚಿತ್ತ್ಯೇ ಕಿಂ ರಹಸಿ ಸ್ಮರಃ ॥ ೨೧೧

೨೧೨. ಆ ವಿದ್ಯಾಧರನು ಆಗ ತಾನೇ ಹೊರಟು ದೂರದಲ್ಲಿದ್ದಾಗ ನಿಶ್ಚಯದತ್ತನು ಸೋಮಸ್ವಾಮಿಯ ಕಡೆಯಿಂದ ಹೊರಟು ಬಂದನು.

೨೧೩. ಅವನು ಬಂದರೂ ತಲೆನೋವೆಂದು ನೆಪ ಹೇಳಿ ಅನುರಾಗಪರೆಯು ಆಸಕ್ತಿಶೂನ್ಯಳಾಗಿ ನಿಶ್ಚಯದತ್ತನನ್ನು ಆಲಿಂಗನಾದಿಗಳಿಂದ ಉಪಚರಿಸಲಿಲ್ಲ.

೨೧೪. ಸರಳ ಸ್ವಭಾವದ ಆತನು ಆಕೆಯ ಸ್ನೇಹಪಾಶದಲ್ಲಿ ಸಿಲುಕಿದ್ದು ಆ ನೆಪವನ್ನೇ ನಿಜವೆಂದು ನಂಬಿ, ಅವಳಿಗೆ ಆರೋಗ್ಯವಿಲ್ಲವೆಂದು ದುಃಖದಿಂದ ಅಂದು ಕಾಲಕಳೆದನು.

೨೧೫. ಬೆಳಿಗ್ಗೆ ಮತ್ತೆ ಖಿನ್ನನಾಗಿ ತನ್ನ ವಿದ್ಯೆಗಳ ಬಲದಿಂದ ಆಕಾಶಮಾರ್ಗದಲ್ಲಿ ಗೆಳೆಯನಾದ ಸೋಮಸ್ವಾಮಿ ಕಪಿಯ ಬಳಿಗೆ ಹೋದನು.

೨೧೬. ಅವನು ಹೋದಮೇಲೆ ಕಾಮಿಯಾದ ವಿದ್ಯಾಧರನು ಅವಳಿಲ್ಲದೆ ರಾತ್ರಿ ನಿದ್ದೆಗೆಟ್ಟು ಮತ್ತೆ ಅನುರಾಗಪರೆಯ ಬಳಿಗೆ ಹೋದನು.

೨೧೭. ರಾತ್ರಿಯ ವಿರಹದಿಂದ ಉತ್ಕಂಠಿತಳಾಗಿದ್ದ ಅವಳನ್ನು ಆಲಿಂಗಿಸಿಕೊಂಡು, ಸುರತದ ಕಡೆಯಲ್ಲಿ ಆಯಾಸಗೊಂಡು ಆತನು ನಿದ್ರೆ ಹೋದನು.

೨೧೮. ಅವಳು ತನ್ನ ಮಡಿಲಲ್ಲಿ ಮಲಗಿದ್ದ ಅವನನ್ನು ವಿದ್ಯೆಯ ಬಲದಿಂದ ಮರೆಮಾಡಿ, ರಾತ್ರಿಯೆಲ್ಲ ಎಚ್ಚರವಾಗಿದ್ದರಿಂದ ಹಗಲಿನಲ್ಲಿ ನಿದ್ರೆಮಾಡಿದಳು.

---

ಅಥ ವಿದ್ಯಾಧರೇ ತಸ್ಮಿನ್ ಸಂಪ್ರತ್ಯಪಸೃತೇ ತತಃ ।
ಆಗಾನ್ನಿಶ್ಚಯದತ್ತೋಽತ್ರ ಸೋಮಸ್ವಾಮಿಸಮೀಪತಃ ॥ ೨೧೨

ಆಗತಸ್ಯ ನ ಸಾ ಚಕ್ರೇ ವಿರಕ್ತಾಲಿಂಗನಾದಿಕಮ್ ।
ಅನುರಾಗಪರಾ ತಸ್ಯ ವ್ಯಪದಿಶ್ಯ ಶಿರೋರುಜಮ್ ॥ ೨೧೩

ಸ ತು ತದ್ವ್ಯಾಜಮವಿದನ್ ಋಜುಃ ಸ್ನೇಹವಿಮೋಹಿತಃ ।
ಅಸ್ವಾಸ್ಥ್ಯಮೇವ ಮತ್ವಾಸ್ಯಾ ದುಃಖಂ ತದನಯದ್ದಿನಮ್ ॥ ೨೧೪

ಪ್ರಾತಶ್ಚ ದುರ್ಮನಾ ಭೂಯಸ್ತಂ ಕಪಿಂ ಸುಹೃದಂ ಪ್ರತಿ ।
ಸ ಸೋಮಸ್ವಾಮಿನಂ ಪ್ರಾಯಾನ್ನಭಸಾ ವಿದ್ಯಯೋರ್ಬಲಾತ್ ॥ ೨೧೫

ಯಾತೇ ತಸ್ಮಿನ್ನುಪಾಗಾತ್ತಾಂ ಸೋಽನುರಾಗಪರಾಂ ಪುನಃ ।
ಕಾಮೀ ವಿದ್ಯಾಧರೋ ರಾತ್ರಿಕೃತೋನ್ನಿದ್ರಸ್ತಯಾ ವಿನಾ ॥ ೨೧೬

ನಿಶಾವಿರಹಸೋತ್ಕಂಠಾಂ ಕಂಠೇ ತಾಮವಲಂಬ್ಯ ಚ ।
ಸುರತಾಂತಪರಿಶ್ರಾಂತೋ ನಿದ್ರಾಕ್ರಾಂತೋ ಬಭೂವ ಸಃ ॥ ೨೧೭

ಸಾಪ್ಯಂಕಸುಪ್ತಂ ಪ್ರಚ್ಛಾದ್ಯ ಪ್ರಿಯಂ ವಿದ್ಯಾಬಲೇನ ತಮ್ ।
ರಾತ್ರಿಜಾಗರಣಾನ್ನಿದ್ರಾಮನುರಾಗಪರಾ ಯಯೌ ॥ ೨೧೮

೨೧೯. ಆ ವೇಳೆಗೆ ನಿಶ್ಚಯದತ್ತನೂ ಕಪಿಯ ಬಳಿಗೆ ಹೋದನು. ಕಪಿಮಿತ್ರನು ಅವನಿಗೆ ಸ್ವಾಗತವನ್ನು ಹೇಳಿ ಹೀಗೆ ಪ್ರಶ್ನಿಸಿದನು.

೨೨೦. "ಇಂದು ನೀನು ತುಂಬ ಖಿನ್ನನಾಗಿರುವಂತಿದೆ. ಕಾರಣವೇನು ಹೇಳು.' ಆಗ ನಿಶ್ಚಯದತ್ತನು ಕಪಿಗೆ ಹೀಗೆಂದನು :

೨೨೧. "ಗೆಳೆಯನೇ, ಅನುರಾಗಪರೆಯು ರೋಗದಿಂದ ತುಂಬ ಬಳಲಿದ್ದಾಳೆ. ಅದರಿಂದ ನಾನು ದುಃಖಿತನಾಗಿದ್ದೇನೆ. ಅವಳು ನನಗೆ ನನ್ನ ಪ್ರಾಣಕ್ಕಿಂತ ಮಿಗಿಲಾದವಳು'.

೨೨೨–೨೨೩. ಹೀಗೆ ಹೇಳಿದಾಗ ಜ್ಞಾನಿಯಾದ ಆ ಕಪಿಯು ಅವನಿಗೆಂದಿತು : "ನೀನು ಈಗಲೇ ಹೋಗು. ನಿದ್ರೆ ಮಾಡುತ್ತಿರುವ ಅವಳನ್ನು ತೊಡೆಯ ಮೇಲಿಟ್ಟು ಅವಳು ಕಲಿಸಿದ ವಿದ್ಯೆಯ ಬಲದಿಂದಲೇ ಆಕಾಶಮಾರ್ಗದಲ್ಲಿ ಅವಳನ್ನಿಲ್ಲಿ ನನ್ನ ಬಳಿಗೆ ಕರೆದು ತಾ. ಆಗ ನಾನು ಇಲ್ಲಿಯೇ ನಿನಗೆ ದೊಡ್ಡ ಆಶ್ಚರ್ಯವೊಂದನ್ನು ತೋರಿಸುತ್ತೇನೆ.'

೨೨೪. ಅದನ್ನು ಕೇಳಿ ಆಕಾಶಮಾರ್ಗದಲ್ಲಿ ಹೋಗಿ ಅನುರಾಗಪರೆಯನ್ನು ನೋಡಿ ನಿಶ್ಚಯದತ್ತನು ಆಕೆಯನ್ನು ಬೇಗನೆ ಮಡಿಲ ಮೇಲಿರಿಸಿಕೊಂಡನು.

೨೨೫. ಆದರೆ ಅವಳ ಅಂಗಕ್ಕೆ ಅಂಟಿಕೊಂಡಿದ್ದ ವಿದ್ಯಾಧರನನ್ನು ಆಕೆಯ ವಿದ್ಯೆಯ ಬಲದಿಂದ ಮೊದಲಿಗೇ ಅದೃಶ್ಯನನ್ನಾಗಿಸಿದ್ದ ಕಾರಣ, ಅವನು ಮಲಗಿದ್ದುದು ಕಾಣಲೇ ಇಲ್ಲ.

---

ತಾವನ್ನಿಶ್ಚಯದತ್ತೋಽಪಿ ಪ್ರಾಪ ತಸ್ಯಾಂತಿಕಂ ಕಪೇಃ ।
ಸೋಽಪಿ ಪಪ್ರಚ್ಛ ತಂ ಕೃತ್ವಾ ಸ್ವಾಗತಂ ವಾನರಃ ಸುಹೃತ್ ॥ ೨೧೯
ದುರ್ಮನಸ್ಕಮಿವಾದ್ಯ ತ್ವಾಂ ಕಿಂ ಪಶ್ಯಾಮ್ಯುಚ್ಯತಾಮಿತಿ ।
ತತೋ ನಿಶ್ಚಯದತ್ತೋಽಪಿ ಸ ತಂ ವಾನರಮಬ್ರವೀತ್ ॥ ೨೨೦
ಅನುರಾಗಪರಾತ್ಯರ್ಥಮಸ್ವಸ್ಥಾ ಮಿತ್ರ ವರ್ತತೇ ।
ತೇನಾಸ್ಮಿ ದುಃಸ್ಥಿತಃ ಸಾ ಹಿ ಪ್ರಾಣೇಭ್ಯೋಽಪಿ ಪ್ರಿಯಾ ಮಮ ॥ ೨೨೧
ಇತ್ಯುಕ್ತೇನ ಸ ಜ್ಞಾನೀ ಮರ್ಕಟಸ್ತಮಭಾಷತ ।
ಗಚ್ಛ ಸುಪ್ತಾಮಿದಾನೀಂ ತಾಂ ಸ್ಥಿತಾಂ ಕೃತ್ವಾಂಕವರ್ತಿನೀಮ್ ॥ ೨೨೨
ತದ್ದತ್ತವಿದ್ಯಯಾ ವ್ಯೋಮ್ನಾ ತಾಮಾನಯ ಮದಂತಿಕಮ್ ।
ಯಾವನ್ಮಹದಿಹಾಶ್ಚರ್ಯಂ ದರ್ಶಯಾಮ್ಯಧುನೈವ ತೇ ॥ ೨೨೩
ತಚ್ಛ್ರುತ್ವಾ ಖೇನ ಗತ್ವೈವ ಸೋಽನುರಾಗಪರಾಂ ತತಃ ।
ದೃಷ್ಟ್ವಾ ನಿಶ್ಚಯದತ್ತಸ್ತಾಂ ಸುಪ್ತಾಮಂಕೇಽಗ್ರಹೀಲ್ಲಘು ॥ ೨೨೪
ತಂ ತು ವಿದ್ಯಾಧರಂ ತಸ್ಯಾ ನಾಂಗೇ ಲಗ್ನಂ ದದರ್ಶ ಸಃ ।
ಸುಪ್ತಂ ವಿದ್ಯಾಬಲೇನಾದಾವದೃಶ್ಯಂ ವಿಹಿತಂ ತಯಾ ॥ ೨೨೫

೨೨೬. ನಿಶ್ಚಯದತ್ತನು ಅಂತರಿಕ್ಷಕ್ಕೆ ಜಿಗಿದು ಕ್ಷಣದಲ್ಲಿ ಸೋಮಸ್ವಾಮಿ ಕಪಿಯ ಬಳಿಗೆ ಅನುರಾಗಪರೆಯನ್ನು ತಂದನು.

೨೨೭. ದಿವ್ಯದೃಷ್ಟಿಯಿದ್ದ ಆ ಕಪಿಯು ಆಗ ಅವನಿಗೆ ಯೋಗವಿದ್ಯೆಯನ್ನು ಹೇಳಿ ಕೊಟ್ಟಿತು. ಅದರಿಂದ ಅವಳ ತೋಳತೆಕ್ಕೆಯಲ್ಲಿದ್ದ ವಿದ್ಯಾಧರನನ್ನು ನಿಶ್ಚಯದತ್ತನು ನೋಡಿದನು.

೨೨೮. ನೋಡಿದ ಕೂಡಲೇ "ಧಿಕ್ಕಾರ ! ಇದೇನಿದು ?' ಎಂದು ಹೇಳುತ್ತಿದ್ದ ಅವನಿಗೆ ತತ್ತ್ವ ತಿಳಿದಿದ್ದ ಕಪಿಯೇ ಇರುವುದನ್ನು ಇದ್ದಂತೆಯೇ ಅವನಿಗೆ ಮನವರಿಕೆ ಮಾಡಿ ಕೊಟ್ಟಿತು.

೨೨೯. ಅನಂತರ ನಿಶ್ಚಯದತ್ತನು ಕೋಪಗೊಳ್ಳಲು ಆತನ ಪ್ರಿಯತಮೆಯನ್ನು ಪ್ರೇಮಿಸುತ್ತಿದ್ದ ಆ ವಿದ್ಯಾಧರನು ಎಚ್ಚರಗೊಂಡು ಆಕಾಶಕ್ಕೆ ಜಿಗಿದು ಕಣ್ಮರೆಯಾದನು.

೨೩೦. ನಿದ್ರೆಯಿಂದೆದ್ದ ಅನುರಾಗಪರೆಯೂ ತನ್ನ ಗುಟ್ಟು ಬಯಲಾದುದನ್ನು ನೋಡಿ ನಾಚಿಕೆಯಿಂದ ತಲೆತಗ್ಗಿಸಿ ನಿಂತುಕೊಂಡಳು.

೨೩೧. ಆಗ ನಿಶ್ಚಯದತ್ತನು ಕಣ್ಣಿನಲ್ಲಿ ನೀರು ತುಂಬಿಕೊಂಡು ಅವಳಿಗೆ ಹೇಳಿದನು. "ಎಲೈ ಪಾಪಿ, ನಿನ್ನನ್ನು ನಂಬಿದ್ದ ನನಗೆ ಹೀಗೇಕೆ ಮೋಸಮಾಡಿಬಿಟ್ಟೆ?

---

ಉತ್ಪತ್ಯ ಚಾಂತರಿಕ್ಷಂ ತಾಮನುರಾಗಪರಾಂ ಕ್ಷಣಾತ್ ।
ಆನಿನಾಯ ಕಪೇಸ್ತಸ್ಯ ಸ ಸೋಮಸ್ವಾಮಿನೋಽಂತಿಕಮ್ ॥ ೨೨೬

ಸಕಪಿರ್ದಿವ್ಯದೃಕ್ ತಸ್ಮೈ ತದಾಯೋಗಮುಪಾದಿಶತ್ ।
ಯೇನ ವಿದ್ಯಾಧರಂ ತಸ್ಯಾಃ ಕಂಠೇ ಲಗ್ನಂ ದದರ್ಶ ಸಃ ॥ ೨೨೭

ದೃಷ್ಟ್ವಾ ಚ ಹಾ ಧಿಗೇತತ್ಕಿಮಿತಿ ತಂ ವಾದಿನಂ ಕಪಿಃ ।
ಸ ಏವ ತತ್ತ್ವದರ್ಶೀ ತದ್ಯಥಾವೃತ್ತಮಬೋಧಯತ್ ॥ ೨೨೮

ಕ್ರುದ್ಧೇ ನಿಶ್ಚಯದತ್ತೇಽಥ ತಸ್ಮಿನ್ ವಿದ್ಯಾಧರೋಽತ್ರ ಸಃ ।
ಪ್ರಬುದ್ಧಸ್ತತ್ಪ್ರಿಯಾಕಾಮೀ ಖಮುತ್ಪತ್ಯ ತಿರೋದಧೇ ॥ ೨೨೯

ಸಾಪಿ ಪ್ರಬುದ್ಧಾ ತತ್ಕಾಲಮನುರಾಗಪರಾತ್ಮನಃ ।
ರಹಸ್ಯಭೇದಂ ತಂ ದೃಷ್ಟ್ವಾ ಹ್ರಿಯಾ ತಸ್ಥಾವಧೋಮುಖೀ ॥ ೨೩೦

ತತೋ ನಿಶ್ಚಯದತ್ತಸ್ತಾಮುವಾಚೋದಶ್ರುಲೋಚನಃ ।
ವಿಶ್ವಸ್ತೋಽಹಂ ಕಥಂ ಪಾಪೇ ತ್ವಯೈವಂ ಬತ ವಂಚಿತಃ ॥ ೨೩೧

೨೩೨. ಅತ್ಯಂತ ಚಂಚಲವಾದ ಪಾದರಸವನ್ನು ಕಟ್ಟಿಹಾಕಲು ಬೇಕಾದರೆ ಉಪಾಯವು ತಿಳಿದೀತು : ಆದರೆ ಹೆಂಗಸರ ಮನಸ್ಸನ್ನು ಕಟ್ಟಿಹಾಕಲು ಉಪಾಯವೇ ಇಲ್ಲ'

೨೩೩. ಹೀಗೆ ಅವನು ಹೇಳಲು ನಿರುತ್ತರಳಾದ ಅನುರಾಗಪರೆಯು ಅಳುತ್ತಾ ಮೆಲ್ಲಗೆ ಆಕಾಶಕ್ಕೆ ಜಿಗಿದು ತನ್ನ ಮನೆಗೆ ಹೊರಟುಬಿಟ್ಟಳು.

೨೩೪. ಮುಂದೆ ಆ ಕಪಿಮಿತ್ರನು ನಿಶ್ಚಯದತ್ತನಿಗೆ ಹೀಗೆ ಹೇಳಿತು : ನಾನು ಬೇಡವೆಂದು ತಡೆದರೂ ಈ ಪ್ರಿಯೆಯನ್ನು ಹಿಂಬಾಲಿಸಿ ನೀನು ಓಡಿದೆಯಲ್ಲ.

೨೩೫. ಆ ತೀವ್ರ ಕಾಮದ ಬೆಂಕಿಯ ಫಲವೇ ನಿನ್ನ ಈ ಪರಿತಾಪ. ಚಂಚಲವಾದ ಸಂಪತ್ತು ಮತ್ತು ಸ್ತ್ರೀಯರಲ್ಲಿ ನಂಬಿಕೆಯೆಂತಹುದು ?

೨೩೬. ಆದ್ದರಿಂದ ಸಂಕಟಪಡುವುದು ಸಾಕು. ಈಗ ಸಮಾಧಾನ ಮಾಡಿಕೋ. ಆಗಲೇಬೇಕೆಂದಿರುವುದನ್ನು ಮೀರಲು ಬ್ರಹ್ಮನಿಗೂ ಸಾಧ್ಯವಿಲ್ಲ.'

೨೩೭. ಹೀಗೆ ಆ ಕಪಿಯು ಹೇಳಿದ ಮೇಲೆ ಶೋಕಮೋಹಗಳನ್ನು ಬಿಟ್ಟ ನಿಶ್ಚಯದತ್ತನು ವೈರಾಗ್ಯಭಾವತಾಳಿ ಶಿವನನ್ನು ಶರಣುಹೊಕ್ಕನು.

೨೩೮. ಆಗ ಕಾಡಿನಲ್ಲಿ ಕಪಿ ಮಿತ್ರನೊಂದಿಗೆ ಇದ್ದ ನಿಶ್ಚಯದತ್ತನ ಬಳಿಗೆ ಅದೃಷ್ಟವಶಾತ್ ಮೋಕ್ಷದೆಯೆಂಬ ತಪಸ್ವಿನಿಯು ಬಂದಳು.

---

ಅತ್ಯಂತ ಚಂಚಲಸ್ಯೇಹ ಪಾರದಸ್ಯ ನಿಬಂಧನೇ ।
ಕಾಮಂ ವಿಜ್ಞಾಯತೇ ಯುಕ್ತಿರ್ನ ಸ್ತ್ರೀ ಚಿತ್ತಸ್ಯ ಕಾಚನ ॥ ೨೩೨

ಇತಿ ಬ್ರುವತಿ ತಸ್ಮಿನ್ ಸಾನುತ್ತರಾ ರುದತೀ ಶನೈಃ ।
ಅನುರಾಗಪರೋತ್ಪತ್ಯ ದಿವಂ ಧಾಮ ನಿಜಂ ಯಯೌ ॥ ೨೩೩

ತತೋ ನಿಶ್ಚಯದತ್ತಂ ತಂ ಸುಹೃನ್ಮರ್ಕಟಕೋಽಬ್ರವೀತ್ ।
ಏತಾಂ ಯದನ್ವಧಾವಸ್ತ್ವಂ ವಾರಿತೋಽಪಿ ಮಯಾ ಪ್ರಿಯಾಮ್ ॥ ೨೩೪

ತಸ್ಯೇದಂ ತೀವ್ರರಾಗಾಗ್ನೇಃ ಫಲಂ ಯದನುತಪ್ಯಸೇ ।
ಕೋ ಹಿ ಸಂಪತ್ಸು ಚಪಲಾಸ್ವಾಶ್ವಾಸೋ ವನಿತಾಸು ಚ ॥ ೨೩೫

ತದಲಂ ಪರಿತಾಪೇನ ತವೇದಾನೀಂ ಶಮಂ ಕುರು ।
ಭವಿತವ್ಯಂ ಹಿ ಧಾತ್ರಾಪಿ ನ ಶಕ್ಯಮತಿವರ್ತಿತುಮ್ ॥ ೨೩೬

ಇತಿ ತಸ್ಮಾತ್ ಕಪೇಃಶ್ರುತ್ವಾ ಶೋಕಮೋಹಂ ವಿಹಾಯ ತಮ್ ।
ಯಯೌ ನಿಶ್ಚಯದತ್ತೋಽತ್ರ ವಿರಕ್ತಃ ಶರಣಂ ಶಿವಮ್ ॥ ೨೩೭

ಅಥ ತತ್ರ ವನೇ ಸುಹೃದಾ ಕಪಿನಾ ಸಹ ತಿಷ್ಠತಸ್ತತೋ ನಿಕಟಮ್ ।
ತಸ್ಯಾಜಗಾಮ ದೈವಾತ್ತಪಸ್ವಿನೀ ಮೋಕ್ಷದಾ ನಾಮ ॥ ೨೩೮

೨೫೯. ನಿಶ್ಚಯದತ್ತನು ಅವಳ ಕಾಲಿಗೆ ಬಿದ್ದಾಗ ಅವಳು ನಿಧಾನವಾಗಿ ಕೇಳಿದಳು. "ಏನಿದು ಆಶ್ಚರ್ಯ ! ಮನುಷ್ಯನಾದ ನಿನ್ನ ಈ ಮಿತ್ರನು ಕಪಿಯಾಗಿ ಮಾರ್ಪಟ್ಟಿದ್ದು ಹೇಗೆ ?'

೨೬೦. ಆಗ ಅವನು ತನ್ನ ಕಥೆಯನ್ನೂ ಅನಂತರ ತನ್ನ ಮಿತ್ರನ ಕಥೆಯನ್ನೂ ದೈನ್ಯದಿಂದ ಬಿನ್ನವಿಸಿ ಅವಳನ್ನು ಹೀಗೆ ಕೇಳಿಕೊಂಡನು. "ಪೂಜ್ಯೆಯು ಯಾವುದಾದರೂ ಮಂತ್ರವನ್ನೋ ಪ್ರಯೋಗವನ್ನೋ ತಿಳಿದಿದ್ದರೆ ನನ್ನ ಈ ಮಿತ್ರನನ್ನು ಮಂಗತನದಿಂದ ಈಗಲೇ ಬಿಡುಗಡೆಗೊಳಿಸು.'

೨೬೧. ಅದನ್ನು ಕೇಳಿದ ಮೋಕ್ಷದೆಯು ಆ ಕಪಿಯ ಕೊರಳಿನಲ್ಲಿದ್ದ ದಾರವನ್ನು ಮಂತ್ರಯುಕ್ತಿಯಿಂದ ದೃಢವಾಗಿ ಕಿತ್ತೆಸೆದಳು. ಅವನು ಆ ಕಪಿ ರೂಪವನ್ನು ಬಿಟ್ಟು ಮೊದಲಿನಂತೆಯೇ ಮನುಷ್ಯನಾದ ಸೋಮಸ್ವಾಮಿಯಾಗಿ ಮಾರ್ಪಟ್ಟನು.

೨೬೨. ಅನಂತರ ದಿವ್ಯಪ್ರಭಾವದ ಆಕೆಯು ಮಿಂಚಿನಂತೆ ಮಾಯವಾಗಲು ಘೋರ ತಪಸ್ಸನ್ನು ಆಚರಿಸಿ ಕಾಲಕ್ರಮದಲ್ಲಿ ನಿಶ್ಚಯದತ್ತ–ಸೋಮಸ್ವಾಮಿಗಳಿಬ್ಬರೂ ಪರಮಗತಿಯನ್ನು ಪಡೆದರು.

---

ಸಾ ತಂ ಕ್ರಮೇಣ ದೃಷ್ಟ್ವಾ ಪ್ರಣತಂ ಪಪ್ರಚ್ಛ ಮಾನುಷಸ್ಯ ಸತಃ ।
ಚಿತ್ರಂ ಕಥಮಿಹಜಾತೋ ಮಿತ್ರಂ ತೇ ಮರ್ಕಟೋಽಯಮಿತಿ ॥ ೨೫೯

ತತಃ ಸ್ವಂ ವೃತ್ತಾಂತಂ ತದನು ಚ ಸ ಮಿತ್ರಸ್ಯ ಚರಿತಂ
ಸಮಾಚಖ್ಯೌ ತಸ್ಯೈ ಕೃಪಣಮಥ ತಾಮೇವಮವದತ್ ।
ಪ್ರಯೋಗಂ ಮಂತ್ರಂ ವಾ ಯದಿ ಭಗವತೀ ವೇತ್ತಿ ತದಿಮಂ
ಕಪಿತ್ವಾತ್ ಸನ್ಮಿತ್ರಂ ಸುಹೃದಮಧುನಾ ಮೋಚಯತು ಮೇ ॥ ೨೬೦

ತತ್‌ಶ್ರುತ್ವಾ ಸಾ ತಸ್ಯಬಾಢಂ ಕಪೇಸ್ತತ್
ಸೂತ್ರಂ ಕಂಠಾನ್ಮಂತ್ರಯುಕ್ತ್ಯಾ ಮುಮೋಚ ।
ಸೋಽಥ ತ್ಯಕ್ತ್ವಾ ಮಾರ್ಕಟೀಮಾಕೃತಿಂ ತಾಂ
ಸೋಮಸ್ವಾಮೀ ಪೂರ್ವವನ್ಮಾನುಷೋಽಭೂತ್ ॥ ೨೬೧

ತಸ್ಯಾಂ ತತಶ್ಚ ತಡಿತೀವ ತಿರೋಹಿತಾಯಾಂ
ದಿವ್ಯಪ್ರಭಾವಭೃತಿ ಭೂರಿ ತಪೋ ವಿಧಾಯ ।
ಕಾಲೇನ ತತ್ರ ಕಿಲ ನಿಶ್ಚಯದತ್ತಸೋಮ–
ಸ್ವಾಮಿದ್ವಿಜೌ ಪ್ರಯಯತುಃ ಪರಮಾಂ ಗತಿಂ ತೌ ॥ ೨೬೨

೨೫೩. ಈ ರೀತಿ ಲಲನೆಯರು ಸ್ವಾಭಾವಿಕವಾಗಿಯೇ ಚಂಚಲೆಯರು. ವಿವೇಕ ವೈರಾಗ್ಯಗಳನ್ನು ತಂದುಕೊಡುವ ನಾನಾ ದುರ್ವರ್ತನೆಗಳನ್ನು ಆಚರಿಸುವವರು. ಅವರಲ್ಲಿ ಯಾರೋ ಒಬ್ಬಳು ಪತಿವ್ರತೆಯು ಇರುತ್ತಾಳೆ. ಅವಳು ಹೊಸ ಚಂದ್ರನ ಲೇಖೆಯು ಆಕಾಶವನ್ನು ಶೋಭಾಯಮಾನವಾಗಿ ಮಾಡುವಂತೆ ತನ್ನ ವಿಶಾಲಕುಲವನ್ನು ಅಲಂಕರಿಸುವಳು.

೨೫೪. ಹೀಗೆ ಮಂತ್ರಿಯಾದ ಗೋಮುಖನ ಬಾಯಿಂದ ವಿಚಿತ್ರವಾದ ಕಥೆಯನ್ನು ಕೇಳಿದ ನರವಾಹನದತ್ತನು ರತ್ನಪ್ರಭೆಯೊಂದಿಗೆ ಬಹಳ ಸಂತೋಷಪಟ್ಟನು.

ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಬಟ್ಟವಿರಚಿತ
ಕಥಾಸರಿತ್ಸಾಗರದ ರತ್ನಪ್ರಭಾಲಂಕದಲ್ಲಿ
ಮೂರನೆಯ ತರಂಗವು ಮುಗಿಯಿತು.

---

ಏವಂ ನಿಸರ್ಗಚಪಲಾ ಲಲನಾ ವಿವೇಕ–
ವೈರಾಗ್ಯದಾಯಿಬಹುದುಶ್ಚರಿತಪ್ರಬಂಧಾಃ ।
ಸಾಧ್ವೀ ತು ಕಾಚಿದಪಿ ತಾಸು ಕುಲಂ ವಿಶಾಲಂ
ಯಾಲಂಕರೋತ್ಯಭಿನವಾ ಖಮಿವೇಂದುಲೇಖಾ ॥ ೨೫೩
ಇತ್ಯೇತಾಂ ನರವಾಹನದತ್ತಃ ಸಚಿವಸ್ಯ ಗೋಮುಖಸ್ಯ ಮುಖಾತ್ ।
ಚಿತ್ರಾಮಾಕರ್ಣ್ಯ ಕಥಾಂ ತುತೋಷ ರತ್ನಪ್ರಭಾಸಹಿತಃ ॥ ೨೫೪

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ
ಕಥಾಸರಿತ್ಸಾಗರೇ
ರತ್ನಪ್ರಭಾಲಂಬಕೇ ತೃತೀಯಸ್ತರಂಗಃ ।

---

# ನಾಲ್ಕನೆಯ ತರಂಗ

೧ ಅನಂತರ ಗೋಮುಖನ ಕಥೆಯಿಂದ ನರವಾಹನದತ್ತನು ಸಂತೋಷಪಟ್ಟಿದ್ದನ್ನು ನೋಡಿ ಅವನ ಮೇಲಿನ ಸ್ಪರ್ಧೆಯಿಂದ ಎಂಬಂತೆ ಮರುಭೂತಿಯು ಹೇಳಿದನು.

೨. ಸಾಮಾನ್ಯವಾಗಿ ಸ್ತ್ರೀಯರು ಚಪಲೆಯರೆಂಬುದು ಸರಿಯೇ. ಆದರೆ ಎಲ್ಲರೂ ಅಲ್ಲ. ಏಕೆಂದರೆ ವೇಶ್ಯೆಯರೂ ಸತ್ತ್ವಶಾಲಿಗಳಾಗಿರುವುದು ಕಂಡುಬರುವಾಗ ಉಳಿದವರ ಮಾತೇನು ?

೩. ಅಂತೆಯೇ ಪ್ರಭುವೇ ! ಪ್ರಸಿದ್ಧವಾಗಿರುವ ಈ ಕಥೆಯನ್ನು ಕೇಳು. ಪಾಟಲಿಪುತ್ರದಲ್ಲಿ ವಿಕ್ರಮಾದಿತ್ಯನೆಂಬ ರಾಜನೊಬ್ಬನಿದ್ದನು.

೪. ಅವನಿಗೆ ಪ್ರಿಯರಾದ ಇಬ್ಬರು ಗೆಳೆಯರಿದ್ದರು. ಒಬ್ಬನು ರಾಜ ಹಯಪತಿ. ಮತ್ತೊಬ್ಬನು ಗಜಪತಿ. ಇಬ್ಬರ ಬಳಿಯೂ ಬೇಕಾದಷ್ಟು ಕುದುರೆ ಆನೆಗಳ ಸಾಧನಸಂಪತ್ತು ಇದ್ದಿತು.

೫ ಅಭಿಮಾನಿಯಾದ ವಿಕ್ರಮಾದಿತ್ಯನಿಗೆ ಪ್ರತಿಷ್ಠಾನದ ಒಡೆಯನೂ ಬಲಶಾಲಿಯೂ ಆದ ನರಸಿಂಹನೆಂಬ ಶತ್ರುರಾಜನೂ ಇದ್ದನು. ಇವನಿಗೆ ತುಂಬ ಕಾಲಾಳುಗಳು ಇದ್ದರು.

---

# ಚತುರ್ಥಸ್ತರಂಗಃ

ಗೋಮುಖೀಯಕಥಾತುಷ್ಟಂ ದೃಷ್ಟ್ವಾ ತತ್ಸ್ಪರ್ಧಯಾ ಕಿಲ ।
ನರವಾಹನದತ್ತಂ ತಂ ಮರುಭೂತಿರಥಾಬ್ರವೀತ್ ॥ ೧

ಪ್ರಾಯೇಣ ಚಪಲಾಃ ಕಾಮಂ ಸ್ತ್ರಿಯೋ ನೈಕಾಂತತಃ ಪುನಃ ।
ವೇಶ್ಯಾ ಪಿ ಚ ದೃಶ್ಯಂತೇ ಸತ್ತ್ವಾಢ್ಯಾಃ ಕಿಮುತಾಪರಾಃ ॥ ೨

ತಥಾ ಚ ದೇವ ವಿಖ್ಯಾತಾಮಿಮಾಮತ್ರ ಕಥಾಂ ಶೃಣು ।
ವಿಕ್ರಮಾದಿತ್ಯ ಇತ್ಯಾಸೀದ್ರಾಜಾ ಪಾಟಲಿಪುತ್ರಕೇ ॥ ೩

ತಸ್ಯಾಭೂತಾಮಭಿಪ್ರೇತೇ ಮಿತ್ರೇ ಹಯಪತಿರ್ನೃಪಃ ।
ರಾಜಾ ಗಜಪತಿಶ್ಚೋಭೌ ಬಹ್ವಶ್ವಗಜಸಾಧನೌ ॥ ೪

ಶತ್ರುರ್ನರಪತಿರ್ಭೂರಿ ಪಾದಾತಸ್ತಸ್ಯ ಚಾಭವತ್ ।
ಮಾನಿನೋ ನರಸಿಂಹಾಖ್ಯಃ ಪ್ರತಿಷ್ಠಾನೇಶ್ವರೋ ಬಲೀ ॥ ೫

೬ ಆ ಶತ್ರುವಿನ ಮೇಲೆ ಕುಪಿತನಾಗಿದ್ದ ವಿಕ್ರಮಾದಿತ್ಯನು ಮಿತ್ರರು ಬಲದಿಂದ ಗರ್ವಿತನಾಗಿ ಆತುರದಿಂದ ಹೀಗೆ ಪ್ರತಿಜ್ಞೆ ಮಾಡಿಬಿಟ್ಟನು.

೭ "ನರಸಿಂಹರಾಜನನ್ನು ನಾನು ಹೇಗೆ ಗೆಲ್ಲಬೇಕೆಂದರೆ ಅವನು ಬಾಗಿಲಲ್ಲಿ ವಂದಿಮಾಗಧರಿಂದ ನನ್ನ ಸೇವಕ ಬಂದಿದ್ದಾನೆಂದು ನಿವೇದನೆ ಮಾಡಬೇಕು.'

೮-೯. ಹೀಗೆ ಪ್ರತಿಜ್ಞೆಗೈದ ಅವನು ಮಿತ್ರರಾದ ಹಯಪತಿ ಗಜಪತಿಯರನ್ನು ಕರೆಸಿ ಅವರಿಬ್ಬರ ಜೊತೆ, ಆನೆ ಕುದುರೆಗಳಿಂದ ನೆಲವನ್ನು ಅಲ್ಲೋಲ ಕಲ್ಲೋಲಗೊಳಿಸುತ್ತಾ ತನ್ನೆಲ್ಲ ಸೈನ್ಯದಿಂದೊಡಗೂಡಿ ಹಠಾತ್ತನೆ ನರಸಿಂಹನ ಮೇಲೆ ಮುತ್ತಿಗೆ ಹಾಕಲು ಹೊರಟನು.

೧೦. ಅವನು ಪ್ರತಿಷ್ಠಾನದ ಬಳಿಗೆ ಬಂದಾಗ ಅದನ್ನು ತಿಳಿದ ನರಸಿಂಹನು ತಾನೂ ಸಿದ್ಧತೆ ಮಾಡಿಕೊಂಡು ಸೈನ್ಯದ ಮುಂದೆ ಅವನೇ ಹೊರಟನು.

೧೧. ಆಮೇಲೆ ಆಶ್ಚರ್ಯಕರವಾದ ಯುದ್ಧವು ಅವರಿಬ್ಬರು ರಾಜರ ನಡುವೆ ನಡೆಯಿತು. (ಬೇರೆಡೆ) ಕಾಲಾಳುಗಳು ಆನೆಕುದುರೆಗಳೊಂದಿಗೆ ಯುದ್ಧ ಮಾಡುತ್ತಿದ್ದರು.

೧೨. ಆಮೇಲೆ ನರಸಿಂಹರಾಜನ ಕೋಟಿ ಸಂಖ್ಯೆಯ ಸೈನಿಕರಿಂದ ವಿಕ್ರಮಾದಿತ್ಯನ ಸೈನ್ಯವು ನಾಶವಾಯಿತು.

---

ತಂ ರಿಪುಂ ಪ್ರತಿ ಸಾಮರ್ಷಃ ಸುಮಿತ್ರಬಲಗರ್ವಿತಃ ।
ಚಕಾರ ವಿಕ್ರಮಾದಿತ್ಯಃ ಪ್ರತಿಜ್ಞಾಂ ರಭಸಾದಿಮಾಮ್ ॥ ೬

ತಥಾ ಮಯಾ ವಿಜೇತವ್ಯೋ ರಾಜಾ ನರಪತಿರ್ಯಥಾ ।
ಸ ಬಂದಿಮಾಗಧೈರ್ದ್ವಾರಿ ಸೇವಕೋ ಮೇ ನಿವೇದ್ಯತೇ ॥ ೭

ಏವಂ ಕೃತಪ್ರತಿಜ್ಞಸ್ತೌ ಮಿತ್ರೇ ಹಯಗಜಾಧಿಪೌ ।
ಸಮಾನೀಯ ಸಮಂತಾಭ್ಯಾಂ ಹಸ್ತ್ಯಶ್ವಕ್ಷೋಭಿತಕ್ಷಿತಿಃ ॥ ೮

ಅಭಿಯೋಕ್ತುಂ ನರಪತಿಂ ನರಸಿಂಹಂ ಪ್ರಸಹ್ಯ ತಮ್ ।
ಸ ಯಯೌ ವಿಕ್ರಮಾದಿತ್ಯೋ ರಾಜಾಖಿಲಬಲಾನ್ವಿತಃ ॥ ೯

ಪ್ರಾಪ್ತೇ ತಸ್ಮಿನ್ ಪ್ರತಿಷ್ಠಾನನಿಕಟಂ ಸೋಽಪ್ಯವೇತ್ಯ ತತ್ ।
ನರಸಿಂಹೋ ನರಪತಿಃ ಸಂನಹ್ಯಾಗ್ರೇಽಸ್ಯ ನಿರ್ಯಯೌ ॥ ೧೦

ತತಸ್ತಯೋರಭೂದ್ಯುದ್ಧಂ ರಾಜ್ಞೋರ್ಜನಿತವಿಸ್ಮಯಮ್ ।
ಗಜಾಶ್ವೇನ ಸಮಂ ಯತ್ರ ಯುಧ್ಯಂತೇ ಸ್ಮ ಪದಾತಯಃ ॥ ೧೧

ಕ್ರಮಾಚ್ಚ ನರಸಿಂಹಸ್ಯ ಕೋಟಿಸಂಖ್ಯಪದಾತಿಭಿಃ ।
ಭಗ್ನಂ ತದ್ವಿಕ್ರಮಾದಿತ್ಯಬಲಂ ನರಪತೇರ್ಬಲೈಃ ॥ ೧೨

೧೩. ಸೋತ ವಿಕ್ರಮಾದಿತ್ಯ ಓಡಿಹೋಗಿ ಪಾಟಲಿಪುತ್ರವನ್ನು ತಲುಪಿದನು. ಅವನ ಮಿತ್ರರೂ ತಂತಮ್ಮ ಊರುಗಳಿಗೆ ಹೋದರು.

೧೪. ರಾಜನಾದ ನರಸಿಂಹನು ಶತ್ರುವನ್ನು ಜಯಿಸಿ ವಂದಿಮಾಗಧರು ಅವನ ಪರಾಕ್ರಮವನ್ನು ಹೊಗಳುತ್ತಿರಲು ಪ್ರತಿಷ್ಠಾನವನ್ನು ಪ್ರವೇಶಿಸಿದನು.

೧೫. ಕೆಲಸವು ಕೈಗೂಡದಿದ್ದ ವಿಕ್ರಮಾದಿತ್ಯನು ಅನಂತರ ವಿಚಾರಮಾಡಿದನು. 'ಶಸ್ತ್ರಗಳಿಂದ ಗೆಲ್ಲಲಾಗದ ಆ ಶತ್ರುವನ್ನು ಬುದ್ಧಿಯಿಂದ ಗೆಲ್ಲುತ್ತೇನೆ.

೧೬–೧೮. ಕೆಲವರು ಬೇಕಾದರೆ ನನ್ನನ್ನು ಹಳಿಯಲಿ. ಆದರೂ ನನ್ನ ಪ್ರತಿಜ್ಞೆಯು ಅನ್ಯಥಾ ಆಗಬಾರದು' ಎಂದು ಪರ್ಯಾಲೋಚಿಸಿ ರಾಜ್ಯವನ್ನು ಯೋಗ್ಯರಾದ ಮಂತ್ರಿಗಳಿಗೆ ವಹಿಸಿ, ಮುಖ್ಯನಾದ ಬುದ್ಧಿವರನೆಂಬ ಒಬ್ಬ ಮಂತ್ರಿಯೊಡನೆ ಹಾಗೂ ನೂರು ರಾಜಪುತ್ರರೊಡನೆ ಐದು ಜನ ಸತ್ಕುಲ ಪ್ರಸೂತರಾದ ಶೂರರೊಡನೆ ಕಾರ್ಪಟಿಕ ವೇಷವನ್ನು ಧರಿಸಿ ಗುಟ್ಟಾಗಿ ತನ್ನ ಶತ್ರುವಿನ ನಗರವಾದ ಪ್ರತಿಷ್ಠಾನಕ್ಕೆ ಹೋದನು.

---

ಭಗ್ನಶ್ಚ ವಿಕ್ರಮಾದಿತ್ಯಃ ಪುರಂ ಪಾಟಲಿಪುತ್ರಕಮ್ ।
ಯಯೌ ಪಲಾಯ್ಯ ತನ್ಮಿತ್ರೇ ಸ್ವಂ ಸ್ವಂ ದೇಶಂ ಚ ಜಗ್ಮತುಃ ॥ ೧೩
ನರಸಿಂಹೋ ನರಪತಿರ್ಜಿತಶತ್ರುರ್ನಿಜಂ ಪುರಮ್ ।
ಪ್ರವಿವೇಶ ಪ್ರತಿಷ್ಠಾನಂ ಬಂದಿಭಿಃ ಸ್ತುತವಿಕ್ರಮಃ ॥ ೧೪
ತತಃ ಸ ವಿಕ್ರಮಾದಿತ್ಯೋಽಸಿದ್ಧಕಾರ್ಯೋಽ ವ್ಯಚಿಂತಯತ್ ।
ಶಸ್ತ್ರೈರಜೇಯಂ ಶತ್ರುಂ ತಂ ಜಯಾಮಿ ಪ್ರಜ್ಞಯಾ ವರಮ್ ॥ ೧೫
ಕಾಮಂ ಕೇಚಿದ್ವಿಗರ್ಹಂತಾಂ ಮಾ ಪ್ರತಿಜ್ಞಾನ್ಯಥಾ ತು ಭೂತ್ ।
ಇತಿ ಸಂಚಿಂತ್ಯ ನಿಕ್ಷಿಪ್ಯ ರಾಜ್ಯಂ ಯೋಗ್ಯೇಷು ಮಂತ್ರಿಷು ॥ ೧೬
ನಿರ್ಗತ್ಯ ನಗರಾದ್ಗುಪ್ತಂ ಮುಖ್ಯೇನೈಕೇನ ಮಂತ್ರಿಣಾ ।
ಸಹ ಬುದ್ಧಿವರಾಖ್ಯೇಣ ರಾಜಪುತ್ರಶತೈಸ್ತಥಾ ॥ ೧೭
ಪಂಚಭಿಃ ಕುಲಜೈಃ ಶೂರೈಃ ಸ ಕಾರ್ಪಟಿಕವೇಷಭೃತ್ ।
ಭೂತ್ವಾ ಪುರಂ ನಿಜರಿಪೋಃ ಪ್ರತಿಷ್ಠಾನಂ ಜಗಾಮ ತತ್ ॥ ೧೮

೧೯-೨೦. ಅಲ್ಲಿ ಮದನಮಾಲೆಯೆಂದು ಪ್ರಸಿದ್ಧಳಾಗಿದ್ದ ಗಣಿಕೆಯೊಬ್ಬಳ ಇಂದ್ರನ ಅರಮನೆಗೆ ಸಮಾನವಾಗಿದ್ದ ಶ್ರೇಷ್ಠವಾದ ಭವನಕ್ಕೆ ಹೋದನು. ಅಲ್ಲಿದ್ದ ಎತ್ತರವಾದ ಪ್ರಾಕಾರದ ತುದಿಗಳಲ್ಲಿ ಹಾರಿಸಲಾಗಿದ್ದ ಧ್ವಜಗಳ ಬಟ್ಟೆಗಳ ತುದಿಗಳು ಮೆದುವಾಗಿ ಬೀಸುತ್ತಿದ್ದ ಗಾಳಿಯಿಂದ ಹೊಯ್ದಾಡುತ್ತ ಅವನನ್ನು ಕರೆಯುತ್ತಿದ್ದಂತೆ ಕಾಣಿಸುತ್ತಿದ್ದುವು.

೨೧. ಆ ಅರಮನೆಯು ಮುಖ್ಯವಾದ ಪೂರ್ವ ದಿಕ್ಕಿನ ಬಾಗಿಲು ನಾನಾ ಆಯುಧಗಳಿಂದ ಕೂಡಿದ್ದ ಇಪ್ಪತ್ತು ಸಾವಿರ ಕಾಲಾಳುಗಳಿಂದ ಹಗಲೂ ರಾತ್ರಿ ರಕ್ಷಿತವಾಗಿತ್ತು.

೨೨. ಉಳಿದ ಮೂರು ದಿಕ್ಕುಗಳಲ್ಲೂ ಆ ಅರಮನೆಯ ಪ್ರತಿಬಾಗಿಲಲ್ಲಿ ಕೊಬ್ಬಿನಿಂದ ಮೆರೆಯುತ್ತಿದ್ದ ಹತ್ತು ಹತ್ತು ಸಾವಿರ ಶೂರರಿಂದ (ಅರಮನೆಯು) ರಕ್ಷಿತವಾಗಿತ್ತು.

---

ತತ್ರ ವಾರವಿಲಾಸಿನ್ಯಾ ನರೇಂದ್ರಸದನೋಪಮಮ್ ।
ಯಯೌ ಮದನಮಾಲೇತಿ ಖ್ಯಾತಾಯಾ ವರಮಂದಿರಮ್ ॥ ೧೯

ಕೃತಾಹ್ವಾನಮಿವ ಪ್ರಾಂಶು ಪ್ರಾಕಾರಶಿಖರೋಚ್ಛ್ರಿತೈಃ ।
ಧ್ವಜಾಂಶುಕೈರ್ಮೃದು ಮರುದ್ವಿಕ್ಷಿಪ್ತಾಕ್ಷಿಪ್ತಪಲ್ಲವೈಃ ॥ ೨೦

ಪ್ರಧಾನೇ ಪೂರ್ವದಿಗ್ದ್ವಾರೇ ವಿವಿಧಾಯುಧಶಾಲಿನಾಮ್ ।
ಗುಪ್ತಂ ಸಹಸ್ರವಿಂಶತ್ಯಾ ಪದಾತೀನಾಂ ದಿವಾನಿಶಮ್ ॥ ೨೧

ಅನ್ಯಾಸು ದಿಕ್ಷು ತಿಸೃಷು ದ್ವಾರಿ ದ್ವಾರಿ ಮದೋದ್ಧತೈಃ ।
ದಶಭಿರ್ದಶಭಿಃ ಶೂರಸಹಸ್ರೈರಭಿರಕ್ಷಿತಮ್ ॥ ೨೨

೨೩–೨೬. ನಿವೇದಿಸಿ ಬಂದಮೇಲೆ ರಾಜನು ಪರಿವಾರದೊಂದಿಗೆ ಮದನಮಾಲೆಯ ಉನ್ನತವಾದ ಪ್ರಾಸಾದವನ್ನು ತಲುಪಿದನು. ಅದು ಏಳು ವಿಭಾಗದಲ್ಲಿ ವಿಭಕ್ತವಾಗಿದ್ದು ಒಂದು ಭಾಗವು ಅನೇಕ ಶ್ರೇಷ್ಠ ಕುದುರೆಗಳ ಸಾಲುಗಳಿಂದ ಶೋಭಿತವಾಗಿತ್ತು. ಒಂದು ಭಾಗದಲ್ಲಿ ಆನೆಗಳ ಸಮೂಹವನ್ನು ಕಟ್ಟಿಹಾಕಿದ್ದು ಅವುಗಳ ಸಂಘರ್ಷದ ಓಡಾಟವಿತ್ತು. ಒಂದು ಕಡೆ ಆಯುಧಗಳನ್ನು ಗಂಭೀರವಾದ ಆಕಾರಗಳಲ್ಲಿ ಜೋಡಿಸಲಾಗಿತ್ತು. ಒಂದು ಭಾಗವು ರತ್ನಗಳ ಕಾಂತಿಯಿಂದ ಶೋಭಿಸುತ್ತಿದ್ದ ಖಜಾನೆಗಳಿಂದ ಉಜ್ವಲವಾಗಿತ್ತು. ಒಂದೆಡೆ ಗುಂಪುಗಟ್ಟಿದ್ದ ಸೇವಕರ ಜಂಗುಳಿ, ಒಂದೆಡೆ ಸಂಗೀತ ಕಾರ್ಯಕ್ರಮಗಳು ನಡೆಯುತ್ತಿದ್ದು ಆ ಪ್ರದೇಶ ಮೃದಂಗಗಳ ಧ್ವನಿಯಿಂದ ಮಾರ್ದನಿಸುತ್ತಿತ್ತು. ಒಂದೆಡೆ ವಂದಿಮಾಗಧರ ಗುಂಪುಗಳ ತಾರಕಧ್ವನಿಯಲ್ಲಿ ಘೋಷಿಸುತ್ತಿದ್ದ ಕೋಲಾಹಲ.

೨೭ ರಾಜನು ತನ್ನ ಪರಿವಾರದೊಂದಿಗೆ ಏಳು ಭಾಗಗಳಲ್ಲಿ ವಿಭಕ್ತವಾಗಿದ್ದ ಆ (ಭವನವನ್ನು) ನೋಡುತ್ತಾ ಮದನಮಾಲೆಯ ಎತ್ತರವಾದ ಭವನವನ್ನು ತಲುಪಿದನು.

---

ಆವೇದಿತಃ ಪ್ರತೀಹಾರೈಸ್ತಥಾಭೂತಃ ಪ್ರವಿಶ್ಯ ಚ ।
ಕ್ವಚಿತ್ ಪ್ರವಿತತಾನೇಕವರಾಶ್ವಶ್ರೇಣಿಶೋಭಿತಮ್ ॥ ೨೩
ಕ್ವಚಿದಾಬದ್ಧಮಾತಂಗಘಟಾಸಂಘಟ್ಟಸಂಚರಮ್ ।
ಕ್ವಚಿದಾಯುಧಸಂದರ್ಭಗಂಭೀರಾಕಾರಗುಂಫಿತಮ್ ॥ ೨೪
ಕ್ವಚಿದ್ರತ್ನ ಪ್ರಭಾಭಾಸ್ವದ್ಬಹುಕೋಷಗೃಹೋಜ್ಜ್ವಲಮ್ ।
ಕ್ವಚಿತ್ಸೇವಕಸಂಘಾತಸಂತತಾಬದ್ಧಮಂಡಲಮ್ ॥ ೨೫
ಕ್ವಚಿದುಚ್ಚೈಃಪಠದ್ಬಂದಿವೃಂದಕೋಲಾಹಲಾಕುಲಮ್ ।
ಕ್ವಚಿನ್ನಿಬದ್ಧಸಂಗೀತಮೃದಂಗಧ್ವನಿನಾದಿತಮ್ ॥ ೨೬
ಸಪ್ತಕಕ್ಷ್ಯಾ ವಿಭಕ್ತಂ ತತ್ಸ ಪಶ್ಯನ್ ಸಪರಿಚ್ಛದಃ ।
ಪ್ರಾಪನ್ಮದನಮಾಲಾಯಾಃ ವಾಸಪ್ರಾಸಾದಮುನ್ನತಮ್ ॥ ೨೭

೨೮–೨೯. ತಾನು ವಿಶೇಷ ಕಾಳಜಿಯಿಂದ ಕುದುರೆ ಮುಂತಾದವನ್ನು ವರ್ಣಿಸಿದ್ದನ್ನು ಪರಿಜನರ ಮೂಲಕ ಕೇಳಿ ಇವನಾರೋ ಶ್ರೇಷ್ಠವ್ಯಕ್ತಿಯೇ ಸರಿ, ಆದರೆ ಬೇರೆ ವೇಷದಲ್ಲಿ ಬಂದಿದ್ದಾನೆ ಎಂದು ತಿಳಿದು ಎದುರ್ಗೊಂಡು ಆಶಾಭರಿತಳಾಗಿ ಕುತೂಹಲದಿಂದ ನಮಸ್ಕರಿಸಿ ಆಮೇಲೆ ಒಳಕ್ಕೆ ಬರಮಾಡಿಕೊಂಡು ರಾಜಯೋಗ್ಯವಾದ ಪೀಠದಲ್ಲಿ ಅವನನ್ನು ಕೂರಿಸಿದಳು.

೩೦. ರಾಜನೂ ಕೂಡ ತಾನು ಯಾರೆಂದು ಪ್ರಕಟಪಡಿಸದೇ ಅವಳ ರೂಪ ಲಾವಣ್ಯ ವಿನಯಗಳಿಂದ ಆಕರ್ಷಿತನಾಗಿ ಅವಳನ್ನು ಅಭಿನಂದಿಸಿದನು.

೩೧. ಆಗ ಮದನಮಾಲೆಯು ಸ್ನಾನ ಹೂವು ಶೃಂಗಾರ ದ್ರವ್ಯ ಹಾಗೂ ದೊಡ್ಡವರಿಗೆ ಯೋಗ್ಯವಾದ ವಸ್ತ್ರ ಆಭರಣಗಳಿಂದ ಆ ರಾಜನನ್ನು ಗೌರವಿಸಿದಳು.

೩೨. ಅವನ ಹಿಂಬಾಲಕರಿಗೆ ದಿನಭತ್ಯೆ ನೀಡಿ, ಮಂತ್ರಿಗಳೊಂದಿಗೆ ರಾಜನನ್ನು ವಿವಿಧ ರೀತಿಯ ಆಹಾರಗಳಿಂದ ಉಪಚರಿಸಿದಳು.

೩೩. ಆ ದಿನ ಅವನೊಂದಿಗೆ ಪಾನ ಮುಂತಾದುವುಗಳ ಮೂಲಕ ಕಳೆದಳು. ಅವನ ನೋಟದಿಂದ ವಶಳಾಗಿದ್ದ ಆಕೆಯು ಅವನಿಗೆ ತನ್ನನ್ನು ಅರ್ಪಿಸಿಕೊಂಡಳು.

೩೪. ಮಾರುವೇಷದಲ್ಲಿದ್ದರೂ ಅವಳಿಂದ ಅದೇ ರೀತಿ ಆರಾಧಿತನಾಗಿದ್ದ ವಿಕ್ರಮಾದಿತ್ಯನು ಚಕ್ರವರ್ತಿಗೆ ಯೋಗ್ಯವಾದ ರೀತಿಯಲ್ಲೇ ಇದ್ದನು.

---

ಸಾ ತಂ ಕಕ್ಷ್ಯಾಸು ಸಾಕೂತನಿರ್ವರ್ಣಿತಹಯಾದಿಕಮ್ ।
ಶ್ರುತ್ವಾ ಪರಿಜನಾನ್ಮತ್ವಾ ಪ್ರಚ್ಛನ್ನಂ ಕಂಚಿದುತ್ತಮಮ್ ॥ ೨೮
ಪ್ರತ್ಯುದ್ಗಮ್ಯ ಪ್ರಣಮ್ಯಾಥ ಸಾಭಿಲಾಷಂ ಸಕೌತುಕಮ್ ।
ರಾಜೋಚಿತೇ ಪ್ರವೇಶ್ಯಾಂತರುಪಾವೇಶಯದಾಸನೇ ॥ ೨೯
ಸೋಽಪಿ ತದ್ರೂಪಲಾವಣ್ಯವಿನಯಾಹೃತಚೇತನಃ ।
ತಾಮಭ್ಯನಂದದಾತ್ಮಾನಮಪ್ರಕಾಶ್ಯೈವ ಭೂಪತಿಃ ॥ ೩೦
ತತೋ ಮದನಮಾಲಾ ಸಾ ಸ್ನಾನಪುಷ್ಪಾನುಲೇಪನೈಃ ।
ವಸ್ತ್ರೈರಾಭರಣೈರ್ಭೂಪಂ ಮಹಾರ್ಹೈಸ್ತಮಮಾನಯತ್ ॥ ೩೧
ದತ್ವಾ ದಿವಸವೃತ್ತಿಂ ಚ ತೇಷಾಂ ತದನುಯಾಯಿನಾಮ್ ।
ಆಹಾರೈಸ್ತಂ ಸಸಚಿವಂ ನಾನಾರೂಪೈರುಪಾಚರತ್ ॥ ೩೨
ನಿನಾಯ ಚ ಸಮಂ ತೇನ ದಿನಂ ಪಾನಾದಿಲೀಲಯಾ ।
ಆತ್ಮಾನಂ ಚಾರ್ಪಯತ್ತಸ್ಮೈ ಸಾ ದರ್ಶನವಶೀಕೃತಾ ॥ ೩೩
ತಥೈವಾರಾಧ್ಯಮಾನೋಽಥಚ್ಛನ್ನೋಽಪ್ಯಹರಹಸ್ತಯಾ ।
ಸ ತಸ್ಥೌ ವಿಕ್ರಮಾದಿತ್ಯಶ್ಚಕ್ರವರ್ತ್ಯುಚಿತೈಃ ಕ್ರಮೈಃ ॥ ೩೪

೩೫. ದಿನವೂ ಬೇಡುವವರಿಗೆ ತನ್ನಲ್ಲಿದ್ದ ಹಣವಷ್ಟನ್ನೇ ದಾನ ಮಾಡಿದನು. ಇವನ್ನು ನೋಡುತ್ತಿದ್ದ ಮದನಮಾಲೆಯು ತಾನೇ ಅವನಿಗೆ ಇವೆಲ್ಲವನ್ನೂ ತಂದುಕೊಡುತ್ತಿದ್ದಳು.

೩೬. ಅವನು ಅನುಭವಿಸುತ್ತಿದ್ದ ತನ್ನ ಹಣವನ್ನೂ ಶರೀರವನ್ನೂ ಧನ್ಯವೆಂದು ಭಾವಿಸಿ ಅವಳು ಬೇರೆ ಗಂಡಸರಿಗೂ (ಹಣಕ್ಕೂ) ಮುಖ ಮಾಡಲಿಲ್ಲ.

೩೭. ಅವಳ ಮೇಲಣ ಪ್ರೀತಿಯಿಂದ ಅಲ್ಲಿಗೆ ಅನುರಾಗದಿಂದ ಬರುತ್ತಿದ್ದ ನರಸಿಂಹ ರಾಜನನ್ನೂ ಬರದಂತೆ ಉಪಾಯವಾಗಿ ತಡೆದುಬಿಟ್ಟಳು.

೩೮. ಹೀಗೆ ಅವಳ ಸೇವೆ ಪಡೆಯುತ್ತಿದ್ದ ರಾಜನು ಒಮ್ಮೆ ಸಹಚರನೂ ಮಂತ್ರಿಯೂ ಆದ ಬುದ್ಧಿವರನಿಗೆ ಗುಟ್ಟಾಗಿ ಹೇಳಿದನು:

೩೯. "ಹಣವನ್ನು ಬಯಸುವ ವೇಶ್ಯೆಯು ಅದಿಲ್ಲದೆ ಕಾಮದಲ್ಲಿಯೂ ಆಸಕ್ತಿ ತಳೆಯುವುದಿಲ್ಲ. ವಿಧಿಯು ಯಾಚಕರನ್ನು ಸೃಷ್ಟಿಸಿಯೇ ಅವರಿಗೆ ಲೋಭವನ್ನು ನೀಡಿದ್ದಾನೆ

೪೦. ಈ ಮದನಮಾಲೆಯಾದರೋ ನಾನು ಆಕೆಯ ಹಣವನ್ನು ಅನುಭವಿಸುತ್ತಿದ್ದರೂ ಬೇಸರಪಡುವುದಿಲ್ಲ. ಅಲ್ಲದೆ ಅತಿ ಸ್ನೇಹದಿಂದ ನನ್ನಲ್ಲಿ ಸಂತೋಷ ಕಾಣುತ್ತಾಳೆ.

೪೧. ಆದ್ದರಿಂದ ಈಗ ಇವಳಿಗೆ ನಾನು ಪ್ರತ್ಯುಪಕಾರವನ್ನು ಹೇಗೆ ಮಾಡಲಿ ? ಅದರಿಂದ ಮುಂದೆ ನನ್ನ ಪ್ರತಿಜ್ಞೆಯೂ ಕಾಮವೂ ಸಿದ್ಧಿಸುವಂತಿರಬೇಕು.'

---

ಯಾಚಕೇಭ್ಯೋ ದದೌ ನಿತ್ಯಂ ವಿತ್ತಂ ಯಾವಚ್ಚ ಯಚ್ಚ ಸಃ ।
ದೃಷ್ಟ್ವಾ ಮದನಮಾಲಾ ಸಾ ತತ್ತಸ್ಮೈ ಸ್ವಮುಪಾನಯತ್ ॥ ೩೫

ತೇನೋಪಭುಜ್ಯಮಾನಂ ಚ ಸಾ ಶರೀರಂ ಧನಂ ತಥಾ ।
ಮೇನೇ ಕೃತಾರ್ಥಮನ್ಯಸ್ಮಿನ್ ಪುಂಸ್ಯರ್ಥೇ ಚ ಪರಾಙ್ಮುಖೀ ॥ ೩೬

ತತ್ಪ್ರೇಮ್ಣಾ ಹ್ಯಪಿ ತತ್ರತ್ಯಮನುರಕ್ತಂ ನರಾಧಿಪಮ್ ।
ಆಯಾಂತಂ ನರಸಿಂಹಂ ತಂ ವಾರಯಾಮಾಸ ಯುಕ್ತಿಭಿಃ ॥ ೩೭

ಏವಂ ತಯಾ ಸೇವ್ಯಮಾನಃ ಕದಾಚಿನ್ಮಂತ್ರಿಣಂ ರಹಃ ।
ರಾಜಾ ಸಹಚರಂ ಸೋಽತ್ರ ತಂ ಬುದ್ಧಿವರಮಭ್ಯಧಾತ್ ॥ ೩೮

ಅರ್ಥಾರ್ಥಿನೀ ನ ಕಾಮೇಽಪಿ ವೇಶ್ಯಾ ರಜ್ಯತಿ ತಂ ವಿನಾ ।
ತಾಸಾಂ ಲೋಭೋ ಹಿ ವಿಧಿನಾ ದತ್ತೋ ನಿರ್ಮಾಯ ಯಾಚಕಾನ್ ॥ ೩೯

ಇಯಂ ಮದನಮಾಲಾ ತು ಭುಜ್ಯಮಾನೇ ಧನೇ ಮಯಾ ।
ನ ವಿರಜ್ಯತ್ಯತಿಸ್ನೇಹಾನ್ಮಯಿ ಪ್ರತ್ಯುತ ತುಷ್ಯತಿ ॥ ೪೦

ತದಸ್ಯಾಃ ಸಂಪ್ರತಿ ಕಥಂ ಕರೋಮಿ ಪ್ರತ್ಯುಪಕ್ರಿಯಾಮ್ ।
ಯೇನ ಕಾಮಂ ಪ್ರತಿಜ್ಞಾಪಿ ಕ್ರಮೇಣ ಮಮ ಸೇತ್ಸ್ಯತಿ ॥ ೪೧

೪೨. ಅದನ್ನು ಕೇಳಿ ಮಂತ್ರಿಯಾದ ಬುದ್ಧಿವರನು ರಾಜನಿಗೆ ಹೇಳಿದನು. "ಹಾಗಿದ್ದ ಪಕ್ಷದಲ್ಲಿ ತುಂಬ ಬೆಲೆಬಾಳುವ ರತ್ನಗಳನ್ನು ಉಡುಗೊರೆ ನೀಡು.

೪೩. ಭಿಕ್ಷುವಾದ ಪ್ರಪಂಚ ಬುದ್ಧಿಯು ನಿನಗೆ ತಂದುಕೊಟ್ಟ ರತ್ನಗಳಲ್ಲಿ ಕೆಲವನ್ನು ಇವಳಿಗೆ ಕೊಡು' ಎಂದು ಮಂತ್ರಿ ನುಡಿದಾಗ ರಾಜನು ಅವನಿಗೆ ಮರುನುಡಿದನು.

೪೪. ಎಲ್ಲ ರತ್ನಗಳನ್ನು ನೀಡಿದರೂ ಇವಳಿಗೆ ಏನು ಮಾಡಿದಂತೆಯೂ ಆಗದು. ಆದರೆ ಈ ಸಂಗತಿಯೊಂದಿಗೆ ಸಂಬಂಧಪಟ್ಟಂತೆ ಇದಕ್ಕೆ ಪರಿಹಾರವು ಇದಕ್ಕೆ ಬೇರೆಡೆ ಉಂಟು.

೪೫ ಅದನ್ನು ಕೇಳಿ ಮಂತ್ರಿಯೆಂದನು. "ಪ್ರಭು ನಿನಗೆ ಆ ಭಿಕ್ಷುವಿನಿಂದೇನಾಗಬೇಕು ? ಅವನು ನಿನ್ನ ಸೇವೆ ಮಾಡಿದ್ದಾನೆ ಎಂದೆಯಲ್ಲ ಆ ವೃತ್ತಾಂತವನ್ನು ಹೇಳು'

೪೬ ಬುದ್ಧಿವರ ಮಂತ್ರಿಯು ಹೀಗೆನ್ನಲು ಇದಕ್ಕೆ ಸಂಬಂಧಿಸಿದ ಕಥೆಯೊಂದನ್ನು ಬಣ್ಣಿಸುತ್ತೇನೆ ಕೇಳು ಎಂದನು.

೪೭ ""ಹಿಂದೆ ಪಾಟಲಿಪುತ್ರದಲ್ಲಿ ದಿನವೂ ನನ್ನ ಆಸ್ಥಾನಕ್ಕೆ ಬಂದು ಪ್ರಪಂಚಬುದ್ಧಿ ಎಂಬ ಬೌದ್ಧ ಸಂನ್ಯಾಸಿಯೊಬ್ಬನು ಒಂದು ಸಂಪುಟವನ್ನು ಉಡುಗೊರೆ ನೀಡುತ್ತಿದ್ದನು.

---

ತತ್ಶ್ರುತ್ವಾ ತಂ ಬ್ರವೀತಿ ಸ್ಮ ಮಂತ್ರೀ ಬುದ್ಧಿವರೋ ನೃಪಮ್ ।
ಯದ್ಯೇವಂ ತದನರ್ಘಾಣಿ ಯಾನಿ ರತ್ನಾನ್ಯುಪಾಹರತ್ ॥ ೪೨

ಪ್ರಪಂಚಬುದ್ಧಿರ್ಭಿಕ್ಷುಸ್ತೇ ತೇಭ್ಯೋಽಸ್ಯೈ ದೇಹಿ ಕಾನಿಚಿತ್ ।
ಇತ್ಯುಕ್ತೋ ಮಂತ್ರಿಣಾ ತೇನ ರಾಜಾ ತಂ ಪ್ರತ್ಯಭಾಷತ ॥ ೪೩

ದತ್ತೈಃ ಸಮಗ್ರೈರಪಿ ತೈರ್ನಾಸ್ಯಾಃ ಕಿಂಚಿತ್ ಕೃತಂ ಭವೇತ್ ।
ಏತದ್ವೃತ್ತಾಂತಸಂಶ್ಲಿಷ್ಟಾ ಕಿಂ ತ್ವಸ್ಯಾನ್ಯತ್ರ ನಿಷ್ಕೃತಿಃ ॥ ೪೪

ತತ್ ಶ್ರುತ್ವಾ ಸೋಽಬ್ರವೀನ್ಮಂತ್ರೀ ದೇವ ಕಿಂ ತೇನ ಭಿಕ್ಷುಣಾ ।
ತ್ವತ್ಸೇವಾ ಸಾ ಕೃತೇತ್ಯೇಷ ತದ್ವೃತ್ತಾಂತಸ್ತ್ವಯೋಚ್ಯತಾಮ್ ॥ ೪೫

ಇತ್ಯುಕ್ತೋ ಮಂತ್ರಿಣಾ ತೇನ ರಾಜಾ ಬುದ್ಧಿವರೇಣ ಸಃ ।
ಜಗಾದ ಶೃಣು ತತ್ಕೈತಾಂ ತತ್ಕಥಾಂ ವರ್ಣಯಾಮಿ ತೇ ॥ ೪೬

ಪೂರ್ವಂ ಪಾಟಲಿಪುತ್ರೇ ಮೇ ಪ್ರವಿಶ್ಯಾಸ್ಥಾನಮನ್ವಹಮ್ ।
ಭಿಕ್ಷುಃ ಪ್ರಪಂಚಬುದ್ಧ್ಯಾಖ್ಯಃ ಸಮುದ್ಗಕಮುಪಾನಯತ್ ॥ ೪೭

೪೮. ನಾನು ಹಾಗೆಯೇ ಅದನ್ನು ಖಜಾನೆ ಅಧಿಕಾರಿಯ ಕೈಗೆ ಅದನ್ನು ತೆರೆಯದೆಯೇ ನೀಡುತ್ತಿದ್ದೆ. ಹಾಗೆಯೇ ಒಂದು ವರ್ಷದವರೆಗೂ ನಡೆಯಿತು.

೪೯. ಒಮ್ಮೆ ಆ ಭಿಕ್ಷುವು ನೀಡಿದ ಸಂಪುಟವು ವಿಧಿವಶದಿಂದಾಗಿ ನನ್ನ ಕೈಯಿಂದ ನೆಲಕ್ಕೆ ಬಿದ್ದು ಎರಡು ಹೋಳಾಯಿತು.

೫೦. ಅದರಿಂದ ಬೆಂಕಿಯಂತೆ ಬೆಳಗುತ್ತ ಮಹಾರತ್ನವೊಂದು ಹೊರಬಿದ್ದಿತು. ಅದುವರೆಗೆ ನಾನು ಅರಿಯದ ಅದರ ಹೃದಯವನ್ನು ಅದು ತೋರಿಸಿತು.

೫೧. ಅದನ್ನು ನೋಡಿ ಉಳಿದ ಎಲ್ಲ ಭರಣಿಗಳನ್ನೂ ತರಿಸಿ ಒಡೆದು ನೋಡಿ ಎಲ್ಲದರಿಂದಲೂ ರತ್ನಗಳನ್ನು ತೆಗೆದುಕೊಂಡೆನು.

೫೨. ಆಗ ಆಶ್ಚರ್ಯದಿಂದ ನಾನು ಆ ಪ್ರಪಂಚಬುದ್ಧಿಯನ್ನು ಕೇಳಿದೆನು. "ಇದೇನು? ನನ್ನನ್ನೇಕೆ ಇಂತಹ ರತ್ನಗಳಿಂದ ಓಲೈಸುತ್ತಿರುವೆ ?'

೫೩–೫೪. ಆಗ ಎಲ್ಲ ಜನರನ್ನೂ ಹೊರಕ್ಕೆ ಕಳಿಸಿ ಭಿಕ್ಷುವು ನನಗೆ ಹೇಳಿದನು. "ಇದೇ ಬರುವ ಕೃಷ್ಣಪಕ್ಷದ ಚತುರ್ದಶಿಯಂದು ರಾತ್ರಿಯಾದ ಮೇಲೆ ಸ್ಮಶಾನದಲ್ಲಿ ನಾನೊಂದು ವಿದ್ಯೆಯನ್ನು ಕೈವಶಮಾಡಿಕೊಳ್ಳಬೇಕಾಗಿದೆ. ಆಗ ವೀರನಾದ ನೀನು ಹೊರಗಡೆ ಸಹಾಯಕನಾಗಿ ಬರಬೇಕೆಂದು ನನ್ನ ಪ್ರಾರ್ಥನೆ.

---

ಅಹಂ ತಥೈವ ಸತತಂ ವರ್ಷಮಾತ್ರಂ ಸಮರ್ಪಯನ್ ।
ಭಾಂಡಾಗಾರಿಕಹಸ್ತೇ ತದನುದ್ಘಾಟಿತಮೇವ ಸತ್ ॥ ೪೮

ಏಕದಾ ಭಿಕ್ಷುಣಾ ತೇನ ಢೌಕಿತಂ ತತ್ಸಮುದ್ಗಕಮ್ ।
ದೈವಾತ್ಪಾಣೇರ್ಮಮ ಪತದ್ದ್ವಿಧಾಭೂತಮಭೂದ್ಭುವಿ ॥ ೪೯

ನಿರಗಾಚ್ಚ ಮಹಾರತ್ನಂ ತಸ್ಮಾದನಲಭಾಸುರಮ್ ।
ಪ್ರಾಙ್ಮಯೇವಾಪರಿಜ್ಞಾತಂ ಹೃದಯಂ ತೇನ ದರ್ಶಿತಮ್ ॥ ೫೦

ತದ್ದೃಷ್ಟ್ವಾದಾಯ ಚಾನ್ಯಾನಿ ತಾನ್ಯಾನಾಯ್ಯ ವಿಭಜ್ಯ ಚ ।
ಸಮುದ್ಗಕಾನಿ ಸರ್ವೇಭ್ಯೋ ರತ್ನಾನ್ಯಹಮವಾಪ್ತವಾನ್ ॥ ೫೧

ತತಃ ಪ್ರಪಂಚಬುದ್ಧಿಂ ತಮಪ್ರಾಕ್ಷಂ ವಿಸ್ಮಯಾದಹಮ್ ।
ಕಿಮಹೋ ಸೇವಸೇ ರತ್ನೈರೇವಂ ಮಾಮೀದೃಶೈರಿತಿ ॥ ೫೨

ಅಥಾತ್ರ ವಿಜನಂ ಕೃತ್ವಾ ಸ ಭಿಕ್ಷುರ್ಮಾಮವೋಚತ ।
ಅಸ್ಯಾಂ ಕೃಷ್ಣಚತುರ್ದಶ್ಯಾಮಾಗಾಮಿನ್ಯಾಂ ನಿಶಾಗಮೇ ॥ ೫೩

ಶ್ಮಶಾನೇ ಸಾಧನೀಯಾ ಮೇ ವಿದ್ಯಾ ಕಾಚಿತ್ತತೋ ಬಹಿಃ ।
ತತ್ರ ಸಾಹಾಯಕೇ ವೀರ ತ್ವದಾಗಮನಮರ್ಥಯೇ ॥ ೫೪

೫೫. ವೀರರ ಸಹಾಯದಿಂದ ಸಿದ್ಧಿಗಳು ನಿರ್ವಿಘ್ನವಾಗಿ ಸುಲಭವಾಗಿ ದಕ್ಕುವವಷ್ಟೆ!' ಹೀಗೆ ಅವನೆನ್ನಲು ನಾನು ಅದಕ್ಕೆ ಒಪ್ಪಿಕೊಂಡೆನು.

೫೬. ಅವನು ಸಂತುಷ್ಟನಾಗಿ ಹೋದ ಮೇಲೆ ಕ್ರಮೇಣ ಕೃಷ್ಣಚತುರ್ದಶೀ ದಿನವು ಬಂದಿತು. ನಾನು ಶ್ರಮಣನ ಮಾತನ್ನು ನೆನಪಿಸಿಕೊಂಡೆನು.

೫೭. ಅನಂತರ ಆಹ್ನಿಕವನ್ನು ಮಾಡಿ ಸಂಜೆ ವೇಳೆಯನ್ನು ಕಾಯುತ್ತಾ ಸಂಧ್ಯಾವಂದನೆ ಮುಗಿಸಿದ ನಾನು ದೈವವಶಾತ್ ಬೇಗನೆ ನಿದ್ರೆಹೋದೆನು.

೫೮. ಆ ಕೂಡಲೇ ಗರುಡನ ಮೇಲೆ ಕುಳಿತಿದ್ದ, ಮಡಿಲಲ್ಲಿ ಲಕ್ಷ್ಮಿಯನ್ನು ಕುಳ್ಳಿರಿಸಿಕೊಂಡಿದ್ದ ಭಗವಂತನಾದ ವಿಷ್ಣುವು ನನ್ನ ಸ್ವಪ್ನದಲ್ಲಿ ಬಂದು ನನಗೆ ಹೀಗೆ ಆದೇಶಮಾಡಿದನು.

೫೯. 'ಮಗನೇ! ಅನ್ವರ್ಥವಾದ ಹೆಸರುಳ್ಳ ಈ ಪ್ರಪಂಚಬುದ್ಧಿಯು ಸ್ಮಶಾನಕ್ಕೆ ಒಯ್ದು ನಿನ್ನನ್ನು ಮಂಡಲಪೂಜೆಯಲ್ಲಿ ಬಲಿಕೊಡಲಿದ್ದಾನೆ.

೬೦. ಆದ್ದರಿಂದ ನಿನ್ನನ್ನು ಕೊಲ್ಲಬಯಸುವ ಅವನು ಹೇಳಿದ್ದನ್ನು ಮಾಡಬೇಡ. ಮೊದಲು ನೀನು ಮಾಡು, ಆಮೇಲೆ ಕಲಿತುಕೊಂಡು ನಾನು ಮಾಡುತ್ತೇನೆ ಎಂದು ಹೇಳಬೇಕು.

೬೧. ಆಗ ಅವನು ಹಾಗೆಯೇ ಮಾಡುತ್ತಿರುವಾಗ ಸಮಯ ಸಾಧಿಸಿ ಕೂಡಲೇ ಅವನನ್ನು ಕೊಲ್ಲಬೇಕು. ಅವನು ಆಸೆಪಟ್ಟಿರುವ ಸಿದ್ಧಿಯು ನಿನಗೇ ಪ್ರಾಪ್ತವಾಗುತ್ತದೆ.'

---

ವೀರ ಸಾಹಾಯ್ಯನಿರ್ವಿಘ್ನಾಃ ಸುಖಲಭ್ಯಾ ಹಿ ಸಿದ್ಧಯಃ ।
ಇತ್ಯುಕ್ತೋ ಭಿಕ್ಷುಣಾ ತೇನ ತದಹಂ ಪ್ರತಿಪನ್ನವಾನ್ ॥ ೫೫

ಅಥ ಹೃಷ್ಟೇ ಗತೇ ತಸ್ಮಿನ್ ದಿನೈಃ ಕೃಷ್ಣಚತುರ್ದಶೀ ।
ಆಗಾತ್ಸಾ ಶ್ರಮಣಸ್ಯಾಸ್ಯ ತಸ್ಯಾಸ್ಮಾರ್ಷಮಹಂ ವಚಃ ॥ ೫೬

ತತಃ ಕೃತಾಹ್ನಿಕೋ ಭೂತ್ವಾ ಪ್ರದೋಷಂ ಪ್ರತಿಪಾಲಯನ್ ।
ಕೃತಸಂಧ್ಯಾವಿಧಿರ್ದೈವಾತ್ ಕ್ಷಿಪ್ರಂ ನಿದ್ರಾಮಗಾಮಹಮ್ ॥ ೫೭

ತತ್ಕ್ಷಣಂ ಗರುಡಾರೂಢೋ ಭಗವಾನ್ ಭಕ್ತವತ್ಸಲಃ ।
ಹರಿಃ ಪದ್ಮಾಂಕಿತೋತ್ಸಂಗಃ ಸ್ವಪ್ನೇ ಮಾಮೇವಮಾದಿಶತ್ ॥ ೫೮

ಪ್ರಪಂಚಬುದ್ಧಿರನ್ವರ್ಥನಾಮಾಯಂ ಮಂಡಲಾರ್ಚನೇ ।
ಪುತ್ರ ಶ್ಮಶಾನೇ ನೀತ್ವಾ ತ್ವಾಮುಪಹಾರೀಕರಿಷ್ಯತಿ ॥ ೫೯

ಅತೋ ವಕ್ಷ್ಯತಿ ಯತ್ಸ ತ್ವಾಂ ಜಿಘಾಂಸುರ್ಮಾಸ್ಮ ತತ್ ಕೃಥಾಃ ।
ತ್ವಂ ಪೂರ್ವಂ ಕುರು ಶಿಕ್ಷಿತ್ವಾ ಕರಿಷ್ಯಾಮೀತಿ ತಂ ವದೇಃ ॥ ೬೦

ತತಸ್ತಥಾ ತಂ ಕುರ್ವಾಣಂ ತಚ್ಛಿದ್ರೇಣೈವ ತತ್ಕ್ಷಣಮ್ ।
ಹನ್ಯಾಸ್ತ್ವಂ ತದಭಿಪ್ರೇತಾ ಸಿದ್ಧಿಸ್ತವ ಭವಿಷ್ಯತಿ ॥ ೬೧

೬೨. ಇಷ್ಟು ಹೇಳಿ ವಿಷ್ಣುವು ಅಂತರ್ಧಾನನಾಗಲು ಎಚ್ಚರಗೊಂಡ ನಾನು ಆಲೋಚನೆ ಮಾಡಿದೆನು. ಹರಿಯ ಅನುಗ್ರಹದಿಂದ ಇಂದು ಆ ಮಾಯಾವಿಯು ವಧೆಗೆ ಅರ್ಹನೆಂದು ತಿಳಿಯಿತು.

೬೩. ಹೀಗೆ ಯೋಚಿಸಿ, ರಾತ್ರಿಯ ಮೊದಲ ಜಾವವು ಕಳೆದಾಗ ಕೈಯಲ್ಲಿ ಖಡ್ಗಹಿಡಿದು ಒಬ್ಬನೇ ಆ ಸ್ಮಶಾನಕ್ಕೆ ಹೋದೆನು.

೬೪. ಅಲ್ಲಿ ಭಿಕ್ಷುವು ಮಂಡಲಾರ್ಚನೆ ಮಾಡಿರುವುದನ್ನು ಕಂಡು ಅವನ ಬಳಿಗೆ ಹೋದೆನು. ಆ ಶಠನು ನನ್ನನ್ನು ನೋಡಿ ಅಭಿನಂದಿಸಿ ಹೀಗೆ ಹೇಳಿದನು.

೬೫. "ರಾಜನೇ! ಕಣ್ಣು ಮುಚ್ಚಿಕೊಂಡು ಮೈಯನ್ನು ಚಾಚಿ ನೆಲದ ಮೇಲೆ ಮುಖಮಾಡಿ ಬೀಳು. ಹೀಗೆ ಮಾಡಿದರೆ ನಮ್ಮಿಬ್ಬರಿಗೂ ಸಿದ್ಧಿಯುಂಟಾಗುವುದು.'

೬೬. ಆಗ ನಾನೆಂದೆನು. "ನೀನು ಮೊದಲು ಹಾಗೆ ಮಾಡಿ ನನಗೆ ತೋರಿಸಿಕೊಡು. ಅದನ್ನು ಕಲಿತು ನಾನೂ ಹಾಗೆಯೇ ಮಾಡುತ್ತೇನೆ.'

೬೭. ಅದನ್ನು ಕೇಳಿ ಮೂರ್ಖಶ್ರಮಣನು ಅಂತೆಯೇ ನೆಲದ ಮೇಲೆ ಬಿದ್ದನು. ನಾನು ಖಡ್ಗದಿಂದ ಪ್ರಹಾರ ಮಾಡಿ ಅವನ ತಲೆಯನ್ನು ಕತ್ತರಿಸಿದೆನು.

---

ಇತ್ಯುಕ್ತ್ವಾಂತರ್ಹಿತೇ ವಿಷ್ಣೌ ಪ್ರಬುದ್ಧೋಽಹಮಚಿಂತಯಮ್ ।
ಹರೇರನುಗ್ರಹಾಜ್‌ಜ್ಞಾತೋ ವಧ್ಯೋ ಮಾಯೀ ಮಯಾದ್ಯ ಸಃ ॥ ೬೨

ಏವಂ ವಿಚಿಂತ್ಯ ಯಾಮಿನ್ಯಾಃ ಪ್ರಥಮೇ ಪ್ರಹರೇ ಗತೇ ।
ಕೃಪಾಣಪಾಣಿರೇಕಾಕೀ ತತ್‌ಶ್ಮಶಾನಮಗಾಮಹಮ್ ॥ ೬೩

ತತ್ರ ದೃಷ್ಟ್ವಾ ತಮಭ್ಯಾಗಾಂ ಭಿಕ್ಷುಮರ್ಚಿತಮಂಡಲಮ್ ।
ಸೋಽಪಿ ವೀಕ್ಷ್ಯಾಭ್ಯನಂದನ್ಮಾಮಬ್ರವೀಚ್ಚ ತದಾ ಶಠಃ ॥ ೬೪

ಮೀಲಿತಾಕ್ಷಃ ಪ್ರಸಾರ್ಯಾಂಗಂ ಪತ ಭೂಮಾವವಾಙ್ಮುಖಃ ।
ರಾಜನ್ನೇವಂ ಭವೇತ್ ಸಿದ್ಧಿರ್ದ್ವಯೋರಪ್ಯಾವಯೋರಿತಿ ॥ ೬೫

ತತೋಽಹಂ ಪ್ರತ್ಯವೋಚಂ ತಂ ತ್ವಮೇವಂ ಪ್ರಥಮಂ ಕುರು ।
ಮಹ್ಯಂ ದರ್ಶಯ ಶಿಕ್ಷಿತ್ವಾ ವಿಧಾಸ್ಯಾಮಿ ತಥೈವ ತತ್ ॥ ೬೬

ತತ್‌ಶ್ರುತ್ವಾ ಶ್ರಮಣೋ ಮೂಢಸ್ತಥಾ ಭುವಿ ಸ ಚಾಪತತ್ ।
ಛಿನ್ನಂ ತಸ್ಯ ಚ ನಿಸ್ತ್ರಿಂಶಪ್ರಹಾರೇಣ ಮಯಾ ಶಿರಃ ॥ ೬೭

೬೮-೬೯. ಆಗ ಅಂತರಿಕ್ಷದಿಂದ ಅಶರೀರವಾಣಿಯು ಹೊರಹೊಮ್ಮಿತು : "ಎಲೈ ರಾಜನೇ ! ಒಳ್ಳೆಯದು. ನೀನು ಈ ಪಾಪಿ ಭಿಕ್ಷುವನ್ನು ಕಾಣಿಕೆಯಾಗಿ ನೀಡಿದ್ದೀಯೆ. ಇಂತಹ ಉಡುಗೊರೆಯಿಂದ ಇವನಿಗೆ ಏನು ಸಾಧ್ಯವಾಗುತ್ತಿತ್ತೋ ಅದು ಆಕಾಶಗಮನವೆಂಬ ಸಿದ್ಧಿ. ಅದು ನಿನಗೆ ಈಗ ಸಿದ್ಧಿಸಿದೆ. ಕಾಮಚಾರಿಯಾದ ಕುಬೇರನಾದ ನಾನು ನಿನ್ನ ಧೈರ್ಯದಿಂದ ಸಂತುಷ್ಟನಾಗಿದ್ದೇನೆ.

೭೦. ಆದ್ದರಿಂದ ನಮ್ಮಿಂದ ನೀನು ಬಯಸುವ ಇನ್ನೊಂದು ವರವನ್ನು ಪಡೆದುಕೋ' ಎನ್ನುತ್ತಾ ಅವನು ಪ್ರತ್ಯಕ್ಷನಾದನು. ನಾನು ಅವನನ್ನು ವಂದಿಸಿ ಹೇಳಿದೆನು:

೭೧. ಭಗವಂತನೇ! ಯಾವಾಗ ನಾನು ನಿನ್ನನ್ನು ನೆನಪಿಸಿಕೊಳ್ಳುವೆನೋ ಆಗ ಕೂಡಲೇ ಬಂದು ಉಪಯುಕ್ತವಾದ ವರವನ್ನು ನೀನು ಕೊಡುವಿಯಂತೆ'.

೭೨. ಹಾಗೆಯೇ ಆಗಲೆಂದು ನನಗೆ ಹೇಳಿ ಕುಬೇರನು ಕಣ್ಮರೆಯಾದನು. ಸಿದ್ಧಿಯನ್ನು ಪಡೆದ ನಾನು ವೇಗವಾಗಿ ನನ್ನ ಮನೆಗೆ ಹೋದೆನು.

೭೩. ಹೀಗೆ ನನ್ನ ಕಥೆಯನ್ನು ನಿನಗೆ ಹೇಳಿದ್ದೇನೆ. ಈಗ ಮದನಮಾಲೆಗೆ ಪ್ರತ್ಯುಪಕಾರವನ್ನು ಕುಬೇರನು ನನಗೆ ಮಾಡಿಕೊಡಬೇಕಾಗಿದೆ.

೭೪. ಆದ್ದರಿಂದ ಬುದ್ಧಿವರನೇ ! ರಾಜಪುತ್ರಪರಿವಾರವನ್ನು ವೇಷಮರೆಸಿ ಕರೆದುಕೊಂಡು ನೀನು ಪಾಟಲಿಪುತ್ರಕ್ಕೆ ಹೋಗು.

---

ಅಥಾಂತರಿಕ್ಷಾದುದಭೂದ್ಭಾರತೀ ಸಾಧು ಭೂಪತೇ ।
ತ್ವಯಾ ಹಿ ಭಿಕ್ಷುಃ ಪಾಪೋಽಯಮುಪಹಾರೀಕೃತೋಽದ್ಯ ಯತ್ ॥ ೬೮
ಯಾಸ್ಯ ಸಾಧ್ಯಾ ಭವೇತ್ಸಾ ತೇ ಸಿದ್ಧಾದ್ಯ ಗಗನೇ ಗತಿಃ ।
ಅಹಂ ಧೈರ್ಯೇಣ ತುಷ್ಟಸ್ತೇ ಕಾಮಚಾರೀ ಧನಾಧಿಪಃ ॥ ೬೯
ತದಸ್ಮತ್ತೋ ವೃಣೀಷ್ವಾನ್ಯಂ ವರಂ ಯಮಭಿವಾಂಛಸಿ ।
ಇತ್ಯುಕ್ತ್ವಾ ಪ್ರಕಟೀಭೂತಂ ಪ್ರಣಮ್ಯಾಹಂ ತಮಬ್ರವಮ್ ॥ ೭೦
ಯದಾ ತ್ವಾಮರ್ಥಯಿಷ್ಯೇಽಹಮುಪಯುಕ್ತಂ ತದಾ ವರಮ್ ।
ಸಂಸ್ಮೃತೋಪಸ್ಥಿತೋ ಭೂತ್ವಾ ಭಗವನ್ಮೇ ಪ್ರದಾಸ್ಯಸಿ ॥ ೭೧
ಏವಮಸ್ತ್ವಿತಿ ಮಾಮುಕ್ತ್ವಾ ತಿರೋಽಭೂತ್ಸ ಧನಾಧಿಪಃ ।
ಲಬ್ಧಸಿದ್ಧಿಶ್ಚ ರಭಸಾತ್ ಸ್ವಮಂದಿರಮಗಾಮಹಮ್ ॥ ೭೨
ಇತ್ಯುಕ್ತಸ್ತೇ ಸ್ವವೃತ್ತಾಂತಸ್ತತ್ಕುಬೇರವರೇಣ ಮೇ ।
ಕಾರ್ಯಾ ಮದನಮಾಲಾಯಾಸ್ತೇನಾಸ್ಯಾಃ ಪ್ರತ್ಯುಪಕ್ರಿಯಾ ॥ ೭೩
ತದ್ಬುದ್ಧಿವರ ಗಚ್ಛ ತ್ವಂ ತಾವತ್ ಪಾಟಲಿಪುತ್ರಕಮ್ ।
ವೇಷಚ್ಛನ್ನಂ ಸಮಾದಾಯ ರಾಜಪುತ್ರಪರಿಚ್ಛದಮ್ ॥ ೭೪

೭೫. ನಾನು ಪ್ರಿಯೆಗೆ ನವೀನವಾದ ಪ್ರತ್ಯುಪಕಾರವನ್ನು ಮಾಡಿ ಬರಲು ಹೋಗಿ ಅಲ್ಲಿಗೆ ಬರುತ್ತೇವೆ."

೭೬. ಹೀಗೆ ಅವನಿಗೆ ಹೇಳಿ ವಿಕ್ರಮಾದಿತ್ಯ ರಾಜನು ದಿನಕೃತ್ಯವನ್ನು ಮಾಡಿ ಪರಿವಾರದೊಂದಿಗೆ ಮಂತ್ರಿಯನ್ನು ಕಳುಹಿಸಿಕೊಟ್ಟನು.

೭೭. ಹಾಗೆಯೇ ಆಗಲೆಂದು ಅವನು ಹೋಗಲು ರಾಜನು ಒದಗಲಿರುವ ಪ್ರಿಯೆಯ ವಿಯೋಗದಿಂದ ಉತ್ಕಂಠಿತನಾಗಿ ಆ ರಾತ್ರಿಯನ್ನು ಮದನಮಾಲೆಯ ಜೊತೆಗೆ ಕಳೆದನು.

೭೮. ಅವಳು ದೂರವಾಗುತ್ತಿರುವುದನ್ನು ತನ್ನ ಅಂತರಾತ್ಮವು ಹೇಳುತ್ತಿದೆಯೇನೋ ಎಂಬಂತೆ ಅವನನ್ನು ಮತ್ತೆ ಮತ್ತೆ ಅಪ್ಪಿಕೊಂಡು ಉತ್ಕಂಠಿತಳಾಗಿ ಅಂದು ರಾತ್ರಿ ಅವಳೂ ನಿದ್ರೆ ಮಾಡಲಿಲ್ಲ.

೭೯. ಅನಂತರ ಬೆಳಿಗ್ಗೆ ರಾಜನು ಆವಶ್ಯಕ ಕೃತ್ಯಗಳನ್ನು ಮುಗಿಸಿ ಜಪಮಾಡುವ ನೆಪದಿಂದ ನಿತ್ಯದೇವಾರ್ಚನೆ ಮಾಡುವ ಕೊಠಡಿಯನ್ನು ಒಬ್ಬನೇ ಪ್ರವೇಶಿಸಿದನು.

೮೦. ಅಲ್ಲಿ ಕರೆದಕೂಡಲೇ ಪ್ರತ್ಯಕ್ಷವಾಗುವ ಕುಬೇರನನ್ನು ಬರಮಾಡಿಕೊಂಡು ನಮಸ್ಕರಿಸಿ ಹಿಂದೆ ಒಪ್ಪಿಕೊಂಡಿದ್ದಂತೆ ಈ ವರವನ್ನು ಬೇಡಿದನು.

---

ಅಹಂ ಚ ಕೃತ್ವಾ ಪ್ರತ್ಯಗ್ರಾಂ ಪ್ರಿಯಾಯಾಃ ಪ್ರತ್ಯುಪಕ್ರಿಯಾಮ್ ।
ಪುನರಾಗಮನಾಯೇಹ ತತ್ರೈವೈಷ್ಯಾಮಿ ಸಂಪ್ರತಿ ॥ ೭೫

ಏವಮುಕ್ತ್ವಾ ಸ ಸಚಿವಂ ವಿಕ್ರಮಾದಿತ್ಯಭೂಪತಿಃ ।
ದಿನಕೃತ್ಯಂ ಸ ಕೃತ್ವಾ ತಂ ವ್ಯಸೃಜತ್ ಸಪರಿಚ್ಛದಮ್ ॥ ೭೬

ತಥೇತಿ ಚ ಗತೇ ತಸ್ಮಿಂಸ್ತಾಂ ನಿನಾಯ ನಿಶಾಂ ನೃಪಃ ।
ಭಾವಿವಿಶ್ಲೇಷಸೋತ್ಕಂಠಃ ಸಮಂ ಮದನಮಾಲಯಾ ॥ ೭೭

ಸಾಪಿ ದೂರೀಭವಂತಂ ತಂ ಶಂಸತೇವಾಂತರಾತ್ಮನಾ ।
ಆಲಿಂಗಂತೀ ಮುಹುಃ ಸೋತ್ಕಾ ನಾಸ್ಯಾಂ ನಿದ್ರಾಮಗಾನ್ನಿಶಿ ॥ ೭೮

ತತಃ ಪ್ರಾತಃ ಸ ರಾಜಾ ತು ವಿಹಿತಾವಶ್ಯಕಕ್ರಿಯಃ ।
ನಿತ್ಯದೇವಾರ್ಚನಾಗಾರಂ ವಿವೇಶೈಕೋ ಜಪಚ್ಛಲಾತ್ ॥ ೭೯

ತತ್ರ ವೈಶ್ರವಣಂ ದೇವಂ ಸಂಸ್ಮೃತೋಪಸ್ಥಿತಂ ಚ ಸಃ ।
ವರಂ ಪ್ರಾಕ್ ಪ್ರತಿಪನ್ನಂ ತಂ ಪ್ರಣಮ್ಯೈವಮಯಾಚತ ॥ ೮೦

೮೧. "ದೇವ! ಒಪ್ಪಿಕೊಂಡಿದ್ದ ಪ್ರಕಾರ ಇಂದು ನೀನು ನನಗೆ ಇಲ್ಲಿ ಅಕ್ಷಯವಾಗುವ ದೊಡ್ಡವ ಪ್ರಮಾಣದ ಐದು ದೊಡ್ಡ ಚಿನ್ನದ ಮನುಷ್ಯರನ್ನು ನೀಡು.

೮೨. ಅಪೇಕ್ಷಿಸುವ ಸುಖೋಪಭೋಗಗಳನ್ನು ಪಡೆಯಲು ಅವರ ಅಂಗಾಂಗಗಳನ್ನು ಸತತ ಕತ್ತರಿಸುತ್ತಿದ್ದರೂ ಅಂತಹುದೇ ಅಂಗಾಂಗಗಳು ಮತ್ತೆ ಮತ್ತೆ ಹೆಚ್ಚುತ್ತಿರಬೇಕು.'

೮೩. "ನೀನು ಇಷ್ಟಪಡುವಂತೆಯೇ ಅದೇ ರೂಪದ ಐವರು ಪುರುಷರು ಆಗಲಿ' ಎಂದು ನುಡಿದು ಕುಬೇರನು ಕ್ಷಣದಲ್ಲಿ ಕಣ್ಮರೆಯಾದನು.

೮೪. ಕೂಡಲೇ ರಾಜನು ದೇವರ ಮನೆಯಲ್ಲಿ ಚಿನ್ನದ ಐವರು ದೊಡ್ಡ ಪುರುಷರು ಇದ್ದಕ್ಕಿದ್ದಂತೆ ಎಲ್ಲಿಂದಲೋ ಬಂದು ನಿಂತಿರುವುದನ್ನು ನೋಡಿದನು.

೮೫. ಆಮೇಲೆ ಹೊರಬಂದು ತನ್ನ ಪ್ರತಿಜ್ಞೆಯನ್ನು ಮರೆಯದೇ ಆಕಾಶಕ್ಕೆ ಜಿಗಿದು ಪಾಟಲಿಪುತ್ರವನ್ನು ಕುರಿತು ಹೊರಟನು.

೮೬. ಅಲ್ಲಿ ಅಮಾತ್ಯರು, ಪಟ್ಟಣಿಗರು, ಅಂತಃಪುರಸ್ತ್ರೀಯರೆಲ್ಲರಿಂದ ಅಭಿನಂದಿಸಲ್ಪಟ್ಟು ತನ್ನ ಕಾರ್ಯಗಳನ್ನು ಮಾಡುತ್ತಾ ಇದ್ದನು. ಅವನ ಮನಸ್ಸು ಮಾತ್ರ ಪ್ರತಿಷ್ಠಾನದಲ್ಲೇ ನೆಲೆಸಿತ್ತು.

೮೭. ಆ ವೇಳೆಗೆ ಇತ್ತ ಪ್ರತಿಷ್ಠಾನದಲ್ಲಿ ಮದನಮಾಲೆಯು, ಪೂಜಾಮಂದಿರವನ್ನು ಪ್ರಿಯತಮನು ಪ್ರವೇಶಿಸಿ ಬಹಳ ಹೊತ್ತಾಗಿದ್ದರಿಂದ ಅವನನ್ನು ಕಾಣಲು ಅಲ್ಲಿ ಒಳಹೊಕ್ಕಳು.

---

ಪ್ರಯಚ್ಛ ದೇವ ತೇನಾದ್ಯ ವರೇಣಾಂಗೀಕೃತೇನ ಮೇ ।
ಸೌವರ್ಣಾನ್ ಪಂಚ ಮಹತಃ ಪುರುಷಾಂಸ್ತಾನಿಹಾಕ್ಷಯಾನ್ ॥ ೮೧

ಯೇಷಾಮಿಷ್ಟೋಪಭೋಗಾಯ ಛಿದ್ಯಮಾನಾನ್ಯನಾರತಮ್ ।
ತಾದೃಶಾನ್ಯೇವ ಜಾಯಂತೇ ತಾನ್ಯಂಗಾನಿ ಪುನಃ ಪುನಃ ॥ ೮೨

ಏವಂ ಭವಂತು ತದ್ರೂಪಾಃ ಪುರುಷಾಸ್ತೇ ಯಥೇಚ್ಛಸಿ ।
ಇತ್ಯುಕ್ತ್ವಾ ಸ ಧನಾಧ್ಯಕ್ಷೋ ಜಗಾಮಾದರ್ಶನಂ ಕ್ಷಣಾತ್ ॥ ೮೩

ರಾಜಾಪಿ ತತ್ಕ್ಷಣಂ ಸೋಽತ್ರ ದೇವಾಗಾರೇ ದದರ್ಶ ತಾನ್ ।
ಸ್ಥಿತಾನಕಸ್ಮಾತ್ ಸೌವರ್ಣಾನ್ಮಹತಃ ಪಂಚ ಪೂರುಷಾನ್ ॥ ೮೪

ತತಃ ಪ್ರವಿಷ್ಟೋ ನಿರಗಾತ್ಸ್ವಾಂ ಪ್ರತಿಜ್ಞಾಮವಿಸ್ಮರನ್ ।
ದ್ಯಾಮುತ್ಪತ್ಯ ಯಯೌ ತಾವತ್ ಪುರಂ ಪಾಟಲಿಪುತ್ರಕಮ್ ॥ ೮೫

ತತ್ರಾಭಿನಂದಿತೋಽಮಾತ್ಯೈಃ ಪೌರೈರಂತಃಪುರೈಶ್ಚ ಸಃ ।
ತಸ್ಥೌ ಕಾರ್ಯಾಣಿ ಕುರ್ವಾಣಃ ಪ್ರತಿಷ್ಠಾನಸ್ಥಯಾ ಧಿಯಾ ॥ ೮೬

ತಾವಚ್ಚಾತ್ರ ಪ್ರತಿಷ್ಠಾನೇ ಪ್ರಾವಿಶತ್ತಸ್ಯ ಸಾ ಪ್ರಿಯಾ ।
ಚಿರಪ್ರವಿಷ್ಟಂ ತಂ ಕಾಂತಂ ವೀಕ್ಷಿತುಂ ದೇವಸದ್ಮ ತತ್ ॥ ೮೭

೮೮. ಆದರೆ ಅಲ್ಲಿ ಎಲ್ಲಿಯೂ ಪ್ರಿಯಕರನಾದ ರಾಜನು ಕಾಣಲಿಲ್ಲ. ಬದಲಾಗಿ ಎತ್ತರವಾದ ಚಿನ್ನದ ಐದು ಪುರುಷಾಕೃತಿಗಳನ್ನು ಕಂಡಳು.

೮೯. ಅವರನ್ನು ಕಂಡರೂ ಅವನನ್ನು ಕಾಣದೇ ದುಃಖಿತಳಾದ ಅವಳು ಚಿಂತಿಸಿದಳು: ನನ್ನ ಆ ಪ್ರಿಯಕರನು ಬಹುಶಃ ಯಾರೋ ವಿದ್ಯಾಧರನೋ ಅಥವಾ ಗಂಧರ್ವನೋ ಇರಬೇಕು.

೯೦. ಅವನು ಈ ಪುರುಷರೊಂದಿಗೆ ನನ್ನನ್ನು ಬಿಟ್ಟು ಹಾರಿ ಆಕಾಶಕ್ಕೆ ಹೋಗಿದ್ದಾನೆ. ಅವನಿಂದ ವಿಯೋಗ ಹೊಂದಿದ ನಾನು ಬರಿಯ ಭಾರಕ್ಕೆ ಸಮನಾದ ಇವರಿಂದ ಏನು ಮಾಡಲಿ ?

೯೧. ಹೀಗೆ ಆಲೋಚಿಸಿ ತನ್ನ ಊಳಿಗದವರನ್ನು ಅವನ ಬಗ್ಗೆ ಮತ್ತೆ ಮತ್ತೆ ಕೇಳುತ್ತಾ ಹೊರಬಂದು ಎಲ್ಲೆಡೆ ಅಲೆದಳು.

೯೨. ವಿಯೋಗದಿಂದ ದೀನಳಾಗಿ ಶರೀರವನ್ನು ತ್ಯಾಗಮಾಡುವ ಕಡೆ ಒಲವುಳ್ಳವಳಾಗಿ. ಪ್ರಾಸಾದ, ಉದ್ಯಾನ, ಮನೆ ಮುಂತಾದುವುಗಳಲ್ಲಿ ಆಸಕ್ತಿಯನ್ನು ಕಳೆದುಕೊಂಡಳು.

೯೩. "ಎಲೈ ದೇವಿಯೇ, ವಿಷಾದಪಟ್ಟುಕೊಳ್ಳಬೇಡ. ಆತನಾರೋ ಬೇಕಾದಂತೆ ಅಡ್ಡಾಡಬಲ್ಲವನು. ಆ ಒಡೆಯನು ಭವ್ಯಳಾದ ನಿನ್ನ ಬಳಿಗೆ ಇದ್ದಕ್ಕಿದ್ದಂತೆ ಬಂದೇ ಬರುತ್ತಾನೆ'

---

ಪ್ರವಿಷ್ಟಾ ತತ್ರ ನಾದ್ರಾಕ್ಷೀತ್ ಪ್ರಿಯಂ ತಂ ನೃಪತಿಂ ಕ್ವಚಿತ್ ।
ಅದ್ರಾಕ್ಷೀತ್ತು ಮಹೋಚ್ಛ್ರಾಯಾನ್ ಸೌವರ್ಣಾನ್ ಪಂಚ ಪೂರುಷಾನ್ ॥ ೮೮

ತಾನ್ ದೃಷ್ಟ್ವಾ ತಮನಾಸಾದ್ಯ ದುಃಖಿತಾ ಸಾ ವ್ಯಚಿಂತಯತ್ ।
ನೂನಂ ವಿದ್ಯಾಧರಃ ಕೋಽಪಿ ಗಂಧರ್ವೋ ವಾ ಸ ಮೇ ಪ್ರಿಯಃ ॥ ೮೯
ಯಃ ಸಂವಿಭಜ್ಯ ಮಾಮೇಭಿಃ ಪುಂಭಿರುತ್ಪತ್ಯ ಖಂ ಗತಃ ।
ತದೇತೈರ್ಭಾರತುಲ್ಯೈಃ ಕಿಂ ತದ್ವಿಯುಕ್ತಾ ಕರೋಮ್ಯಹಮ್ ॥ ೯೦
ಇತಿ ಸಂಚಿಂತ್ಯ ಪೃಚ್ಛಂತೀ ನಿಜಂ ಪರಿಜನಂ ಮುಹುಃ ।
ತತ್ಪ್ರವೃತ್ತಿಂ ವಿನಿರ್ಗತ್ಯ ತತ್ರ ಬಭ್ರಾಮ ಸರ್ವತಃ ॥ ೯೧
ನ ಚ ಲೇಭೇ ರತಿಂ ಕ್ವಾಪಿ ಹರ್ಮ್ಯೋದ್ಯಾನಗೃಹಾದಿಷು ।
ವಿಲಪಂತೀ ವಿಯೋಗಾರ್ತಾ ಶರೀರತ್ಯಾಗಸಂಮುಖೀ ॥ ೯೨
ಮಾ ವಿಷಾದಂ ಕೃಥಾ ದೇವಿ ಕೋಽಪಿ ಕಾಮಚರೋ ಹಿ ಸಃ ।
ದೇವೋ ಯದೃಚ್ಛಯಾ ಭೂಯೋ ಭವ್ಯಾಂ ತ್ವಾಮಭ್ಯುಪೈಷ್ಯತಿ ॥ ೯೩

೯೪. ಮುಂತಾಗಿ ಪರಿಜನರು ಆಶ್ವಾಸನೆಯುಂಟುಮಾಡುವ ಮಾತುಗಳಿಂದ ಸಮಾಧಾನ ಪಡಿಸಿದರೂ ಅವಳಂತೂ ಹೀಗೆ ಪ್ರತಿಜ್ಞೆ ಮಾಡಿದಳು.

೯೫. ಆರು ತಿಂಗಳ ಒಳಗೆ ಅವನು ನನಗೆ ದರ್ಶನ ನೀಡದೇ ಇದ್ದರೆ ಎಲ್ಲವನ್ನೂ ದಾನಮಾಡಿ ನಾನು ಅಗ್ನಿಪ್ರವೇಶ ಮಾಡುತ್ತೇನೆ.

೯೬. ಹೀಗೆ ಶಪಥತೊಟ್ಟು ತನ್ನನ್ನು ತಾನೇ ತಡೆದುಕೊಂಡು, ದಿನವೂ ದಾನಮಾಡುತ್ತಾ, ತನ್ನ ಪ್ರಿಯಕರನನ್ನೇ ಧ್ಯಾನ ಮಾಡುತ್ತಾ ಇದ್ದಳು.

೯೭. ಒಮ್ಮೆ ಆ ಚಿನ್ನದ ಪುರುಷರಲ್ಲಿ ಒಬ್ಬಾತನ ತೋಳುಗಳನ್ನು ಕತ್ತರಿಸಿ, ದಾನವೊಂದರಲ್ಲೇ ನೆಟ್ಟ ಮನಸ್ಸುಳ್ಳ ಆಕೆಯು ಬ್ರಾಹ್ಮಣರಿಗೆ ದಾನನೀಡಿದಳು.

೯೮. ಮಾರನೆಯ ದಿನ ಅಂತಹದೇ ತೋಳುಗಳು ಅವನಿಗೆ ರಾತ್ರಿಯಲ್ಲಿ ಬೆಳೆದಿರುವುದನ್ನು ನೋಡಿ ಅವಳು ಬೆರಗಾದಳು.

೯೯. ಆಮೇಲೆ ಕ್ರಮವಾಗಿ ಅವಳು ಇನ್ನಿತರರ ತೋಳುಗಳನ್ನು ದಾನ ನೀಡಲು ಕತ್ತರಿಸಿದಳು. ಆದರೆ ಎಲ್ಲರಿಗೂ ಹಾಗೆಯೇ ತೋಳುಗಳು ಮತ್ತೆ ಉಂಟಾದವು.

೧೦೦. ಅವು ಅಕ್ಷಯವಾಗುವುದನ್ನು ಕಂಡು ಆ ಮಂಗಳೆಯು ಬ್ರಾಹ್ಮಣರಿಗೂ ವಿದ್ಯಾರ್ಥಿಗಳಿಗೂ ನಾಲ್ಕರ ಸಂಖ್ಯೆಯಲ್ಲಿ ಪ್ರತಿದಿನ ಅವರ ತೋಳುಗಳನ್ನು ಕತ್ತರಿಸಿ ನೀಡಿದಳು.

---

ಇತ್ಯಾದಿಭಿಃ ಪ್ರದತ್ತಾಸ್ಥೈರ್ವಾಕ್ಯೈಃ ಪರಿಜನೇನ ಸಾ ।
ಆಶ್ವಾಸಿತಾ ಕಥಮಪಿ ಪ್ರತಿಜ್ಞಾಮಕರೋದಿಮಾಮ್ ॥ ೯೪

ಷಣ್ಮಾಸಮಧ್ಯೇ ಯದಿ ಮೇ ನ ಸ ದಾಸ್ಯತಿ ದರ್ಶನಮ್ ।
ದತ್ತಸರ್ವಸ್ವಯಾ ವಹ್ನೌ ಪ್ರವೇಷ್ಟವ್ಯಂ ತತೋ ಮಯಾ ॥ ೯೫

ಇತಿ ಪ್ರತಿಜ್ಞಯಾತ್ಮಾನಂ ಸಂಸ್ತಭ್ಯಾಭೂತ್ತ ತಚ್ಚ ಸಾ ।
ಅನ್ವಹಂ ದದತೀ ದಾನಂ ಧ್ಯಾಯಂತೀ ತಂ ಸ್ವವಲ್ಲಭಮ್ ॥ ೯೬

ಏಕದಾ ಸ್ವರ್ಣಪುಂಸಾಂ ಚ ತೇಷಾಮೇಕಸ್ಯ ಸಾ ಭುಜೌ ।
ಛೇದಯಿತ್ವಾ ದ್ವಿಜಾತಿಭ್ಯೋ ದದೌ ದಾನೈಕತತ್ಪರಾ ॥ ೯೭

ದ್ವಿತೀಯೇಽಹ್ನಿ ಚ ಸಾದ್ರಾಕ್ಷೀತ್ ತಾದೃಶಾವೇವ ತಸ್ಯ ತೌ ।
ರಾತ್ರಿಮಧ್ಯೇ ಸಮುತ್ಪನ್ನೌ ಭುಜೌ ಸಂಜಾತವಿಸ್ಮಯಾ ॥ ೯೮

ತತಃ ಕ್ರಮೇಣ ಸಾನ್ಯೇಷಾಂ ಭುಜೌ ದಾನಾರ್ಥಮಚ್ಛಿನತ್ ।
ಉತ್ಪೇದಿರೇ ಚ ಸರ್ವೇಷಾಂ ಪುನಸ್ತೇಷಾಂ ತಥೈವ ತೇ ॥ ೯೯

ಅಥ ತಾನಕ್ಷಯಾನ್ದೃಷ್ಟ್ವಾ ವಿಪ್ರೇಭ್ಯೋ ವೇದಸಂಖ್ಯಯಾ ।
ಅಧ್ಯೇತೃಭ್ಯೋ ದದೌ ಛಿತ್ತ್ವಾ ತದ್ಭುಜಾನ್ಸಾ ಶುಭಾನ್ವಹಮ್ ॥ ೧೦೦

೧೦೧. ಕೆಲವೇ ದಿನಗಳಲ್ಲಿ ಅವಳ ಖ್ಯಾತಿಯನ್ನು ಕೇಳಿ ಸಂಗಮದತ್ತನೆಂಬ ಬ್ರಾಹ್ಮಣನೊಬ್ಬನು ಪಾಟಲಿಪುತ್ರದಿಂದ ಅಲ್ಲಿಗೆ ಬಂದನು.

೧೦೨. ಆತನು ನಾಲ್ಕೂ ವೇದಗಳನ್ನು ಓದಿ ಗುಣಶಾಲಿಯಾಗಿದ್ದನು. ಆದರೂ ಬಡವ. ಅವಳ ಬಳಿಗೆ ಬೇಡಲು ಬಂದಾಗ ಬಾಗಿಲು ಕಾಯುವವರು ತಿಳಿಸಿದ ಮೇಲೆ ಒಳಗಡೆ ಪ್ರವೇಶಿಸಿದನು.

೧೦೩. ವ್ರತಾಚರಣೆಯಿಂದ ಕೃಶವಾಗಿದ್ದ ಹಾಗೂ ವಿರಹದಿಂದ ಬಿಳಿಚಿಕೊಂಡಿದ್ದ ಕೈಗಳಿಂದ ಅವಳು ಅವನನ್ನು ಪೂಜಿಸಿ ಚಿನ್ನದ ಪುರುಷರ ನಾಲ್ಕು ತೋಳುಗಳನ್ನು ಕೊಟ್ಟಳು.

೧೦೪–೧೦೫. ಆ ವಿಪ್ರನು ದುಃಖಾರ್ತರಾಗಿದ್ದ ಊಳಿಗದವರಿಂದ ಮದನಮಾಲೆಯು ಘೋರವಾದ ಪ್ರತಿಜ್ಞೆಯವರೆಗಿನ ಕಥೆಯನ್ನು ಪೂರ್ತಿಯಾಗಿ ಕೇಳಿ ಸಂತುಷ್ಟನಾಗಿ, ವಿಷಾದವನ್ನೂ ಹೊಂದಿ ಎರಡು ಒಂಟೆಗಳ ಮೇಲೆ ಚಿನ್ನದ ತೋಳುಗಳನ್ನು ಹೊರಿಸಿಕೊಂಡು ಪಾಟಲಿಪುತ್ರಕ್ಕೆ ತನ್ನ ಮನೆಗೆ ಹೋದನು.

೧೦೬–೧೦೭. ರಾಜರಕ್ಷಿತವಲ್ಲದ ಜಾಗದಲ್ಲಿ ಚಿನ್ನವನ್ನು ಕಾಪಾಡಿಕೊಳ್ಳುವುದು ಕಷ್ಟವೆಂದು ಆಲೋಚಿಸಿದ ಅವನು ಅಲ್ಲಿನ ಆಸ್ಥಾನವನ್ನು ಪ್ರವೇಶಿಸಿ ಅಲ್ಲಿದ್ದ ವಿಕ್ರಮಾದಿತ್ಯ ರಾಜನಿಗೆ ಹೀಗೆ ಬಿನ್ನವಿಸಿದನು. ""ರಾಜನೇ, ನಾನು ಇದೇ ಊರಿನಲ್ಲಿ ವಾಸಿಸುತ್ತಿರುವ ಒಬ್ಬ ಬ್ರಾಹ್ಮಣನಾಗಿದ್ದೇನೆ.

---

ದಿನೈಶ್ಚಾಲ್ಪೈರ್ಗತಾಂ ದಿಕ್ಷು ಶ್ರುತ್ವಾ ತಾಂ ಖ್ಯಾತಿಮಾಯಯೌ ।
ತತ್ರ ಸಂಗ್ರಾಮದತ್ತಾಖ್ಯೋ ವಿಪ್ರಃ ಪಾಟಲಿಪುತ್ರಕಾತ್ ॥ ೧೦೧

ಸ ದರಿದ್ರಶ್ಚತುರ್ವೇದೋ ಗುಣೈರ್ಯುಕ್ತಸ್ತದಂತಿಕಮ್ ।
ಪ್ರತಿಗ್ರಹಾರ್ಥೀ ಪ್ರಾವಿಕ್ಷತ್ತದಾ ದ್ವಾಃಸ್ಥನಿವೇದಿತಃ ॥ ೧೦೨

ಸಾ ತಸ್ಮೈ ವೇದಸಂಖ್ಯಾಕಾನ್ ದದೌ ಸೌವರ್ಣಪುಂಭುಜಾನ್ ।
ಅರ್ಚಿತಾಯ ವ್ರತಕ್ಷಾಮೈರಂಗೈರ್ವಿರಹಪಾಂಡುರೈಃ ॥ ೧೦೩

ತತಃ ಸ ವಿಪ್ರೋ ದುಃಖಾರ್ತಾತ್ ಶ್ರುತ್ವಾ ತತ್ಪರಿವಾರತಃ ।
ತದ್ವೃತ್ತಾಂತಂ ಮಹಾಘೋರಪ್ರತಿಜ್ಞಾಂತಮಶೇಷತಃ ॥ ೧೦೪

ಹೃಷ್ಟೋ ವಿಷಣ್ಣಶ್ಚಾರೋಪ್ಯ ಸೌವರ್ಣಾನುಷ್ಟ್ರಯೋರ್ದ್ವಯೋಃ ।
ಭುಜಾನೇತಾನ್ನಿವಾಸಂ ಸ್ವಂ ಯಯೌ ಪಾಟಲಿಪುತ್ರಕಮ್ ॥ ೧೦೫

ಅರಾಜರಕ್ಷಿತೇ ಕ್ಷೇಮಂ ನಾಸ್ಮಿನ್ ಮೇ ಕಾಂಚನೇ ಭವೇತ್ ।
ಇತಿ ತತ್ರ ಸ ಸಂಚಿಂತ್ಯ ಪ್ರವಿಶ್ಯಾಸ್ಥಾನವರ್ತಿನಮ್ ॥ ೧೦೬

ನೃಪತಿಂ ವಿಕ್ರಮಾದಿತ್ಯಂ ಬ್ರಾಹ್ಮಣಃ ಸ ವ್ಯಜಿಜ್ಞಪತ್ ।
ಇಹೈವಾಸ್ಮಿ ಮಹಾರಾಜ ವಾಸ್ತವ್ಯೋ ನಗರೇ ದ್ವಿಜಃ ॥ ೧೦೭

೧೦೮. ಬಡವನಾದ ನಾನು ಹಣ ಬೇಡಲೆಂದು ದಕ್ಷಿಣಾಪಥಕ್ಕೆ ಹೋಗಿದ್ದೆನು. ಅಲ್ಲಿ ನರಸಿಂಹ ರಾಜನ ಊರಾದ ಪ್ರತಿಷ್ಠಾನವು ಸಿಕ್ಕಿತು.

೧೦೯. ಅಲ್ಲಿ ಪ್ರಸಿದ್ಧವಾದ ಕೀರ್ತಿಯುಳ್ಳ ಮದನಮಾಲೆಯೆಂಬ ವೇಶ್ಯೆಯ ಮನೆಗೆ ದಾನ ಬೇಡಲು ಹೋಗಿದ್ದೆನು.

೧೧೦. ಅವಳ ಬಳಿ ಯಾರೋ ದಿವ್ಯ ಪುರುಷನು ಬಹಳ ಕಾಲವಿದ್ದು, ಅಕ್ಷಯರಾದ ಐವರು ಚಿನ್ನದ ಪುರುಷರನ್ನು ಕೊಟ್ಟು ಎಲ್ಲಿಗೋ ಹೋಗಿಬಿಟ್ಟನು.

೧೧೧–೧೧೨. ಆಗ ಅವನ ವಿಯೋಗದಿಂದ ಬಳಲಿದ ಆಕೆಯು ತನ್ನ ಬಾಳನ್ನು ವಿಷವೇದನೆಯೆಂದೂ ದೇಹವನ್ನು ವ್ಯರ್ಥವಾದ ಶ್ರಮವೆಂದೂ ಮತ್ತು ಆಹಾರವನ್ನು ಘೋರವಾದ ಯಾತನೆಯೆಂದೂ ಭಾವಿಸುತ್ತಿರುವವಳಾಗಿ, ಧೈರ್ಯ ಉಡುಗಿ, ಪರಿಜನರಿಂದ ಹೇಗೋ ಸಮಾಧಾನಗೊಳಿಸಲ್ಪಟ್ಟು ಹೀಗೆ ಪ್ರತಿಜ್ಞೆ ಮಾಡಿರುವಳು.

೧೧೩. "ಆರು ತಿಂಗಳೊಳಗೆ ಆತನೇನಾದರೂ ಬಂದು ಕಾಣದೇ ಇದ್ದರೆ ದುರದೃಷ್ಟಶಾಲಿನಿಯಾದ ನಾನು ಆಗ ಅಗ್ನಿಪ್ರವೇಶ ಮಾಡುತ್ತೇನೆ.'

೧೧೪. ಹೀಗೆ ಶಪಥಗೈದಿರುವ ಅವಳು ಸಾವಿಗೆ ಸಿದ್ಧಳಾಗಿದ್ದು, ಪುಣ್ಯಪಡೆಯಲು ಇಚ್ಛಿಸುತ್ತ ಪ್ರತಿದಿನ ಅಪಾರವಾಗಿ ದಾನವನ್ನು ನೀಡುತ್ತಿದ್ದಾಳೆ.

---

ಸೋऽಹಂ ದರಿದ್ರೋ ವಿತ್ತಾರ್ಥೀ ಪ್ರಯಾತೋ ದಕ್ಷಿಣಾಪಥಮ್ ।
ಪ್ರಾಪ್ತಃ ಪುರಂ ಪ್ರತಿಷ್ಠಾನಂ ನರಸಿಂಹಸ್ಯ ಭೂಪತೇಃ ॥ ೧೦೮

ತತ್ರ ಪ್ರತಿಗ್ರಹಾರ್ಥೀ ಸನ್ ಪ್ರಖ್ಯಾತಯಶಸೋಗೃಹಮ್ ।
ಅಹಂ ಮದನಮಾಲಾಯಾ ಗಣಿಕಾಯಾ ಗತೋऽಭವಮ್ ॥ ೧೦೯

ತಸ್ಯಾಃ ಸಕಾಶೇ ದಿವ್ಯೋ ಹಿ ಕೋऽಪ್ಯುಷಿತ್ವಾ ಚಿರಂ ಪುಮಾನ್ ।
ಗತಃ ಕ್ವಾಪ್ಯಕ್ಷಯಾನ್ ದತ್ವಾ ಪುರುಷಾನ್ ಪಂಚ ಕಾಂಚನಾನ್ ॥ ೧೧೦

ತತಸ್ತದ್ವಿಪ್ರಯೋಗಾರ್ತಾ ಜೀವಿತಂ ವಿಷವೇದನಾಮ್ ।
ದೇಹಂ ನಿಷ್ಫಲಮಾಯಾಸಮಾಹಾರಂ ಘೋರಯಾತನಾಮ್ ॥ ೧೧೧

ಮನ್ಯಮಾನಾ ಗತಧೃತಿಃ ಕಥಂಚಿದನುಜೀವಿಭಿಃ ।
ಆಶ್ವಾಸ್ಯಮಾನಾ ವ್ಯಧಿತ ಪ್ರತಿಜ್ಞಾಂ ಸಾ ಮನಸ್ವಿನೀ ॥ ೧೧೨

ಯದಿಷಣ್ಮಾಸಮಧ್ಯೇ ಮಾಂ ನ ಸ ಸಂಭಾವಯಿಷ್ಯತಿ ।
ತನ್ಮಯಾಗ್ನೌ ಪ್ರವೇಷ್ಟವ್ಯಂ ದೌರ್ಭಾಗ್ಯೋಪಹತಾತ್ಮನಾ ॥ ೧೧೩

ಇತಿ ಬದ್ಧಪ್ರತಿಜ್ಞಾ ಸಾ ಮರಣಾಧ್ಯವಸಾಯಿನೀ ।
ದದಾತ್ಯನುದಿನಂ ದಾನಂ ಸುಮಹತ್ ಸುಕೃತೈಷಿಣೀ ॥ ೧೧೪

೧೧೫. ಪ್ರಭುವೇ, ನಾನು ಅವಳನ್ನು ನೋಡಿದ್ದೇನೆ. ಅವಳು ನಡೆಯುವಾಗ ಆಯ ತಪ್ಪುತ್ತಾಳೆ. ಉಪವಾಸದಿಂದ ಶರೀರವು ಬಡವಾಗಿದ್ದರೂ ತುಂಬ ಸುಂದರಳಾಗಿದ್ದಾಳೆ.

೧೧೬. ದಾನ ನೀಡುತ್ತಿರುವುದರಿಂದ ಅವಳ ಕೈಗಳು ಒದ್ದೆಯಾಗಿವೆ. ದುಂಬಿಗಳ ಹಿಂಡಿನಂತೆ ವ್ಯಾಕುಲಗೊಂಡಿದ್ದಾಳೆ. ಕಾಮವೆಂಬ ಆನೆಯ ಮದದ ಅವಸ್ಥೆಯೇ ದೇಹ ಧರಿಸಿ ಬಂದಂತೆ ದುಃಸ್ಥಿತಿಯಲ್ಲಿದ್ದಾಳೆ.

೧೧೭. ಅವಳನ್ನು ತ್ಯಜಿಸಿದ ಕಾಂತನಾದ ಕಾಮಿಯು ವಂದನೀಯನಾದರೂ ನಿಂದಾರ್ಹನೂ ಆಗಿದ್ದಾನೆಂದು ನಾನು ಅಂದುಕೊಂಡಿದ್ದೇನೆ. ಏಕೆಂದರೆ ಆತನಿಲ್ಲದ ಆ ಸುಂದರಿಯು ಶರೀರತ್ಯಾಗ ಮಾಡುತ್ತಾಳೆ.

೧೧೮. ಅವಳು ನನಗೆ ನಾಲ್ಕು ವೇದಗಳಿಗೆ ಸಮನಾಗಿ ನಾಲ್ಕು ಚಿನ್ನದ ಪುರುಷಬಾಹುಗಳನ್ನು ವಿಧಿವತ್ತಾಗಿ ನೀಡಿದ್ದಾಳೆ.

೧೧೯. ಆದ್ದರಿಂದ ನನ್ನ ಮನೆಯನ್ನು ಪೂಜಾಪಾತ್ರಗಳ ಗೃಹವನ್ನಾಗಿಸಿ ಸ್ವಧರ್ಮವನ್ನು ಆಚರಿಸಿಕೊಂಡಿರಲು ಬಯಸುತ್ತೇನೆ. ಆದ್ದರಿಂದ ನೀನು ನನಗೆ ಅಗತ್ಯ ರಕ್ಷಣೆಯನ್ನು ನೀಡಬೇಕು."

೧೨೦. ಹೀಗೆ ತನ್ನ ಪ್ರಿಯೆಯ ಸಂಗತಿಯನ್ನು ಆ ಬ್ರಾಹ್ಮಣನ ಬಾಯಿಂದ ಕೇಳಿದ ವಿಕ್ರಮಾದಿತ್ಯನ ಮನಸ್ಸು ಆ ಕೂಡಲೇ ಅವಳೆಡೆಗೆ ಆಕರ್ಷಿತವಾಯಿತು.

---

ಸಾ ಚ ದೃಷ್ಟಾ ಮಯಾ ದೇವ ವಿಶೃಂಖಲಪದಸ್ಥಿತಿಃ ।<br>
ಅನಾಹಾರಕೃಶೇನಾಪಿ ಶರೀರೇಣಾತಿಶೋಭಿತಾ ॥ ೧೧೫

ದಾನತೋಯಾರ್ದ್ರಿತಕರಾ ಮಿಲಿತಾಲಿಕುಲಾಕುಲಾ ।<br>
ದುಃಸ್ಥಿತಾ ಕಾಮಕರಿಣೋ ಮದಾವಸ್ಥೇವ ದೇಹಿನೀ ॥ ೧೧೬

ಮನ್ಯೇ ನಿಂದ್ಯಶ್ಚ ವಂದ್ಯಶ್ಚ ಸ ಕಾಮೀ ಯೋ ಜಹಾತಿ ತಾಮ್ ।<br>
ಕಾಂತೋ ಯೇನ ವಿನಾ ಸಾ ಚ ತನುಂ ತ್ಯಜತಿ ಸುಂದರೀ ॥ ೧೧೭

ತಯಾತ್ರ ಮಹ್ಯಂ ಚತ್ವಾರಃ ಸ್ವರ್ಣಾಃ ಪುರುಷಬಾಹವಃ ।<br>
ಚತುರ್ವೇದಾಯ ವಿಧಿವತ್ ಪ್ರದತ್ತಾ ವೇದಸಂಖ್ಯಯಾ ॥ ೧೧೮

ತತ್ಸುಸತ್ತ್ರಗೃಹಂ ಕೃತ್ವಾ ಸ್ವಧರ್ಮಮಿಹ ಸೇವಿತುಮ್ ।<br>
ಇಚ್ಛಾಮಿ ತತ್ರ ದೇವೇನ ಸಾನಾಥ್ಯಂ ಮೇ ವಿಧೀಯತಾಮ್ ॥ ೧೧೯

ಇತಿ ತಸ್ಯ ಮುಖಾತ್ಶ್ರುತ್ವಾ ಪ್ರಿಯಾವಾರ್ತಾಂ ದ್ವಿಜಸ್ಯ ಸಃ ।<br>
ಸದ್ಯೋಽಭೂದ್ವಿಕ್ರಮಾದಿತ್ಯಃ ತದಾಕ್ಷಿಪ್ತಮನಾ ನೃಪಃ ॥ ೧೨೦

೧೨೧–೧೨೩. ದ್ವಾರಪಾಲಕನಿಗೆ ಬ್ರಾಹ್ಮಣನ ಇಷ್ಟಾರ್ಥವನ್ನು ನೆರವೇರಿಸುವಂತೆ ಅಪ್ಪಣೆ ಮಾಡಿ, ಮದನ ಮಾಲೆಯು ತನ್ನನ್ನು ಅಷ್ಟು ಗಾಢವಾಗಿ ಹಚ್ಚಿಕೊಂಡು ಬಾಳನ್ನು ಹುಲ್ಲಿನಂತೆ ನಿಷ್ಪ್ರಯೋಜಕವನ್ನಾಗಿಸಿರುವುದನ್ನು ಯೋಚಿಸಿ. ಅವಳ ಪ್ರತಿಜ್ಞೆಯು ನೆರವೇರುವಲ್ಲಿ ಸಹಾಯ ಮಾಡಲು ಕೂಡಲೇ ಉತ್ಸುಕನಾಗಿ ತನ್ನ ಕಾಮಿನಿಯು ದೇಹಕಳೆದುಕೊಳ್ಳಲು ಸ್ವಲ್ಪವೇ ಸಮಯವಿರುವುದನ್ನು ಗಮನಿಸಿ ಬೇಗನೆ ರಾಜ್ಯಭಾರವನ್ನು ಮಂತ್ರಿಗಳಿಗೆ ಒಪ್ಪಿಸಿ, ಆಕಾಶಮಾರ್ಗದಲ್ಲಿ ಪ್ರತಿಷ್ಠಾನಕ್ಕೆ ಹೋಗಿ ತನ್ನ ಪ್ರಿಯತಮೆಯ ಮನೆಯನ್ನು ಪ್ರವೇಶಿಸಿದನು.

೧೨೪. ಅಲ್ಲಿ ಬೆಳದಿಂಗಳಿನಂತಿದ್ದ ಬಿಳಿ ಬಟ್ಟೆಯನ್ನು ಧರಿಸಿದ್ದ, ತನ್ನ ಐಸಿರಿಯನ್ನೆಲ್ಲ ಪಂಡಿತರಿಗೆ ಕೊಟ್ಟುಬಿಟ್ಟಿದ್ದ ಪರ್ವಕಾಲದ ಚಂದ್ರರೇಖೆಯಂತೆ ಕೃಶಳಾಗಿದ್ದ ತನ್ನ ಕಾಂತೆಯನ್ನು ನೋಡಿದನು.

೧೨೫ ಮದನಮಾಲೆಯು ಊಹಿಸದೆಯೇ ಬಳಿಬಂದ ಕಣ್ಣಿಗೆ ಅಮೃತರಸದಂತಿದ್ದ ಅವನನ್ನು ಕಂಡು ಕ್ಷಣಕಾಲ ಏನೂ ತೋಚದವಳಂತೆ ಆಗಿಬಿಟ್ಟಳು.

೧೨೬ ರಾಜನು ಅವಳನ್ನು ನೋಡಿದ ಕೂಡಲೇ ಮತ್ತೆಲ್ಲಿ ಓಡಿಹೋಗುವವನೋ ಎಂಬ ಭಯದಿಂದೆಂಬಂತೆ ಅವನನ್ನು ಅಪ್ಪಿಕೊಂಡ ಅವಳು ಅವನ ಕೊರಳಿಗೆ ತನ್ನ ತೋಳ ಬಳ್ಳಿಯೆಂಬ ಪಾಶವನ್ನು ಅರ್ಪಿಸಿದಳು.

---

ಆದಿಶ್ಯ ಚ ಪ್ರತೀಹಾರಂ ದ್ವಿಜಸ್ಯಾಸ್ಯೇಷ್ಟಸಿದ್ಧಯೇ ।
ವಿಚಿಂತ್ಯ ದೃಢರಾಗಾಂ ಚ ತಾಂ ತೃಣೀಕೃತಜೀವಿತಾಮ್ ॥ ೧೨೧
ಪ್ರತಿಜ್ಞಾಸಿದ್ಧಿಸಾಹಾಯ್ಯೇ ಸಹಸೋತ್ಕಃ ಸ್ವಕಾಮಿನೀಮ್ ।
ಗಣಯಿತ್ವಾಲ್ಪಶೇಷಂ ಚ ತಸ್ಯಾ ದೇಹವ್ಯಥಾವಿಧಿಮ್ ॥ ೧೨೨
ಸತ್ವರಂ ಮಂತ್ರಿನಿಕ್ಷಿಪ್ತರಾಜ್ಯೋ ಗತ್ವಾ ವಿಹಾಯಸಾ ।
ಪ್ರತಿಷ್ಠಾನಂ ಸ ನೃಪತಿಃ ಪ್ರಿಯಾವೇಶ್ಮ ವಿವೇಶ ತತ್ ॥ ೧೨೩
ತತ್ರ ಜ್ಯೋತ್ಸ್ನಾಚ್ಛವಸನಾಂ ವಿಬುಧಾರ್ಪಿತವೈಭವಾಮ್ ।
ಕೃಶಾಮಪಶ್ಯತ್ಕಾಂತಾಂ ತಾಂ ಪರ್ವಣೀಂದುಕಲಾಮಿವ ॥ ೧೨೪
ಸಾಪಿ ನೇತ್ರಸುಧಾಸಾರಮತರ್ಕಿತಮುಪಸ್ಥಿತಮ್ ।
ದೃಷ್ಟ್ವಾ ಮದನಮಾಲಾ ತಮುದ್‌ಭ್ರಾಂತೇವಾಭವತ್ ಕ್ಷಣಮ್ ॥ ೧೨೫
ಆಲಿಂಗಂತೀ ತತೋ ಭೂಯಃ ಪಲಾಯನಭಯಾದಿವ ।
ಕಂಠೇ ಭುಜಲತಾ ಪಾಶಮರ್ಪಯಾಮಾಸ ತಸ್ಯ ಸಾ ॥ ೧೨೬

೧೨೭ ಅವಳು ಕಣ್ಣೀರಿನಿಂದ ಗದ್ಗದಿತವಾದ ಮಾತಿನಿಂದ 'ತಪ್ಪು ಮಾಡದ ನನ್ನನ್ನು ಬಿಟ್ಟು ನಿಷ್ಕರುಣಿಯಾದ ನೀನು ಏಕೆ ಹೋಗಿದ್ದೆ ?' ಎಂದು ಹೇಳಿದಳು.

೧೨೮. "ಬಾ ಗುಟ್ಟಾಗಿ ಹೇಳುತ್ತೇನೆ' ಎನ್ನುತ್ತಾ ಆ ರಾಜನು ಪರಿವಾರದವರಿಂದ ಅಭಿನಂದಿಸಲ್ಪಟ್ಟು ಅವಳೊಂದಿಗೆ ಒಳಕ್ಕೆ ಹೋದನು.

೧೨೯-೩೧. ಅಲ್ಲಿ ಅವಳಿಗೆ ತನ್ನನ್ನು ಪ್ರಕಾಶಪಡಿಸಿ ತನ್ನೆಲ್ಲ ಕಥೆಯನ್ನೂ ಅವಳಿಗೆ ಹೇಳಿದನು. ನರಸಿಂಹರಾಜನನ್ನು ಯುಕ್ತಿಯಿಂದ ಗೆಲ್ಲಲು ಬಂದುದನ್ನೂ, ಪ್ರಪಂಚ ಬುದ್ಧಿಯನ್ನು ಕೊಂದು ಆಕಾಶಗಮನಶಕ್ತಿಯನ್ನು ಪಡೆದುದನ್ನೂ, ಕುಬೇರನಿಂದ ವರಪಡೆದು ಅವಳಿಗೆ ನೀಡಿದ್ದನ್ನೂ, ಬ್ರಾಹ್ಮಣನಿಂದ ಅವಳ ಸಂಗತಿಯನ್ನು ತಿಳಿದು ಅಲ್ಲಿಗೆ ತಿರುಗಿ ಬಂದದ್ದನ್ನೂ, ತಿಳಿಸಿ ಅವೆಲ್ಲವೂ ಪ್ರತಿಜ್ಞೆಯ ಸಲುವಾಗಿ ಎಂದು ತಿಳಿಸಿ ಮತ್ತೆ ನುಡಿದನು.

೧೩೨. "ಕಾಂತೆಯೇ ! ಈ ನರಸಿಂಹನು ಮಹಾಬಲಶಾಲಿ. ಇವನನ್ನು ಸೈನ್ಯದಿಂದ ಗೆಲ್ಲಲು ಸಾಧ್ಯವಿಲ್ಲ. ಇವನೊಂದಿಗೆ ನಾನು ದ್ವಂದ್ವಯುದ್ಧ ಮಾಡುತ್ತೇನೆ.

೧೩೩ ನೆಲದಲ್ಲಿ ನಿಂತಿರುವ ಇವನನ್ನು ಅಂತರಿಕ್ಷದಲ್ಲಿದ್ದುಕೊಂಡು ನಾನು ಕೊಲ್ಲಲಾರೆ. ಕ್ಷತ್ರಿಯನಾಗಿರುವ ಯಾರು ತಾನೇ ಅಧರ್ಮ ಯುದ್ಧದಿಂದ ಜಯಸಾಧಿಸಲು ಇಷ್ಟಪಟ್ಟಾರು ?

---

ಕಿಂ ಮಾಮನಾಗಸಂ ತ್ಯಕ್ತ್ವಾ ಗತವಾನಸಿ ನಿಷ್ಕೃಪ ।
ಇತ್ಯುವಾಚ ಚ ತಂ ಬಾಷ್ಪಘರ್ಘರಾಕ್ಷರಯಾಗಿರಾ ॥ ೧೨೭

ಏಹಿ ವಕ್ಷ್ಯಾಮಿ ರಹಸೀತ್ಯುಕ್ತ್ವಾ ಸೋಽಭ್ಯಂತರಂ ರಹಃ ।
ತಯಾ ಸಹ ಯಯೌ ರಾಜಾ ಪರಿವಾರಾಭಿನಂದಿತಃ ॥ ೧೨೮

ತತ್ರಾತ್ಮಾನಂ ಪ್ರಕಾಶ್ಯಾಸ್ಯೈ ಸ್ವವೃತ್ತಾಂತಮವರ್ಣಯತ್ ।
ನರಸಿಂಹನೃಪಂ ಯುಕ್ತ್ಯಾ ಜೇತುಮತ್ರಾಗಮದ್ಯಥಾ ॥ ೧೨೯

ಯಥಾ ಪ್ರಪಂಚಬುದ್ಧಿಂ ಚ ಹತ್ವಾ ಖೇಚರತಾಂ ಯಯೌ ।
ಯಥಾ ವರಂ ಧನಾಧ್ಯಕ್ಷಾತ್ ಪ್ರಾಪ್ಯ ಸಂವ್ಯಭಜಚ್ಚ ತಾಮ್ ॥ ೧೩೦

ಯಥಾ ಚ ಬ್ರಾಹ್ಮಣಾದ್ವಾರ್ತಾಂ ಶ್ರುತ್ವಾ ತತ್ರಾಗತಃ ಪುನಃ ।
ತತ್ಸರ್ವಮಾಪ್ರತಿಜ್ಞಾರ್ಥಾದುಕ್ತ್ವಾ ಭೂಯೋ ಜಗಾದ ತಾಮ್ ॥ ೧೩೧

ತತ್ಪ್ರಿಯೇ ನರಸಿಂಹೋಽಯಮಜೇಯೋಽತಿಬಲೀ ಬಲೈಃ ।
ದ್ವಂದ್ವಯುದ್ಧೇನ ಚ ಮಯಾ ಸಾಕಮೇಷ ನಿಯುಧ್ಯತೇ ॥ ೧೩೨

ಭೂಚರಂ ದ್ಯುಚರೋ ಭೂತ್ವಾ ನ ಚೈನಂ ಹತವಾನಹಮ್ ।
ಅಧರ್ಮಯುದ್ಧೇನ ಜಯಂ ಕೋ ಹೀಚ್ಛೇತ್ ಕ್ಷತ್ರಿಯೋ ಭವನ್ ॥ ೧೩೩

೧೩೪. ಆದ್ದರಿಂದ ನನ್ನ ಪ್ರತಿಜ್ಞೆಯು ನೆರವೇರುವಲ್ಲಿ ಸಹಾಯ ಮಾಡು. ನಿನ್ನ ವಂದಿಗಳು ಬಾಗಿಲ ಬಳಿ ಈ ರಾಜನಿಗೆ ನನ್ನ ಪ್ರತಿಜ್ಞೆಯನ್ನು ಸಾಧಿಸಿದ ಬಿನ್ನಹವನ್ನು ಮಾಡಿಕೊಳ್ಳಲಿ.'

೧೩೫. ಇದನ್ನು ಕೇಳುತ್ತಲೇ "ಧನ್ಯಳಾದೆ' ಎನ್ನುತ್ತಾ ರಾಜನೊಂದಿಗೆ ಸಮಾಲೋಚಿಸಿದ ಗಣಿಕೆ ಮದನಮಾಲೆಯು ತನ್ನ ಹೊಗಳುಭಟ್ಟರನ್ನು ಕರೆಸಿ ಹೇಳಿದಳು.

೧೩೬. "ನರಸಿಂಹರಾಜನು ನನ್ನ ಮನೆಗೆ ಬಂದಾಗ ನೀವೆಲ್ಲ ಗಮನ ವಹಿಸಿ ಬಾಗಿಲ ಬಳಿಯೇ ಇರಬೇಕು.

೧೩೭. ಅವನು ನನ್ನ ಮನೆಯೊಳಕ್ಕೆ ಬರುತ್ತಿದ್ದಂತೆಯೇ "ಒಡೆಯನೇ ! ನರಸಿಂಹರಾಜನು ನಿನ್ನ ಭಕ್ತನೂ ನಿನ್ನಲ್ಲಿ ಅನುರಾಗವುಳ್ಳವನೂ ಆಗಿದ್ದಾನೆ' ಎಂದು ಮತ್ತೆ ಮತ್ತೆ ಹೇಳಬೇಕು.

೧೩೮. ಇಲ್ಲಿ ಯಾರಿದ್ದಾರೆ ಎಂದು ಅವನೇನಾದರೂ ಕೇಳಿದರೆ ಕೂಡಲೇ ಊಹಿಸಿಕೊಂಡು "ಇಲ್ಲಿ ವಿಕ್ರಮಾದಿತ್ಯನು ಇದ್ದಾನೆ' ಎಂದು ಹೇಳಬೇಕು.'

೧೩೯. ಹೀಗೆ ನುಡಿದು ಅವರನ್ನು ಕಳಿಸಿಕೊಟ್ಟು ಆಮೇಲೆ ದ್ವಾರಪಾಲಕಿಗೆ ಹೇಳಿದಳು. "ನರಸಿಂಹರಾಜನು ಒಳಕ್ಕೆ ಬರುತ್ತಿರುವಾಗ ಅವನನ್ನು ಇಲ್ಲಿ ತಡೆಯಬೇಕು.'

---

ತನ್ಮೇ ಪ್ರತಿಜ್ಞಾಸಾಧ್ಯಂ ಯದ್ ಬಂದಿಭಿರ್ದ್ವಾರವರ್ತಿನಃ ।
ಆವೇದನಂ ನೃಪಸ್ಯಾಸ್ಯ ತತ್ರ ಸಾಹಾಯಕಂ ಕುರು ॥ ೧೩೪

ಏತತ್ ಶ್ರುತ್ವೈವ ಧನ್ಯಾಸ್ಮೀತ್ಯುಕ್ತ್ವಾ ರಾಜ್ಞಾಮುನಾ ಸಹ ।
ಸಂಮಂತ್ರ್ಯ ಗಣಿಕಾಥ ಸ್ವಾನಾಹೂಯೋವಾಚ ಬಂದಿನಃ ॥ ೧೩೫

ನರಸಿಂಹೋ ಯದಾ ರಾಜಾ ಗೃಹಮೇಷ್ಯತಿ ಮೇ ತದಾ ।
ದ್ವಾರಸಂನಿಹಿತೈರ್ಭಾವ್ಯಂ ಭವದ್ಭಿರ್ದತ್ತದೃಷ್ಟಿಭಿಃ ॥ ೧೩೬

ದೇವ ಭಕ್ತೋಽನುರಕ್ತಶ್ಚ ನರಸಿಂಹನೃಪಸ್ತ್ವಯಿ ।
ಇತಿ ವಾಚ್ಯಂ ಚ ಯುಷ್ಮಾಭಿಸ್ತಸ್ಯ ಪ್ರವಿಶತೋ ಮುಹುಃ ॥ ೧೩೭

ಕಃ ಸ್ಥಿತೋಽತ್ರೇತಿ ಯದಿ ಚ ಪ್ರಕ್ಷ್ಯತ್ಯುತ್ಪ್ರೇಕ್ಷ್ಯ ತತ್ಕ್ಷಣಮ್ ।
ಸ್ಥಿತೋಽತ್ರ ವಿಕ್ರಮಾದಿತ್ಯ ಇತಿ ವಕ್ತವ್ಯ ಏವ ಸಃ ॥ ೧೩೮

ಇತ್ಯುಕ್ತ್ವಾ ತಾನ್ ವಿಸೃಜ್ಯಾಥ ಪ್ರತೀಹಾರೀಂ ಜಗಾದ ಸಾ ।
ನರಸಿಂಹೋ ನ ರಾಜಾತ್ರ ನಿಷೇಧ್ಯಃ ಪ್ರವಿಶನ್ನಿತಿ ॥ ೧೩೯

೧೩೦. ಹೀಗೆ ವ್ಯವಸ್ಥೆಮಾಡಿ ಪ್ರಾಣನಾಥನನ್ನು ಪಡೆದ ಮದನಮಾಲೆಯು ಮೊದಲಿನಂತೆಯೇ ಲೆಕ್ಕವಿಲ್ಲದಷ್ಟು ಐಶ್ವರ್ಯವನ್ನು ದಾನಮಾಡುತ್ತಾ ನಿಶ್ಚಿಂತಳಾಗಿ ಇದ್ದುಬಿಟ್ಟಳು.

೧೩೧. ನರಸಿಂಹರಾಜನು ಅಲ್ಲಿಗೆ ಬರುವುದನ್ನು ಬಿಟ್ಟಿದ್ದರೂ ಚಿನ್ನದ ಪುರುಷರಿಂದ ದೊರೆಯುವುದನ್ನು ಅಪಾರವಾಗಿ ದಾನಮಾಡುತ್ತಿರುವುದನ್ನು ಕೇಳಿ ನೋಡಲು ಮದನಮಾಲೆಯ ಮನೆಗೆ ಹೋದನು.

೧೩೨. ದ್ವಾರಪಾಲಕರ ತಡೆಯಿಲ್ಲದೆ ಅಲ್ಲಿ ಪ್ರವೇಶಿಸುತ್ತಿದ್ದಾಗ ಎಲ್ಲ ವಂದಿಗಳೂ ಹೊರಬಾಗಿಲಿನಿಂದಲೇ ಜೋರಾಗಿ ಹೇಳಲಾರಂಭಿಸಿದರು:

೧೩೩. "ಪ್ರಭುವೇ ! ರಾಜ ನರಸಿಂಹನು ನಿನ್ನಲ್ಲಿ ಭಕ್ತಿಯಿಂದ ಪ್ರಣತನಾಗಿದ್ದಾನೆ' : ಅದನ್ನು ಕೇಳುತ್ತಾ ಆ ರಾಜನು ಕುಪಿತನೂ ಶಂಕಿತನೂ ಆದನು.

೧೩೪. "ಇಲ್ಲಿ ಯಾರಿದ್ದಾರೆ ?' ಎಂದು ಕೇಳಿ ವಿಕ್ರಮಾದಿತ್ಯರಾಜನು ಅಲ್ಲಿರುವುದನ್ನು ತಿಳಿದು ಕ್ಷಣಕಾಲ ಹೀಗೆ ಚಿಂತಿಸಿದನು:

೧೩೫. "ಮೊದಲೇ ಪಣತೊಟ್ಟಂತೆ ಬಾಗಿಲಲ್ಲಿ ನನಗೆ ಹೀಗೆ ಹೇಳಿಸುವ ಮಾತನ್ನು ಒತ್ತಾಯದಿಂದ ಒಳಕ್ಕೆ ಪ್ರವೇಶಿಸಿ ಹೇಳಿಸಿ ಪ್ರತಿಜ್ಞೆಯನ್ನು ಪೂರೈಸಿಕೊಂಡಿದ್ದಾನೆ.

---

ಏವಂ ಕೃತ್ವಾ ಪುನಃ ಪ್ರಾಪ್ತಪ್ರಾಣನಾಥಾ ಯಥಾಸುಖಮ್ ।
ತಸ್ಥೌ ಮದನಮಾಲಾ ಸಾ ನಿಃಸಂಖ್ಯಂ ದದತೀ ವಸು ॥ ೧೩೦

ತತಃ ಶ್ರುತ್ವಾತಿದಾನಂ ತತ್ಸೌವರ್ಣಪುರುಷೋದ್ಭವಮ್ ।
ನರಸಿಂಹನೃಪೋ ಹಿತ್ವಾಪ್ಯಾಗಾದ್ದ್ರಷ್ಟುಂ ಸ ತದ್ಗೃಹಮ್ ॥ ೧೩೧

ಪ್ರತೀಹಾರಾನಿಷಿದ್ಧಸ್ಯ ತಸ್ಯ ಪ್ರವಿಶತೋಽತ್ರ ಚ ।
ಆ ಬಹಿರ್ದ್ವಾರತಸ್ತಾರಮೂಚುಃ ಸರ್ವೇಽಪಿ ಬಂದಿನಃ ॥ ೧೩೨

ನರಸಿಂಹೋ ನೃಪೋ ದೇವ ಪ್ರಣತೋ ಭಕ್ತಿಮಾನಿತಿ ।
ತಚ್ಚ ಶೃಣ್ವನ್ಸ ಸಾಮರ್ಷಃ ಸಶಂಕಶ್ಚಾಭವನ್ ನೃಪಃ ॥ ೧೩೩

ಪೃಷ್ಟ್ವಾ ಚ ಕಃ ಸ್ಥಿತೋಽತ್ರೇತಿ ಬುದ್ಧ್ವಾ ತತ್ರ ಸ್ಥಿತಂ ಚ ತಮ್ ।
ರಾಜಾನಂ ವಿಕ್ರಮಾದಿತ್ಯಂ ಕ್ಷಣಮೇವಮಚಿಂತಯತ್ ॥ ೧೩೪

ತದಿದಂ ಪ್ರಾಕ್ಪ್ರತಿಜ್ಞಾತಂ ದ್ವಾರಿ ಮದ್ವಿನಿವೇದನಮ್ ।
ನಿರ್ವ್ಯೂಢಮಮುನಾ ರಾಜ್ಞಾ ಪ್ರಸಹ್ಯಾಂತಃ ಪ್ರವಿಶ್ಯ ಮೇ ॥ ೧೩೫

೧೫೬. ಅಬ್ಬಾ ! ಈ ರಾಜನು ಓಜಸ್ವಿಯಾಗಿದ್ದಾನೆ. ಆದ್ದರಿಂದಲೇ ಇಂದು ಅವನು ನನ್ನನ್ನು ಹೀಗೆ ಸೋಲಿಸಿದ್ದಾನೆ. ಒಂಟಿಯಾಗಿ ನನ್ನ ಮನೆಗೆ ಬಂದಿರುವ ಇವನನ್ನು ಸೈನ್ಯದಿಂದ ಕೊಲ್ಲುವುದು ತರವಲ್ಲ.

೧೫೭. ಆದ್ದರಿಂದ ಒಳಗೆ ಹೋಗುತ್ತೇನೆ' ಎಂದು ಚಿಂತಿಸಿ ಆ ನರಸಿಂಹನು ವಂದಿಗಣಗಳಿಂದ ಅವನ ಆಗಮನದ ಬಗ್ಗೆ ನಿವೇದಿತನಾಗಿ ಮನೆಯೊಳಕ್ಕೆ ಹೋದನು.

೧೫೮. ಒಳಗೆ ಬಂದ ಅವನನ್ನು ನೋಡುತ್ತಲೇ ನಗೆಮೊಗದ ವಿಕ್ರಮಾದಿತ್ಯನು ಮುಗುಳ್ನಗುತ್ತಾ ನರಸಿಂಹನನ್ನು ಅಪ್ಪಿಕೊಂಡನು.

೧೫೯. ಅನಂತರ ಅವರಿಬ್ಬರೂ ಕುಳಿತು ಮದನಮಾಲೆಯು ಪಕ್ಕದಲ್ಲಿಯೇ ಇದ್ದಾಗ, ಪರಸ್ಪರ ಕುಶಲವನ್ನು ವಿಚಾರಿಸಿದರು.

೧೬೦. ಮಾತಿನ ಮಧ್ಯೆ ವಿಕ್ರಮಾದಿತ್ಯನನ್ನು ನರಸಿಂಹರಾಜನು ಈ ಚಿನ್ನದ ಪುರುಷರು ಇಲ್ಲಿಗೆ ಎಲ್ಲಿಂದ ಬಂದರು ಎಂದು ಪ್ರಶ್ನಿಸಿದನು.

೧೬೧–೧೬೨. ಅನಂತರ ವಿಕ್ರಮಾದಿತ್ಯನು ನೀಚ ಶ್ರಮಣನನ್ನು ಕೊಂದು, ಆಕಾಶಗಮನವನ್ನು ಸಾಧಿಸಿ ಕುಬೇರನಿಂದ ಅಕ್ಷಯವಾಗುವ ಐದು ಚಿನ್ನದ ಪುರುಷರ ವರ ಪಡೆದ ತನ್ನ ಅದ್ಭುತವಾದ ಕಥೆಯೆಲ್ಲವನ್ನೂ ಇವನಿಗೆ ಹೇಳಿದನು.

---

ಅಹೋ ರಾಜಾಯಮೋಜಸ್ವೀ ಯೇನಾದ್ಯೈವಮಹಂ ಜಿತಃ ।
ನ ಚ ವಧ್ಯೋ ಬಲೇ ನಾಸಾವೇಕಾಕೀ ಮೇ ಗೃಹಾಗತಃ ॥ ೧೫೬

ತತ್ತಾವತ್ ಪ್ರವಿಶಾಮೀತಿ ನರಸಿಂಹೋ ವಿಚಿಂತ್ಯ ಸಃ ।
ವಿವೇಶಾಭ್ಯಂತರಂ ರಾಜಾ ಬಂದಿವೃಂದನಿವೇದಿತಃ ॥ ೧೫೭

ಪ್ರವಿಷ್ಟಂ ತಂ ಚ ದೃಷ್ಟ್ವೈವ ಸಸ್ಮಿತಂ ಸಸ್ಮಿತಾನನಃ ।
ಉತ್ಥಾಯ ವಿಕ್ರಮಾದಿತ್ಯಃ ಕಂಠೇ ಜಗ್ರಾಹ ಭೂಪತಿಮ್ ॥ ೧೫೮

ಅಥೋಪವಿಷ್ಟೌ ತೌ ದ್ವಾವಪ್ಯನ್ಯೋನ್ಯಕುಶಲಂ ನೃಪೌ ।
ತಸ್ಯಾಂ ಮದನಮಾಲಾಯಂ ಪಾರ್ಶ್ವಸ್ಥಾಯಾಮಪೃಚ್ಛತಾಮ್ ॥ ೧೫೯

ಕಥಾಕ್ರಮಾಚ್ಚ ಪಪ್ರಚ್ಛ ವಿಕ್ರಮಾದಿತ್ಯಮತ್ರ ಸಃ ।
ನರಸಿಂಹಃ ಕುತೋಽತ್ರೇ ಮೇ ಸುವರ್ಣಪುರುಷಾ ಇತಿ ॥ ೧೬೦

ತತೋಽತ್ರ ವಿಕ್ರಮಾದಿತ್ಯೋ ನಿಹತಶ್ರಮಣಾಧಮಮ್ ।
ಸಾಧಿತಾಕಾಶಗಮನಂ ವಿತ್ತೇಶ್ವರವರೇಣ ಚ ॥ ೧೬೧

ಸಂಪ್ರಾಪ್ತಾಕ್ಷಯಸೌವರ್ಣಮಹಾಪುರುಷಪಂಚಕಮ್ ।
ಕೃತ್ಸ್ನಂ ಕಥಿತವಾನಸ್ಮೈ ಸ್ವವೃತ್ತಾಂತಂ ತಮದ್ಭುತಮ್ ॥ ೧೬೨

೧೫೩. ರಾಜ ನರಸಿಂಹನು ಆಕಾಶದಲ್ಲಿ ಓಡಾಡಬಲ್ಲ ಈತನು ಮಹಾಶಕ್ತಿಶಾಲಿ ಹಾಗೂ ಕೆಟ್ಟ ಬುದ್ಧಿಯಿಲ್ಲದವನೆಂದೂ ಅರಿತು ಈ ರಾಜನನ್ನು ಗೆಳೆಯನನ್ನಾಗಿ ಆರಿಸಿಕೊಂಡನು.

೧೫೪. ಗೆಳೆತನವನ್ನು ಪಡೆದು ಸಮಯಾಚಾರಗಳನ್ನೆಲ್ಲ ನೆರವೇರಿಸಿದ ಆತನು ವಿಕ್ರಮಾದಿತ್ಯನನ್ನು ತನ್ನ ರಾಜಧಾನಿಗೆ ಕರೆದೊಯ್ದು ಉಪಚಾರಗಳಿಂದ ಸತ್ಕರಿಸಿದನು.

೧೫೫. ಹೀಗೆ ಗೌರವಿಸಿ ರಾಜನು ಕಳಿಸಿಕೊಟ್ಟ ಮೇಲೆ ವಿಕ್ರಮಾದಿತ್ಯ ರಾಜನು ಮತ್ತೆ ಮದನಮಾಲೆಯ ಮನೆಗೆ ಬಂದನು.

೧೫೬. ತನ್ನ ಓಜಸ್ಸು ಪ್ರತಿಭೆಗಳಿಂದ ದುಸ್ತರವಾದ ಪ್ರತಿಜ್ಞೆಯನ್ನು ನೆರವೇರಿಸಿದ ಆ ವಿಕ್ರಮಾದಿತ್ಯನು ಅನಂತರ ಸ್ವಂತ ಊರಿಗೆ ಹಿಂದಿರುಗಲು ಮನಸ್ಸು ಮಾಡಿದನು.

೧೫೭. ಅವನ ಜೊತೆಗೆ ಹೋಗಬಯಸಿದ, ವಿರಹವನ್ನು ಸಹಿಸಲಾರದವಳಾದ ಮದನಮಾಲೆಯು ಆ ಊರನ್ನು ಬಿಡಲು ನಿರ್ಧರಿಸಿ ತನ್ನ ಮನೆಯನ್ನು ಬ್ರಾಹ್ಮಣರಿಗೆ ಒಪ್ಪಿಸಿಕೊಟ್ಟಳು.

೧೫೮. ಆಮೇಲೆ ಅವನನ್ನೇ ನೆನೆಸುತ್ತಿದ್ದ ಅವಳೊಡನೆ ಅವಳ ಆನೆ ಕುದುರೆ ಕಾಲಾಳುಗಳ ಸಹಿತ ನರೇಂದ್ರಚಂದ್ರನಾದ ವಿಕ್ರಮಾದಿತ್ಯನು ತನ್ನ ನಗರವಾದ ಪಾಟಲಿಪುತ್ರಕ್ಕೆ ಹೋದನು.

---

ನರಸಿಂಹೋಽಥ ಮತ್ವಾ ತಂ ಮಹಾಶಕ್ತಿಂ ನಭಶ್ಚರಮ್ ।
ಅಪಾಪಬುದ್ಧಿಂ ವೃತವಾನ್ಮಿತ್ರತ್ವಾಯ ನೃಪೋ ನೃಪಮ್ ॥ ೧೫೩

ಪ್ರತಿಪನ್ನಸುಹೃತ್ತ್ವಂ ಚ ಕೃತಾಚಾರವಿಧಿಂ ತದಾ ।
ರಾಜಧಾನೀಂ ನಿಜಾಂ ನೀತ್ವಾ ಸ್ವೋಪಚಾರೈರುಪಾಚರತ್ ॥ ೧೫೪

ಸಂಮಾನ್ಯ ಪ್ರಹಿತಸ್ತೇನ ರಾಜ್ಞಾ ಚ ಸ ನೃಪಃ ಪುನಃ ।
ಗೃಹಂ ಮದನಮಾಲಾಯಾ ವಿಕ್ರಮಾದಿತ್ಯ ಆಯಯೌ ॥ ೧೫೫

ಅಥ ಸ ನಿಜೌಜಃಪ್ರತಿಭಾಸಂಪಾದಿತದುಸ್ತರಪ್ರತಿಜ್ಞಾರ್ಥಃ ।
ಗಂತುಂ ಚಕಾರ ಚೇತೋ ನಿಜನಗರಂ ವಿಕ್ರಮಾದಿತ್ಯಃ ॥ ೧೫೬

ತೇನ ಸಮಂ ಸಾ ಜಿಗಮಿಷುರಸಹಾ ವಿರಹಸ್ಯ ಮದನಮಾಲಾಪಿ ।
ತ್ಯಕ್ಷ್ಯಂತೀ ತಂ ದೇಶಂ ಬ್ರಾಹ್ಮಣಸಾದಕೃತ ವಸತಿಂ ಸ್ವಾಮ್ ॥ ೧೫೭

ತತಸ್ತಯಾ ಸಾಕಮನನ್ಯಚಿತ್ತಯಾ
ತದೀಯಹಸ್ತ್ಯಶ್ವಪದಾತ್ಯನುದ್ರುತಃ ।
ಸ ವಿಕ್ರಮಾದಿತ್ಯನರೇಂದ್ರಚಂದ್ರಮಾ
ನಿಜಂ ಪುರಂ ಪಾಟಲಿಪುತ್ರಕಂ ಯಯೌ ॥ ೧೫೮

೧೨೯. ಅಲ್ಲಿ ನರಸಿಂಹರಾಜನ ಜೊತೆ ಗೆಳೆತನ ಗಟ್ಟಿಮಾಡಿಕೊಂಡ ಆತನು ಪ್ರೇಮದ ಸಲುವಾಗಿ ಸ್ವಂತ ಊರನ್ನು ತ್ಯಜಿಸಿದ್ದ ಮದನಮಾಲೆಯೊಂದಿಗೆ ಸುಖವಾಗಿ ಇದ್ದನು.

೧೩೦. ಹೀಗೆ, ನರವಾಹನದತ್ತ ಪ್ರಭುವೇ ! ವಿಲಾಸಿನಿಯರೂ ರಾಜರಿಗೆ ಸ್ವಸ್ತ್ರೀಯರಂತೆ ಉದಾರ ವ್ಯಕ್ತಿತ್ವವುಳ್ಳವರು ಮತ್ತು ಗಾಢ ಪ್ರೀತಿಯುಳ್ಳವರೂ ಇರುವುದುಂಟು. ಸತ್ಕುಲಪ್ರಸೂತೆಯರಾದ ಪತಿವ್ರತೆಯರ ಬಗ್ಗೆ ಹೇಳತಕ್ಕದ್ದೇನು ?

೧೩೧. ಮರುಭೂತಿಯ ಬಾಯಿಂದ ಈ ವಿಸ್ತಾರವಾದ ಕಥೆಯನ್ನು ಕೇಳಿದ ನರವಾಹನದತ್ತ ರಾಜನೂ ವಿದ್ಯಾಧರರ ಉತ್ತಮಕುಲದಲ್ಲಿ ಹುಟ್ಟಿಬಂದ ನವವಧು ರತ್ನಪ್ರಭೆಯೂ ಸಂತೋಷಗೊಂಡರು.

ಮಹಾಕವಿ ಸೋಮದೇವಭಟ್ಟನು ವಿರಚಿಸಿದ

ಕಥಾಸರಿತ್ಸಾಗರದಲ್ಲಿ

ರತ್ನಪ್ರಭಾಲಂಬಕದ ನಾಲ್ಕನೆಯ ತರಂಗವು ಮುಗಿಯಿತು

---

ತತ್ರ ತೇನ ಸಹ ಬದ್ಧಸೌಹೃದಃ
ತಸ್ಥಿವಾನ್ ಸ ನರಸಿಂಹಭೂಭೃತಾ ।
ಅನ್ವಿತೋ ಮದನಮಾಲಯಾ ತಯಾ
ಪ್ರೇಮಮುಕ್ತನಿಜದೇಶಯಾ ಸುಖಮ್ ॥ ೧೨೯

ಇತಿ ದೇವ ಭವನ್ತ್ಯುದಾರಸತ್ತ್ವಾ
ದೃಢರಕ್ತಾ ವಿಲಾಸಿನೀಜನೋಽಪಿ ।
ಅವರೋಧಸಮೋ ಮಹೀಪತೀನಾಂ
ಕಿಮುತಾನ್ಯಃ ಕುಲಜಃ ಪುರಂಧ್ರಿಲೋಕಃ ॥ ೧೩೦

ಇತಿ ನಿಶಮ್ಯ ಮರುಭೂತಿಮುಖಾದುದಾರಾಮ್
ಏತಾಂ ಕಥಾಂ ಸ ನರವಾಹನದತ್ತಭೂಪಃ ।
ವಿದ್ಯಾಧರೋತ್ತಮಕುಲಪ್ರಭವಾ ಚ ಸಾಸ್ಯ
ರತ್ನಪ್ರಭಾ ನವವಧೂರ್ವ್ಯಧಿತ ಪ್ರಮೋದಮ್ ॥ ೧೩೧

ಇತಿ ಮಹಾಕವಿ ಶ್ರೀ ಸೋಮದೇವಭಟ್ಟ ವಿರಚಿತೇ

ಕಥಾಸರಿತ್ಸಾಗರೇ

ರತ್ನಪ್ರಭಾಲಂಬಕೇ ಚತುರ್ಥಸ್ತರಂಗಃ

---

## ಐದನೆಯ ತರಂಗ

೧ ಮರುಭೂತಿಯು ಹೀಗೆ ಹೇಳಿದ ಮೇಲೆ ಸೇನಾಧಿಪತಿಯಾದ ಹರಿಶಿಖನು ನರವಾಹನದತ್ತನ ಮುಂದೆ ಹೇಳಿದನು:

೨. ಒಳ್ಳೆಯ ಹೆಂಗಸರಿಗೆ ಗಂಡನನ್ನು ಬಿಟ್ಟು ಬೇರೆ ಯಾರೂ ಬೇಕಾದವರು ಇರುವುದಿಲ್ಲವೆಂದು ನಿಜವೇ ಸರಿ. ಹಾಗೆಯೇ ಸ್ವಾರಸ್ಯಕರವಾದ ಈ ಕಥೆಯನ್ನೂ ಕೇಳೋಣವಾಗಲಿ.

೩. ಭೂಲೋಕದಲ್ಲಿ ವರ್ಧಮಾನಪುರವೆಂಬ ನಗರವಿದೆ. ಅಲ್ಲಿ ಧರ್ಮಾತ್ಮರಲ್ಲಿ ಮಿಗಿಲಾದ ವೀರಭುಜನೆಂಬ ರಾಜನಿದ್ದನು.

೪. ಅವನಿಗೆ ನೂರು ಮಡದಿಯರಿದ್ದರೂ 'ಗುಣವರಾ' ಎಂಬ ರಾಣಿಯೊಬ್ಬಳು ಮಾತ್ರ ಅವನ ಪ್ರಾಣಕ್ಕಿಂತ ಹೆಚ್ಚು ಪ್ರಿಯಳಾಗಿದ್ದಳು.

೫. ನೂರು ಹೆಂಡತಿಯರಲ್ಲಿ ಒಬ್ಬರಲ್ಲಿಯೂ ದೈವಯೋಗದಿಂದ ಒಬ್ಬ ಮಗನೂ ಅವನಿಗೆ ಹುಟ್ಟಲೇ ಇಲ್ಲ.

---

## ಪಂಚಮಸ್ತರಂಗಃ

ಏವಂ ಕಥಿತವತ್ಯತ್ರ ಮರುಭೂತೌ ಚಮೂಪತಿಃ ।
ನರವಾಹನದತ್ತಸ್ಯ ಪುರೋ ಹರಿಶಿಖೋಽಬ್ರವೀತ್ ॥ ೧

ಸತ್ಯಮೇವ ನ ಸುಸ್ತ್ರೀಣಾಂ ಭರ್ತುರನ್ಯತ್ ಪರಾಯಣಮ್ ।
ತಥಾ ಚ ಶ್ರೂಯತಾಮೇಷಾಪ್ಯತ್ರ ಚಿತ್ರತರಾ ಕಥಾ ॥ ೨

ವರ್ಧಮಾನಪುರಂ ನಾಮ ಯದಸ್ತಿ ನಗರಂ ಭುವಿ ।
ತತ್ರ ವೀರಭುಜಾಖ್ಯೋಽಭೂದ್ರಾಜಾ ಧರ್ಮಭೃತಾಂ ವರಃ ॥ ೩

ಅಂತಃಪುರಶತೇ ತಸ್ಯ ವಿದ್ಯಮಾನೇಽಪ್ಯಭೂತ್ ಪ್ರಭೋಃ ।
ಏಕಾ ಗುಣವರಾ ನಾಮ ರಾಜ್ಞೀ ಪ್ರಾಣಾಧಿಕಪ್ರಿಯಾ ॥ ೪

ಪತ್ನೀಶತಸ್ಯ ಮಧ್ಯೇ ಚ ನ ತಾವದ್ದೈವಯೋಗತಃ ।
ಏಕಸ್ಯಾಮಪಿ ಕಸ್ಯಾಂಚಿತ್ ಪುತ್ರಸ್ತಸ್ಯೋದಪದ್ಯತ ॥ ೫

೬ ಹಾಗಾಗಿ ಅವನು ಶ್ರುತವರ್ಧನನೆಂಬ ವೈದ್ಯನನ್ನು "ಮಕ್ಕಳು ಉಂಟಾಗುವಂತಹ ಯಾವುದಾದರೂ ಔಷಧಿಯಿದೆಯೇ ?' ಎಂದು ಪ್ರಶ್ನಿಸಿದನು.

೭ ಅದನ್ನು ಕೇಳಿ ವೈದ್ಯನು ಹೇಳಿದನು : "ಪ್ರಭುವೇ ! ನಾನಿದನ್ನು ಸಾಧಿಸಿಕೊಡಬಲ್ಲೆ. ತಾವು ನನಗೆ ಕಾಡುಹೋತವೊಂದನ್ನು ತರಿಸಿಕೊಡಿರಿ'.

೮ ವೈದ್ಯನ ಮಾತನ್ನು ಕೇಳಿ ರಾಜನು ಪ್ರತೀಹಾರನಿಗೆ ಅಪ್ಪಣೆ ಮಾಡಿ ಕಾಡಿನಿಂದ ಒಂದು ಹೋತವನ್ನು ತರಿಸಿಕೊಟ್ಟನು.

೯. ಆಮೇಲೆ ವೈದ್ಯನು ಆ ಆಡನ್ನು ರಾಜನ ಬಾಣಸಿಗರಿಗೆ ಕೊಟ್ಟು ಅದರ ಮಾಂಸದಿಂದ ರಾಣಿಯರಿಗಾಗಿ ಉತ್ತಮವಾದ ಅಡುಗೆಯನ್ನು ಮಾಡಿಸಿದನು.

೧೦. ಎಲ್ಲ ರಾಣಿಯರೂ ಒಟ್ಟಾಗಿ ಇರಬೇಕೆಂದು ಆದೇಶಿಸಿ ದೇವರ ಪೂಜೆಗೆಂದು ರಾಜನು ಹೋಗಲಾಗಿ ಅವರೆಲ್ಲ ಒಂದೆಡೆ ಸೇರಿದರು.

೧೧. ಆದರೆ ದೇವರಪೂಜೆ ಮಾಡುತ್ತಿದ್ದ ರಾಜನ ಹತ್ತಿರದಲ್ಲಿಯೇ ಇದ್ದ ಕಾರಣ ರಾಣಿ ಗುಣವತಿಯೊಬ್ಬಳು ಮಾತ್ರ ಅಲ್ಲಿ ಸೇರಿರಲಿಲ್ಲ.

೧೨. ವೈದ್ಯನು ಅಲ್ಲಿ ಸೇರಿದ ರಾಣಿಯರಿಗೆಲ್ಲ ಸರಿಯಾಗಿ ಗಮನಿಸಿದೆ ಚೂರ್ಣದಿಂದ ಮಿಶ್ರಿತವಾಗಿದ್ದ ಸಾರನ್ನು ಕುಡಿಯಲು ಸಂಪೂರ್ಣವಾಗಿ ಕೊಟ್ಟನು.

---

ತೇನ ವೈದ್ಯಂ ಸ ಪಪ್ರಚ್ಛ ಶ್ರುತವರ್ಧನಸಂಜ್ಞಕಮ್ ।
ಕಚ್ಚಿದಸ್ತ್ಯೌಷಧಂ ತಾದೃಗ್ಯೇನ ಸ್ಯಾತ್ ಪುತ್ರಸಂಭವಃ ॥ ೬

ತತ್ಶ್ರುತ್ವಾ ಸೋಽಬ್ರವೀದ್ ವೈದ್ಯೋ ದೇವೈತತ್ಸಾಧಯಾಮ್ಯಹಮ್ ।
ವನ್ಯಚ್ಛಗಲಕಃ ಕಿಂ ತು ದೇವೇನಾನಾಯ್ಯತಾಂ ಮಮ ॥ ೭

ಇತ್ಯಾಕರ್ಣ್ಯ ಭಿಷಗ್ವಾಕ್ಯಂ ಪ್ರತೀಹಾರಂ ಸ ಭೂಪತಿಃ ।
ಆದಿಶ್ಯಾನಾಯಯಾಮಾಸ ತಸ್ಯಚ್ಛಗಲಕಂ ವನಾತ್ ॥ ೮

ತಂ ಛಾಗಂ ರಾಜಸೂದೇಭ್ಯಃ ಸಮರ್ಪ್ಯ ಸ ಭಿಷಕ್ತತಃ ।
ತನ್ಮಾಂಸೈಃ ಸಾಧಯಾಮಾಸ ರಾಜ್ಞ್ಯರ್ಥಂ ರಸಕೋತ್ತಮಮ್ ॥ ೯

ಆದಿಶ್ಯೈಕತ್ರ ರಾಜ್ಞೀನಾಂ ಮೇಲಕಂ ದೇವಮರ್ಚಿತುಮ್ ।
ಗತೇ ರಾಜ್ಞಿ ಮಿಲಂತಿ ಸ್ಮ ದೇವ್ಯ ಏಕತ್ರ ತತ್ರ ತಾಃ ॥ ೧೦

ಏಕಾ ತು ಮಿಲಿತಾ ನಾಸೀದ್ರಾಜ್ಞೀ ಗುಣವರಾತ್ರ ಸಾ ।
ರಾಜ್ಞೋ ದೇವಾರ್ಚನಸ್ಥಸ್ಯ ತತ್ಕಾಲಂ ನಿಕಟೇ ಸ್ಥಿತಾ ॥ ೧೧

ಮಿಲಿತಾಭ್ಯಶ್ಚ ತಾಭ್ಯಸ್ತತ್ಪಾನಾರ್ಥಂ ಚೂರ್ಣಮಿಶ್ರಿತಮ್ ।
ಅವಿಭಾವ್ಯೈವ ರಸಕಂ ನಿಃಶೇಷಂ ಸ ದದೌ ಭಿಷಕ್ ॥ ೧೨

೧೩. ಸ್ವಲ್ಪ ಹೊತ್ತಿನಲ್ಲಿಯೇ ಪೂಜೆ ಮುಗಿಸಿ ಗುಣವತಿಯೊಂದಿಗೆ ಅಲ್ಲಿಗೆ ಬಂದ ರಾಜನು ಸಾರನ್ನು ಸಂಪೂರ್ಣವಾಗಿ ಕುಡಿದು ಮುಗಿಸಿರುವುದನ್ನು ಕಂಡು ವೈದ್ಯನಿಗೆ ಹೇಳಿದನು.

೧೪. "ಇದೇನು ಗುಣವರೆಗೆಂದು ನೀನು ಸ್ವಲ್ಪವನ್ನೂ ಉಳಿಸಲಿಲ್ಲವೇ ? ಯಾರಿಗೋಸ್ಕರ ಮುಖ್ಯವಾಗಿ ಈ ಪ್ರಯತ್ನವೋ ಅದೇ ನಿನಗೆ ಮರೆತುಹೋಯಿತು'.

೧೫. ಎಂದು ಎಚ್ಚರಿಕೆಯಿಲ್ಲದ ಆ ವೈದ್ಯನಿಗೆ ಹೇಳಿ ಬಾಣಸಿಗರಿಗೆ ರಾಜನೆಂದನು. ಆ ಹೋತದ ಮಾಂಸದ ಒಂದು ಚೂರು ಶೇಷವೇನಾದರೂ ಇದೆಯೇ ?

೧೬. ಎರಡು ಕೊಂಬುಗಳು ಮಾತ್ರ ಇವೆಯೆಂದು ಅವರೆನ್ನಲು ವೈದ್ಯನು ನುಡಿದನು. ಹಾಗಾದರೆ ಒಳ್ಳೆಯದೇ ಆಯಿತು. ಕೋಡಿನಿಂದ ಮಾಡುವ ಸಾರು ಇನ್ನೂ ಉತ್ತಮವಾದದ್ದೇ.

೧೭. ಅನಂತರ ವೈದ್ಯನು ಅದರ ಕೊಂಬಿನ ಮಾಂಸದಿಂದ ಸಾರುಮಾಡಿಸಿ ಅದಕ್ಕೆ ಚೂರ್ಣವನ್ನು ಸೇರಿಸಿ ಗುಣವರೆಗೆ ಕೊಟ್ಟನು.

೧೮. ಅನಂತರ ಅವನ ತೊಂಬತ್ತೊಂಬತ್ತು ಮಡದಿಯರೂ ಗರ್ಭಿಣಿಯರಾಗಿ ಸಕಾಲದಲ್ಲಿ ಗಂಡುಮಕ್ಕಳನ್ನು ಹೆತ್ತರು.

೧೯. ಗರ್ಭಧರಿಸಿದ ಮಹಾರಾಣಿ ಗುಣವರೆಯೂ ಸಹ ಮುಂದೆ ಸರ್ವೋತ್ತಮ ಲಕ್ಷಣಗಳುಳ್ಳ ಮಗನೊಬ್ಬನಿಗೆ ಜನ್ಮವಿತ್ತಳು.

---

ಕ್ಷಣಾತ್ ಕೃತಾರ್ಚನಃ ಸೋಽತ್ರ ರಾಜಾಗತ್ಯ ಪ್ರಿಯಾಯುತಃ ।
ವೀಕ್ಷ್ಯಾಶೇಷೋಪಯುಕ್ತಂ ತದ್ ದ್ರವ್ಯಂ ವೈದ್ಯಂ ತಮಭ್ಯಧಾತ್ ॥ ೧೩

ಅಹೋ ನ ಸ್ಥಾಪಿತಂ ಕಿಂಚಿತ್ತ್ವಯಾ ಗುಣವರಾಕೃತೇ ।
ಯತ್ಪ್ರಧಾನೋಽಯಮಾರಂಭಸ್ತದೇವ ತವ ವಿಸ್ಮೃತಮ್ ॥ ೧೪

ಇತ್ಯುಕ್ತ್ವಾ ಸ ವಿಲಕ್ಷಂ ತಂ ವೈದ್ಯಂ ಸೂದಾತ್ ನೃಪೋಽಬ್ರವೀತ್ ।
ಕಿಂ ತಸ್ಯ ಛಗಲಸ್ಯಾಸ್ತಿ ಮಾಂಸಶೇಷೋಽತ್ರ ಕಶ್ಚನ ॥ ೧೫

ಶೃಂಗೇ ಪರೇ ಸ್ತ ಇತ್ಯುಕ್ತೇ ಸೂದೈರ್ವೈದ್ಯೋಽಥ ಸೋಽಬ್ರವೀತ್ ।
ಸಾಧು ತರ್ಹ್ಯುತ್ತಮಂ ಹಿ ಸ್ಯಾದ್ರಸಕಂ ಶೃಂಗಗರ್ಭಜಮ್ ॥ ೧೬

ಇತ್ಯುಕ್ತ್ವಾ ಕಾರಯಿತ್ವೈವ ತತ್ತತಃ ಶೃಂಗಮಾಂಸತಃ ।
ತಸ್ಯೈ ಗುಣವರಾಯೈ ಸ ಚೂರ್ಣಮಿಶ್ರಂ ಭಿಷಗ್ದದೌ ॥ ೧೭

ತತಸ್ತಸ್ಯಾಥ ನವತಿರ್ದೇವ್ಯೋ ರಾಜ್ಞೋ ನವಾಧಿಕಾಃ ।
ಆಸನ್ಸಗರ್ಭಾಃ ಕಾಲೇ ಚ ಸರ್ವಾಃ ಸುಷುವಿರೇ ಸುತಾನ್ ॥ ೧೮

ಅರ್ವಾಗುಪಾತ್ತಗರ್ಭಾ ಚ ಸಾ ಸರ್ವೋತ್ತಮಲಕ್ಷಣಮ್ ।
ಪ್ರಾಸೂತ ಸ್ಮ ಮಹಾದೇವೀ ಪಶ್ಚಾದ್ಗುಣವರಾ ಸುತಮ್ ॥ ೧೯

೨೦. ಕೊಂಬಿನ ಮಾಂಸದ ಸಾರಿನಿಂದ ಹುಟ್ಟಿದ ಅವನಿಗೆ ದೊಡ್ಡ ಉತ್ಸವನ್ನೇರ್ಪಡಿಸಿದ ತಂದೆ ವೀರಭುಜನು ಅವನಿಗೆ ಶೃಂಗಭುಜನೆಂದು ಹೆಸರಿಟ್ಟನು.

೨೧. ಆತನು ವಯಸ್ಸಿನಲ್ಲಿ ಎಲ್ಲರಿಗಿಂತಲೂ ಕಿರಿಯನಾದರೂ ಬೆಳೆಯುತ್ತಾ ಹೋದಂತೆ ಗುಣಗಳಿಂದ ಎಲ್ಲರಿಗೂ ತುಂಬ ಹಿರಿಯನಾದನು.

೨೨. ಕ್ರಮೇಣ ಆ ರಾಜಕುಮಾರನು ರೂಪದಲ್ಲಿ ಕಾಮನಿಗೂ ಧನುರ್ವೇದದಲ್ಲಿ ಅರ್ಜುನನಿಗೂ ಮತ್ತು ಶಕ್ತಿಯಲ್ಲಿ ಭೀಮಸೇನನಿಗೂ ಸಮಾನನಾದನು.

೨೩. ವೀರಭುಜನಿಗೆ ಪ್ರಿಯತಮಳಾಗಿದ್ದ ಗುಣವರೆಯು ಮಗನೊಂದಿಗೆ (ಸುಖದಿಂದ) ಇರುವುದನ್ನು ಕಂಡು ರಾಜನ ಇನ್ನಿತರ ಹೆಂಡಿರು ಮಾತ್ಸರ್ಯವನ್ನು ಹೊಂದಿದರು.

೨೪–೨೫. ಅವರಲ್ಲಿ, ದುರುದ್ದೇಶವನ್ನು ಹೊಂದಿದ್ದ ಅಯಶೋಲೇಖೆ ಎಂಬ ಮಡದಿಯು ಇನ್ನಿತರ ರಾಣಿಯರೊಂದಿಗೆ ಸಂಚು ರೂಪಿಸಿ ಎಲ್ಲ ಸವತಿಯರಿಂದೊಡಗೂಡಿ, ಮನೆಗೆ ಬಂದಿದ್ದ ರಾಜನೆದುರು ಕೃತ್ರಿಮವಾಗಿ ಪೆಚ್ಚುಮೋರೆ ಮಾಡಿಕೊಂಡಳು. ಅವನು (ಹೀಗೇಕೆಂದು) ಕೇಳಿದಾಗ ಕಷ್ಟಪಡುತ್ತಲೇ ಹೇಳಿದಳು :

೨೬ "ಆರ್ಯಪುತ್ರನೇ, ಮನೆಯ ಕಳಂಕವನ್ನು ಹೇಗೆ ಸಹಿಸಿಕೊಂಡಿರುವೆ ? ಬೇರೆಯವರನ್ನು ಕಾಪಾಡುವ ನೀನು ನಿನ್ನ ಪರಿಶುದ್ಧಿಯನ್ನೇಕೆ ಕಾಪಾಡಿಕೊಳ್ಳುತ್ತಿಲ್ಲ ?

---

ಶೃಂಗಮಾಂಸರಸೋತ್ಪನ್ನಂ ನಾಮ್ನಾ ಶೃಂಗಭುಜಂ ಚ ತಮ್ ।
ಪಿತಾ ವೀರಭುಜಶ್ಚಕ್ರೇ ರಾಜಾ ಕೃತಮಹೋತ್ಸವಃ ॥ ೨೦

ವರ್ಧಮಾನಃ ಸಹಾನ್ಯೈಸ್ತೈರ್ಭ್ರಾತೃಭಿರ್ವಯಸಾ ಪರಮ್ ।
ಕನಿಷ್ಠೋ ಸೋಽಭವತ್ತೇಷಾಂ ಗುಣೈರ್ಜ್ಯೇಷ್ಠತಮಸ್ತ್ವಭೂತ್ ॥ ೨೧

ಕ್ರಮಾತ್ ಸ ರಾಜಪುತ್ರಶ್ಚ ರೂಪೇ ಕಾಮಸಮೋಽಭವತ್ ।
ಧನುರ್ವೇದೇಽರ್ಜುನಸಮೋ ಭೀಮಸೇನಸಮೋ ಬಲೇ ॥ ೨೨

ತತಃ ಸಪುತ್ರಾಂ ಸುತರಾಂ ದೃಷ್ಟ್ವಾ ವೀರಭುಜಸ್ಯ ತಾಮ್ ।
ಪ್ರಿಯಾಂ ಗುಣವರಾಂ ರಾಜ್ಞೋ ದೇವ್ಯೋಽನ್ಯಾ ಮತ್ಸರಂ ಯಯುಃ ॥ ೨೩

ಅಥ ತಾಸ್ವಯಶೋಲೇಖಾ ನಾಮ ರಾಜ್ಞೀ ದುರಾಶಯಾ ।
ಸಂಮಂತ್ರ್ಯ ತಾಭಿರನ್ಯಾಭಿಃ ಸಹ ಕೃತ್ವಾ ಚ ಸಂವಿದಮ್ ॥ ೨೪

ಸಮಸ್ತಾಭಿಃ ಸ ಪತ್ನೀಭಿಸ್ತು ರಾಜಾನಂ ಗೃಹಾಗತಮ್ ।
ಮೃಷಾಧೃತಮುಖಗ್ಲಾನಿಃ ಪೃಚ್ಛಂತಂ ಕೃಚ್ಛ್ರತೋಽಬ್ರವೀತ್ ॥ ೨೫

ಆರ್ಯಪುತ್ರ ಕಥಂ ನಾಮ ಸಹಸೇ ಗೃಹದೂಷಣಮ್ ।
ಪರಸ್ಯ ರಕ್ಷಿತಾವದ್ಯಂ ನ ರಕ್ಷಸ್ಯಾತ್ಮನಃ ಕಥಮ್ ॥ ೨೬

೨೭. ಸುರಕ್ಷಿತನೆಂಬ ಹೆಸರಿನ ಅಂತಃಪುರರಕ್ಷಕನಾದ ಯುವಕನಲ್ಲಿ ನಿನ್ನ ಈ ರಾಣಿ ಗುಣವರೆಯು ಅನುರಕ್ತಳಾಗಿದ್ದಾಳೆ.

೨೮. ಈ ಅಂತಃಪುರಾಧಿಕಾರಿಯಿಂದ ಸುರಕ್ಷಿತವಾದ ರಾಣೀವಾಸದಲ್ಲಿ ಬೇರೆ ಗಂಡಸರು ಸಿಕ್ಕಲು ಸಾಧ್ಯವಿಲ್ಲವಾದ ಕಾರಣ ಈಕೆಯು ಅವನೊಂದಿಗೆ ಕೂಡಿದ್ದಾಳೆ.

೨೯. ಇಡೀ ಅಂತಃಪುರದಲ್ಲಿ ಪ್ರಚಾರಗೊಂಡಿರುವ ಇದರ ಬಗ್ಗೆ ಎಲ್ಲರೂ ಮಾತನಾಡಿಕೊಳ್ಳುತ್ತಿದ್ದಾರೆ.' ಅವಳು ಹೀಗೆನ್ನಲು ರಾಜನು ಆಲೋಚಿಸಿ ವಿಮರ್ಶೆ ಮಾಡಿದನು.

೩೦. ಒಬ್ಬೊಬ್ಬ ರಾಣಿಯ ಬಳಿಗೂ ಹೋಗಿ ಕ್ರಮವಾಗಿ ಎಲ್ಲರನ್ನು ವಿಚಾರಿಸಿದನು. ಅವರೆಲ್ಲರೂ ಸಂಚು ರೂಪಿಸಿದ್ದ ಕಾರಣ ಹಾಗೆಯೇ ಹೇಳಿದರು.

೩೧. ಆದರೆ ಕೋಪವನ್ನು ಬದಿಗಿಟ್ಟು ವಿವೇಕಿಯಾದ ಆ ರಾಜನು ಚಿಂತನೆ ಮಾಡಿದನು. ಅವರಿಬ್ಬರಲ್ಲಿ ಇದು ಅಸಂಭವ. ಆದಾಗ್ಯೂ ವದಂತಿಯು ಹೀಗಿದೆ.

೩೨. ಆದ್ದರಿಂದ ಸರಿಯಾಗಿ ನಿರ್ಣಯಿಸದೆ ಪ್ರತೀಕಾರ ಮಾಡುವುದು ಸರಿಯಲ್ಲ. ಈಗ ನಿಜವನ್ನು ಅರಿಯಲು ಇಬ್ಬರನ್ನೂ ಯುಕ್ತಿಯಿಂದ ಪರಿಹರಿಸಬೇಕು.

೩೩. ಹೀಗೆ ತೀರ್ಮಾನಿಸಿ ಮಾರನೆಯ ದಿನ ಆ ರಾಜನು ಅಂತಃಪುರಾಧಿಕಾರಿಯಾದ ಸುರಕ್ಷಿತನನ್ನು ಆಸ್ಥಾನಕ್ಕೆ ಕರೆಸಿ ಕೃತಕ ಕೋಪವನ್ನು ತೋರ್ಪಡಿಸುತ್ತಾ ಹೇಳಿದನು:

---

ಯಃ ಸುರಕ್ಷಿತನಾಮಾಯಮಂತಃಪುರಪತಿರ್ಯುವಾ ।
ತತ್ಸಕ್ತಾ ಹಿ ತ್ವದೀಯೈಷಾ ರಾಜ್ಞೀ ಗುಣವರಾ ಕಿಲ ॥ ೨೭

ತದನ್ಯಸ್ಯ ನ ಲಾಭೋಽಸ್ತಿ ಸೌವಿದಲ್ಲಾಭಿರಕ್ಷಿತೇ ।
ಅಂತಃಪುರೇಽತ್ರ ಪುಂಸೋ ಯದತೋಽಸೌ ತೇನ ಸಂಗತಾ ॥ ೨೮

ಸರ್ವತ್ರಾಂತಃಪುರೇ ಚೈತತ್ ಪ್ರಸಿದ್ಧಮಿಹ ಗೀಯತೇ ।
ಇತ್ಯುಕ್ತಃ ಸ ತಯಾ ರಾಜಾ ದಧ್ಯೌ ಚ ವಿಮಮರ್ಶ ಚ ॥ ೨೯

ಗತ್ವಾ ಚೈಕೈಕಶೋ ರಾಜ್ಞೀರನ್ಯಾಃ ಪಪ್ರಚ್ಛ ತಾಃ ಕ್ರಮಾತ್ ।
ತಾಶ್ಚ ತಸ್ಮೈ ತಥೈವೋಚುಃ ಸರ್ವಾ ರಚಿತಕೈತವಾಃ ॥ ೩೦

ತತಃ ಸ ಮತಿಮಾನ್ ರಾಜಾ ಜಿತಕ್ರೋಧೋ ವ್ಯಚಿಂತಯತ್ ।
ತಯೋಃ ಸಂಭಾವ್ಯತೇ ನೈತತ್ ಪ್ರವಾದಶ್ಚಾಯಮೀದೃಶಃ ॥ ೩೧

ತದನಿಶ್ಚಿತ್ಯ ಕಾರ್ಯೋ ಮೇ ಪ್ರತಿಭೇದೋ ನ ಕಸ್ಯಚಿತ್ ।
ಯುಕ್ತ್ಯಾ ತು ಪರಿಹಾರ್ಯೌ ತೌ ಸಂಪ್ರತ್ಯಂತಮವೇಕ್ಷಿತುಮ್ ॥ ೩೨

ಇತಿ ನಿಶ್ಚಿತ್ಯ ಸೋಽನ್ಯೇದ್ಯುರಾಸ್ಥಾನೇಽಂತಃಪುರಾಧಿಪಮ್ ।
ಸುರಕ್ಷಿತಂ ತಮಾಹೂಯ ಕೃತಕೋಪಃ ಸಮಭ್ಯಧಾತ್ ॥ ೩೩

೩೪. "ಎಲೈ ಪಾಪಿಯೇ, ನೀನು ಬ್ರಹ್ಮಹತ್ಯಾ ಪಾತಕವನ್ನು ಮಾಡಿದ್ದೀಯೆಂದು ತಿಳಿದುಬಂದಿದೆ. ಆದ್ದರಿಂದ ತೀರ್ಥಯಾತ್ರೆ ಮಾಡಿ ಬಂದ ಹೊರತು ನಿನ್ನನ್ನು ನೋಡಲು ನನಗೆ ಆಸಕ್ತಿಯಿಲ್ಲ.'

೩೫. ಅದನ್ನು ಕೇಳಿ ಗಾಬರಿಗೊಂಡ ಅವನು "ಒಡೆಯನೇ ! ನಾನು ಏಕೆ ಬ್ರಹ್ಮಹತ್ಯೆ ಮಾಡಲಿ ?' ಎಂದಾಗ ಆತನಿಗೆ ರಾಜನು ಮತ್ತೆ ಹೇಳಿದನು.

೩೬–೩೭. "ಧಾರ್ಷ್ಟ್ಯತನವನ್ನು ಮಾಡಬೇಡ. ಪಾಪಗಳನ್ನು ಪರಿಹರಿಸುವ ಕಾಶ್ಮೀರಕ್ಕೆ ಹೋಗು. ಅಲ್ಲಿ ವಿಜಯಕ್ಷೇತ್ರವೂ, ಪವಿತ್ರವಾದ ನಂದಿಕ್ಷೇತ್ರವೂ ವಾರಾಹ ಕ್ಷೇತ್ರವೂ ಇವೆ. ಅವೆಲ್ಲ ವಿಷ್ಣುವಿನಿಂದ ಪಾವನಗೊಳಿಸಲ್ಪಟ್ಟಿವೆ. ಅಲ್ಲಿ ಗಂಗೆಯು ವಿತಸ್ತಾ ಎಂಬ ಹೆಸರನ್ನು ಹೊಂದಿದೆ.

೩೮. ಅಲ್ಲಿ ಮಡವಕ್ಷೇತ್ರವಿದೆ. ಅಲ್ಲಿಯೇ ಉತ್ತರ ಮಾನಸವೂ ಇದೆ. ಆ ತೀರ್ಥ ಯಾತ್ರೆಯಿಂದ ಪವಿತ್ರನಾಗಿ ನನ್ನನ್ನು ನೋಡಬೇಕು. ಇಲ್ಲದಿದ್ದರೆ ಇಲ್ಲ.'

೩೯. ಹೀಗೆ ಹೇಳಿ ಆ ವೀರಭುಜ ಮಹಾರಾಜನು ಗತ್ಯಂತರವಿಲ್ಲದ ಆತನನ್ನು ಉಪಾಯದಿಂದ ತೀರ್ಥಯಾತ್ರೆಗೆಂದು ಸುರಕ್ಷಿತವಾಗಿ ದೂರಕ್ಕೆ ಕಳಿಸಿಕೊಟ್ಟನು.

೪೦. ಅನಂತರ ಆ ರಾಜನು ಮೊದಲಿಗೆ ಗುಣವರಾದೇವಿಯ ಬಳಿಗೆ ಪ್ರೀತಿಯಿಂದಲೂ ಕೋಪದಿಂದಲೂ, ಆದರೆ ವಿವೇಕವನ್ನು ಬಿಡದೆ, ಹೋದನು.

---

ಬ್ರಹ್ಮಹತ್ಯಾ ತ್ವಯಾ ಪಾಪ ಕೃತೇತ್ಯವಗತಂ ಮಯಾ ।
ತತ್ತ್ವಾಮಕೃತಸತ್ತೀರ್ಥಯಾತ್ರಂ ನ ದ್ರಷ್ಟುಮುತ್ಸಹೇ ॥ ೩೪

ತಚ್ಛ್ರುತ್ವಾ ತಂ ಸಮುದ್ಭ್ರಾಂತಂ ಬ್ರಹ್ಮಹತ್ಯಾ ಕುತೋ ಮಯಾ ।
ಕೃತಾ ದೇವೇತಿ ಜಲ್ಪಂತಂ ಸ ರಾಜಾ ಪುನರಬ್ರವೀತ್ ॥ ೩೫

ಮಾ ಸ್ಮ ಧಾರ್ಷ್ಟ್ಯಂ ಕೃಥಾ ಗಚ್ಛ ಕಾಶ್ಮೀರಾನ್ ಪಾಪನಾಶನಾನ್ ।
ಯತ್ರ ತದ್ವಿಜಯಕ್ಷೇತ್ರಂ ನಂದಿಕ್ಷೇತ್ರಂ ಚ ಪಾವನಮ್ ॥ ೩೬

ವಾರಾಹಂ ಯತ್ರ ಚ ಕ್ಷೇತ್ರಂ ಯೇ ಪೂತಾಶ್ಚಕ್ರಪಾಣಿನಾ ।
ಧತ್ತೇ ನಾಮ ವಿತಸ್ತೇತಿ ವಹಂತೀ ಯತ್ರ ಜಾಹ್ನವೀ ॥ ೩೭

ಯತ್ರ ತನ್ಮಡವಕ್ಷೇತ್ರಂ ಯತ್ರ ಚೋತ್ತರಮಾನಸಮ್ ।
ತತ್ತೀರ್ಥಯಾತ್ರಾಪೂತೋ ಮಾಂ ಪುನರ್ದ್ರಕ್ಷ್ಯಸಿ ನಾನ್ಯಥಾ ॥ ೩೮

ಏವಮುಕ್ತ್ವಾ ತಮವಶಂ ವಿಸಸರ್ಜ ಸುರಕ್ಷಿತಮ್ ।
ಸಂಯುಕ್ತ್ಯಾ ತೀರ್ಥಯಾತ್ರಾಯಾಂ ದೂರಂ ವೀರಭುಜೋ ನೃಪಃ ॥ ೩೯

ತತೋ ಗುಣವರಾದೇವ್ಯಾಃ ಪೂರ್ವಂ ತಸ್ಯಾ ಜಗಾಮ ಸಃ ।
ಸಸ್ನೇಹಶ್ಚ ಸಕೋಪಶ್ಚ ಸವಿಮರ್ಶಶ್ಚ ಭೂಪತಿಃ ॥ ೪೦

೪೧. ಅಲ್ಲಿ ಖಿನ್ನನಾಗಿದ್ದ ಅವನನ್ನು ಕಂಡು ಕಳವಳಗೊಂಡ ಅವಳು "ಆರ್ಯ ಪುತ್ರನೇ ! ಇಂದೇಕೆ ಇದ್ದಕ್ಕಿದ್ದಂತೆ ಇಷ್ಟೊಂದು ಖಿನ್ನನಾಗಿದ್ದೀಯೆ ?' ಎಂದು ಕೇಳಿದಳು.

೪೨. ಅದನ್ನು ಕೇಳಿದ ರಾಜನು ಅವಳಿಗೆ ಕೃತ್ರಿಮವಾಗಿ ಹೀಗೆ ಕೇಳಿದನು. ""ಇವತ್ತು ಯಾರೋ ಮಹಾಜ್ಞಾನಿಯೊಬ್ಬನು ಬಂದು ನನಗೆಂದನು.

೪೩. "ರಾಜನೇ, ರಾಣಿಗುಣವತಿಯನ್ನು ಕೆಲಕಾಲ ನೆಲಮಾಳಿಗೆಯಲ್ಲಿಟ್ಟು ನೀನೂ ಬ್ರಹ್ಮಚರ್ಯವನ್ನು ಪಾಲಿಸಬೇಕು.

೪೪. ಇಲ್ಲದಿದ್ದರೆ ನಿನಗೆ ಅಧಿಕಾರದಿಂದ ಚ್ಯುತಿಯೂ ಅವಳಿಗೆ ಮರಣವೂ ನಿಶ್ಚಿತ "ಹೀಗೆ ಹೇಳಿ ಆ ಜ್ಞಾನಿಯು ಹೊರಟುಹೋದನು. ಆಗಿನಿಂದ ನನಗೆ ವಿಷಾದವುಂಟಾಗಿದೆ"

೪೫. ರಾಜನು ಹೀಗೆ ಹೇಳಲು ಪತಿವ್ರತೆಯಾದ ರಾಣಿ ಗುಣವತಿಯು ಭಯ ಅನುರಾಗಗಳಿಂದ ದಿಕ್ಕು ತೋಚದವಳಾಗಿ ಹೀಗೆ ನುಡಿದಳು.

೪೬. "ಹಾಗಾದರೆ ಆರ್ಯಪುತ್ರನೇ, ಇಂದೇ ಏಕೆ ನನ್ನನ್ನು ನೆಲಮಾಳಿಗೆಗೆ ಹಾಕುತ್ತಿಲ್ಲ ? ನನ್ನ ಪ್ರಾಣಗಳಿಂದಾದರೂ ನಿನಗೆ ಒಳಿತಾಗುವುದಾದರೆ ನಾನೇ ಧನ್ಯೆ.

೪೭. ನನಗೆ ಬೇಕಾದರೆ ಸಾವೇ ಬರಲಿ, ಆದರೆ ನಿನಗೆ ರಾಜ್ಯಭ್ರಂಶವಾಗುವುದು ಬೇಡ. ನಾರಿಯರಿಗೆ ಇಹಪರಗಳಲ್ಲಿಯೂ ಪತಿಯೇ ಪರಮಗತಿ.'

---

ತತ್ರ ಸಾ ಖಿನ್ನಮನಸಂ ತಂ ದೃಷ್ಟ್ವಾ ಪೃಚ್ಛದಾಕುಲಾ ।
ಆರ್ಯಪುತ್ರ ಕಿಮದ್ಯೈವಮಕಸ್ಮಾದ್ ದುರ್ಮನಾಯಸೇ ॥ ೪೧

ತತ್ ಶ್ರುತ್ವಾ ಸ ಮಹೀಭೃತ್ತಾಮೇವಂ ಕೃತಕಮಭ್ಯಧಾತ್ ।
ಅದ್ಯಾಗತ್ಯ ಮಹಾಜ್ಞಾನೀ ದೇವಿ ಮಾಂ ಕೋಽಪ್ಯಭಾಷತ ॥ ೪೨

ರಾಜನ್ ಗುಣವರಾ ದೇವೀ ಕಾಲಂ ಕಂಚನ ಭೂಗೃಹೇ ।
ಸ್ಥಾಪನೀಯಾ ತ್ವಯಾ ಭಾವ್ಯಂ ಸ್ವಯಂ ಚ ಬ್ರಹ್ಮಚಾರಿಣಾ ॥ ೪೩

ರಾಜ್ಯಭ್ರಂಶೋಽನ್ಯಥಾ ತೇ ಸ್ಯಾನ್ಮೃತ್ಯುಸ್ತಸ್ಯಾಶ್ಚ ನಿಶ್ಚಿತಮ್ ।
ಇತ್ಯುಕ್ತ್ವಾ ಸ ಗತೋ ಜ್ಞಾನೀ ವಿಷಾದೋಽಯಂ ತತೋ ಮಮ ॥ ೪೪

ಏವಂ ತೇನೋದಿತೇ ರಾಜ್ಞಾ ರಾಜ್ಞೀ ಗುಣವರಾ ತು ಸಾ ।
ಭಯಾನುರಾಗವಿಭ್ರಾಂತಾ ತಂ ಜಗಾದ ಪತಿವ್ರತಾ ॥ ೪೫

ತರ್ಹ್ಯಾರ್ಯಪುತ್ರ ನಾದ್ಯೈವ ಕಿಂ ಮಾಂ ಕ್ಷಿಪಸಿ ಭೂಗೃಹೇ ।
ಧನ್ಯಾಸ್ಮ್ಯಸ್ಮಿ ಯದಿ ಪ್ರಾಣೈರಪಿ ಸ್ಯಾನ್ಮೇ ಹಿತಂ ತವ ॥ ೪೬

ಮಮ ವಾ ಮೃತ್ಯುರಸ್ತ್ವೇವ ತವ ಮಾ ಭೂದನಿರ್ವೃತಿಃ ।
ಇಹಾಮುತ್ರ ಚ ನಾರೀಣಾಂ ಪರಮಾ ಹಿ ಗತಿಃ ಪತಿಃ ॥ ೪೭

೪೮. ಹೀಗೆ ಅವಳ ಮಾತನ್ನು ಕೇಳಿದ ಆ ರಾಜನು ಕಣ್ಣೀರು ಸುರಿಸುತ್ತ ಚಿಂತಿಸಿದನು. "ಇವಳಲ್ಲಿಯಾಗಲಿ ಅಥವಾ ಆ ಸುರಕ್ಷಿತನಲ್ಲಿಯಾಗಲಿ ಕೆಟ್ಟದ್ದನ್ನು ನಾನು ಅನುಮಾನಿಸಲಾರೆ.

೪೯. ಅವನ ಮುಖವು ಬಾಡದೇ ನಿರಾತಂಕವಾಗಿದ್ದನ್ನು ನಾನು ಗಮನಿಸಿದ್ದೇನೆ. ಆದರೂ ಅಯ್ಯೋ, ಈ ವದಂತಿಯಲ್ಲಿ ನಿಜವೇನೆಂದು ನಿಶ್ಚಿತವಾಗಿ ತಿಳಿಯಬಯಸುತ್ತೇನೆ.'

೫೦. ಎಂದು ಆಲೋಚನೆ ಮಾಡಿ ಆ ರಾಜನು ದುಃಖದಿಂದ ರಾಣಿಗೆ ಹೇಳಿದನು. "ಇಲ್ಲಿಯೇ ನೆಲಮಾಳಿಗೆಯನ್ನು ನಿರ್ಮಿಸಲು ಅನುಮತಿ ನೀಡು'.

೫೧. ಆಗಲಿ ಎಂದು ಅವಳೆನ್ನಲು ಅಲ್ಲಿಯೇ ಅಂತಃಪುರದಲ್ಲಿ ಹೋಗಿಬರಲು ಸುಲಭವಾದ ನೆಲಮಾಳಿಗೆಯನ್ನು ಮಾಡಿಸಿ ರಾಣಿಯನ್ನು ಅಲ್ಲಿ ಇರಿಸಿದನು.

೫೨. ಆಕೆಯ ಮಗ ಶೃಂಗಭುಜನು ವಿಷಣ್ಣನಾಗಿ ಕಾರಣವನ್ನು ಕೇಳಿದಾಗ ಅವನು ರಾಣಿಗೆ ಹೇಳಿದ ಮಾತನ್ನೇ ಪುನರುಚ್ಚರಿಸಿ ಅವನನ್ನು ಸಮಾಧಾನಪಡಿಸಿದನು.

೫೩. ರಾಣಿ ಗುಣವರೆಯು ರಾಜನಿಗೆ ಒಳಿತಾಗುವುದೆಂದು ನೆಲಮಾಳಿಗೆಯನ್ನೇ ಸ್ವರ್ಗವೆಂದು ಭಾವಿಸಿದಳು. ಪತಿವ್ರತಾಸ್ತ್ರೀಯರಿಗೆ ಸ್ವಂತ ಸುಖವೆಂಬುದು ಇರುವುದಿಲ್ಲ. ಗಂಡನ ಸುಖವೇ ಅವರಿಗೆ ಸುಖ.

೫೪. ಇಷ್ಟೆಲ್ಲ ಆದಮೇಲೆ ರಾಜನ ಮತ್ತೋರ್ವ ರಾಣಿ ಅಯಶೋಲೇಖೆಯು ತನ್ನ ಮಗನಾದ ನಿರ್ವಾಸಭುಜನೆಂಬುವನಿಗೆ ಹೀಗೆಂದಳು.

---

ಇತಿ ತಸ್ಯಾ ವಚಃ ಶ್ರುತ್ವಾ ಸಾಶ್ರುಃ ಸೋಽಚಿಂತಯತ್ ಪ್ರಭುಃ ।
ಶಂಕೇ ನ ಪಾಪಮೇತಸ್ಯಾಂ ನ ಚ ತಸ್ಮಿನ್ ಸುರಕ್ಷಿತೇ ॥ ೪೮
ಸಹ್ಯಮ್ಲಾನಮುಖಚ್ಛಾಯೋ ನಿರಾಶಂಕೋ ಮಯೇಕ್ಷಿತಃ ।
ಕಷ್ಟಂ ತಥಾಪಿ ಜಿಜ್ಞಾಸೇ ಪ್ರವಾದಸ್ಯಾಸ್ಯ ನಿಶ್ಚಯಮ್ ॥ ೪೯
ಇತ್ಯಾಲೋಚ್ಯ ಸ ತಾಂ ರಾಜಾ ರಾಜ್ಞೀಮಾಹ ಸ್ಮ ದುಃಖಿತಃ ।
ತದಿಹೈವ ವರಂ ದೇವಿ ಭೂಗೃಹಂ ಕ್ರಿಯತಾಮಿತಿ ॥ ೫೦
ತಥೇತಿ ಚ ತಯಾ ಪ್ರೋಕ್ತಸ್ತತ್ರೈವಾಂತಃಪುರೇ ಸುಗಮ್ ।
ವಿಧಾಯ ಭೂಗೃಹಂ ರಾಜಾ ದೇವೀಂ ತಾಂ ನಿದಧೇಽಥ ಸಃ ॥ ೫೧
ಪುತ್ರಂ ಶೃಂಗಭುಜಂ ತಸ್ಯಾ ವಿಷಣ್ಣಂ ಪೃಷ್ಟಕಾರಣಮ್ ।
ಆಶ್ವಾಸಯತ್ತದೇವೋಕ್ತ್ವಾ ರಾಜ್ಞೀಂ ತಾಂ ಸ ಯದುಕ್ತವಾನ್ ॥ ೫೨
ಸಾಪಿ ರಾಜ್ಞೋ ಹಿತಮಿತಿ ಸ್ವರ್ಗಂ ಮೇನೇ ಧರಾಗೃಹಮ್ ।
ಸ್ವಸುಖಂ ನಾಸ್ತಿ ಸಾಧ್ವೀನಾಂ ತಾಸಾಂ ಭರ್ತೃಸುಖಂ ಸುಖಮ್ ॥ ೫೩
ಏವಂ ಕೃತೇಽಯಶೋಲೇಖಾ ತಸ್ಯ ರಾಜ್ಞ್ಯಪರಾಥ ಸಾ ।
ನಿರ್ವಾಸಭುಜನಾಮಾನಂ ಸ್ವೈರಂ ಸ್ವಸುತಮಭ್ಯಧಾತ್ ॥ ೫೪

೫೫. 'ನಮ್ಮನ್ನು ಕಂಡರಾಗದ ಗುಣವರೆಯನ್ನು ರಾಜನು ನೆಲಮಾಳಿಗೆಗೆ ತಳ್ಳಿದನು. ಆಕೆಯ ಮಗನೂ ಇಲ್ಲಿಂದ ತೊಲಗಿ ಬಿಟ್ಟರೆ ಇನ್ನೂ ಒಳಿತಾಗುತ್ತದೆ.

೫೬. ಆದ್ದರಿಂದ ಆ ಶೃಂಗಭುಜನನ್ನು ದೇಶದಿಂದ ಓಡಿಸಲು ಬೇಕಾದ ಉಪಾಯವನ್ನು ನೀನು ಇನ್ನಿತರ ಸೋದರರೊಂದಿಗೆ ಕಲೆತು ಆಲೋಚನೆ ಮಾಡು.'

೫೭. ಹೀಗೆ ತಾಯಿಯು ಹೇಳಿಕೊಟ್ಟಮೇಲೆ ಅಸೂಯಾಪರನಾದ ನಿರ್ವಾಸಭುಜನು ಉಳಿದ ಸೋದರರಿಗೆಲ್ಲ ತಿಳಿಸಿ ತಕ್ಕ ಉಪಾಯವನ್ನು ವಿಚಾರಮಾಡುತ್ತಿದ್ದನು.

೫೮. ಒಮ್ಮೆ ಆ ರಾಜಕುಮಾರರೆಲ್ಲ ದೊಡ್ಡ ಅಸ್ತ್ರಗಳನ್ನು ಪ್ರಯೋಗಿಸುತ್ತಾ ಇದ್ದಾಗ ಅರಮನೆಯ ಉಪ್ಪರಿಗೆಯ ಮೇಲೆ ಇದ್ದ ದೊಡ್ಡ ಶರೀರದ ಒಂದು ಕೊಕ್ಕರೆಯನ್ನು ನೋಡಿದರು.

೫೯. ವಿಕಾರವಾಗಿದ್ದ ಆ ಕೊಕ್ಕರೆಯನ್ನು ಆಶ್ಚರ್ಯದಿಂದ ಅವರು ನೋಡುತ್ತಿದ್ದಾಗ ಅದೇ ಮಾರ್ಗದಲ್ಲಿ ಬಂದ ಜ್ಞಾನಿಯಾದ ಬೌದ್ಧ ಸನ್ಯಾಸಿಯೊಬ್ಬನು ಹೇಳಿದನು.

೬೦. ರಾಜಪುತ್ರರೇ ! ಇದು ಕೊಕ್ಕರೆಯಲ್ಲ. ಈ ರೂಪದಲ್ಲಿ ಅಗ್ನಿಶಿಖನೆಂಬ ರಾಕ್ಷಸನು ನಗರಗಳನ್ನು ನಾಶಪಡಿಸುತ್ತಾ ಸುತ್ತಾಡುತ್ತಿದ್ದಾನೆ.

೬೧-೬೨. ಇದಕ್ಕೆ ದೊಣ್ಣೆಗಳಿಂದ ಹೊಡೆದು ಏಟುತಿಂದು ಇಲ್ಲಿಂದ ಹೋಗುವಂತೆ ಮಾಡಿರಿ. ಕ್ಷಪಣಕನಿಂದ ಈ ಮಾತನ್ನು ಕೇಳಿದ ತೊಂಬತ್ತೊಂಬತ್ತು ಹಿರಿಯ ಸಹೋದರರೂ ಕಾಂಡಗಳನ್ನು ಎಸೆದರು. ಆದರೆ ಯಾರ ಕಾಂಡವೂ ಬಕನಿಗೆ ತಗುಲಲಿಲ್ಲ. ಆಗ ಆ ನಗ್ನ ಶ್ರಮಣನು ಅವರಿಗೆ ಮತ್ತೆ ಹೇಳಿದನು:

---

ರಾಜ್ಞಾಸ್ಮದ್ವಿದ್ವಿಧುರಾ ತಾವತ್ತ್ಯಾತೇ ಗುಣವರಾರ್ಪಿತಾ ।
ಏತತ್ಪುತ್ರಶ್ಚ ದೇಶಾಚ್ಚೇದಿತೋ ಗಚ್ಛೇತ್ ಸುಖಂ ಭವೇತ್ ॥ ೫೫

ತಸ್ಯ ಶೃಂಗಭುಜೋ ದೇಶಾನ್ನಿರ್ವಾಸ್ಯೇತಾಚಿರಾದ್ಯಥಾ ।
ತಾಂ ಪುತ್ರ ಚಿಂತಯೇರ್ಯುಕ್ತಿಂ ತ್ವಮನ್ಯೈರ್ಭ್ರಾತೃಭಿಃ ಸಹ ॥ ೫೬

ಇತಿ ಮಾತ್ರೋದಿತಃ ಸೋಽನ್ಯಾನ್ ಭ್ರಾತೄನುಕ್ತ್ವಾ ಸಮತ್ಸರಃ ।
ಆಸ್ತೇ ಸ್ಮ ನಿರ್ವಾಸಭುಜಸ್ತತ್ರೋಪಾಯಂ ವಿಚಿಂತಯನ್ ॥ ೫೭

ಏಕದಾ ತೇ ಮಹಾಸ್ತ್ರಾಣಿ ಪ್ರಯುಂಜಾನಾ ನೃಪಾತ್ಮಜಾಃ ।
ಪ್ರಾಸಾದಾಗ್ರೇ ಮಹಾಶರೀರಂ ಸರ್ವೇಽಪಿ ದದೃಶುರ್ಬಕಮ್ ॥ ೫೮

ವಿಕೃತಂ ಪಕ್ಷಿಣಂ ತಂ ಚ ಪಶ್ಯತಸ್ತಾನ್ ಸುವಿಸ್ಮಯಾನ್ ।
ಜ್ಞಾನೀ ಕ್ಷಪಣಕಃ ಕೋಽಪಿ ಪಥಾ ತೇನಾಗತೋಽಬ್ರವೀತ್ ॥ ೫೯

ರಾಜಪುತ್ರಾ ಬಕೋ ನಾಯಂ ರೂಪೇಣಾನೇನ ರಾಕ್ಷಸಃ ।
ಭ್ರಮತ್ಯಗ್ನಿಶಿಖಾಖ್ಯೋಽಯಂ ನಗರಾಣಿ ವಿನಾಶಯನ್ ॥ ೬೦

ತದ್ವಿಧ್ಯತೈನಂ ಕಾಂಡೇನ ಯಾವದ್ಗಚ್ಛತ್ವಿತೋ ಹತಃ ।
ಏತತ್ಕ್ಷಪಣಕಾತ್ ಶ್ರುತ್ವಾ ನವತಿಸ್ತೇ ನವಾಧಿಕಾಃ ॥ ೬೧

ಕಾಂಡಾನಿ ಚಿಕ್ಷಿಪುರ್ಜ್ಯೇಷ್ಠಾ ನೈಕೋಽಪ್ಯಾಹತವಾನ್ ಬಕಮ್ ।
ತತೋ ನಗ್ನಕ್ಷಪಣಕಃ ಪುನಸ್ತಾನಬ್ರವೀಚ್ಚ ಸಃ ॥ ೬೨

೬೩. ನಿಮ್ಮಲ್ಲಿ ಕಿರಿಯ ಸೋದರನಾದ ಶೃಂಗಭುಜನು ಬಕನನ್ನು ಕೊಲ್ಲಲು ಸಮರ್ಥನಿದ್ದಾನೆ ಆದ್ದರಿಂದ ಅವನು ಯೋಗ್ಯ ಬಿಲ್ಲನ್ನು ಕೈಗೆತ್ತಿಕೊಳ್ಳಲಿ.

೬೪. ಅದನ್ನು ಕೇಳುತ್ತಲೇ ದುರ್ಬುದ್ಧಿಯ ನಿರ್ವಾಸಭುಜನು ತಾಯಿಯ ಮಾತನ್ನು ನೆನೆಸಿಕೊಂಡು ಅವಳ ಮಾತನ್ನು ನಡೆಸಲು ಯೋಗ್ಯ ಅವಕಾಶವು ದೊರಕಿತೆಂದು ಆ ಕೂಡಲೇ ಚಿಂತಿಸಿದನು.

೬೫. ಈ ಶೃಂಗಭುಜನನ್ನು ದೂರ ಕಳಿಸಲು ಇದೇ ಉಪಾಯವಾಗುತ್ತದೆ. ಆದ್ದರಿಂದ ತಂದೆಗೆ ಸಂಬಂಧಿಸಿರುವ ಬಿಲ್ಲುಬಾಣಗಳನ್ನು ಇವನಿಗೆ ನೀಡೋಣ.

೬೬. ಚಿನ್ನದ ಆ ಬಾಣದ ಪೆಟ್ಟು ತಿಂದು ಬಕನೇನಾದರೂ ಅದನ್ನು ಒಯ್ದು ಹೋಗಿಬಿಟ್ಟರೆ ಆಗ ನಾವು ಆ ಬಾಣವನ್ನು ಹುಡುಕುತ್ತಿರುವಾಗ ಈತನೂ ಹುಡುಕಲು ಹೊರಡುತ್ತಾನೆ

೬೭. ಎಷ್ಟೇ ಹುಡುಕಿದರೂ ಬಕನು ಕಾಣಸಿಗದಿದ್ದರೆ ಇವನು ಅತ್ತಿತ್ತ ಅಡ್ಡಾಡುತ್ತಾ ಇರುತ್ತಾನೆ ಇವನು ಬಾಣವಿಲ್ಲದೇ ಇಲ್ಲಿಗೆ ಹಿಂದಿರುಗನು.

೬೮. ಹೀಗೆ ಆಲೋಚಿಸಿದ ಆ ಪಾಪಿಯು ಬಕನನ್ನು ಕೊಲ್ಲಲೆಂದು ತಂದೆಯ ಬಿಲ್ಲುಬಾಣಗಳನ್ನು ಶೃಂಗಭುಜನಿಗೆ ನೀಡಿದನು.

---

ಅಯಂ ಕನೀಯಾನ್ ಯುಷ್ಮಾಕಂ ಭ್ರಾತಾ ಶೃಂಗಭುಜೋ ಬಕಮ್ ।
ಶಕ್ನೋತಿ ಹಂತುಮೇತಂ ತದ್ ಗೃಹ್ಣಾತ್ವೇಷ ಕ್ಷಮಂ ಧನುಃ ॥ ೬೩

ತತ್ಶ್ರುತ್ವೈವ ಸ್ಮರನ್ಮಾತುಸ್ತಲ್ಲಬ್ಧಾವಸರಂ ವಚಃ ।
ಸ ನಿರ್ವಾಸಭುಜೋ ಜಾಲ್ಮಸ್ತತ್ಕ್ಷಣಂ ಸಮಚಿಂತಯತ್ ॥ ೬೪

ಸೋಽಯಂ ಶೃಂಗಭುಜಸ್ಯಾಸ್ಯ ಸ್ಯಾದುಪಾಯಃ ಪ್ರವಾಸನೇ ।
ತದರ್ಪಯಾಮಸ್ತಾತಸ್ಯ ಸಂಬಂಧ್ಯಸ್ಮೈ ಧನುಃಶರಮ್ ॥ ೬೫

ಸೌವರ್ಣಂ ತಚ್ಛರಂ ಹೃತ್ವಾ ವಿದ್ಧೋ ಯಾಸ್ಯತಿ ಚೇದ್ಬಕಃ ।
ಪಶ್ಚಾದೇಷೋಽಪಿ ಗಂತಾಸ್ಯ ಮಾರ್ಗತ್ಸ್ವಾಸು ತಂ ಶರಮ್ ॥ ೬೬

ಯದಾ ಚ ಲಪ್ಸ್ಯತೇ ನೈತಂ ಚಿನ್ವನ್ರಕ್ಷೋಬಕಂ ತದಾ ।
ಸ್ಥಾಸ್ಯತೀತಸ್ತತೋ ಭ್ರಾಮ್ಯನ್ನೈಷ್ಯತೀಹ ಶರಂ ವಿನಾ ॥ ೬೭

ಇತ್ಯಾಲೋಚ್ಯ ದದೌ ತಸ್ಮೈ ಪಾಪಃ ಶೃಂಗಭುಜಾಯ ಸಃ ।
ಬಕಘಾತಾಯ ಸಶರಂ ಪಿತೃಸಂಬಂಧಿ ಕಾರ್ಮುಕಮ್ ॥ ೬೮

೧೯. ಬಲಶಾಲಿಯಾದ ಆ ಶೃಂಗಭುಜನು ರತ್ನದ ಪುಕ್ಕವುಳ್ಳ ಚಿನ್ನದ ಬಾಣವನ್ನು ತೆಗೆದುಕೊಂಡು ಎಳೆದು ಬಿಟ್ಟು ಬಕನಿಗೆ ಹೊಡೆದನು.

೨೦. ಆ ಬಕನು ಅದರ ಪೆಟ್ಟು ತಿಂದವನೇ ದೇಹಕ್ಕೆ ಅಂಟಿದ್ದ ಚಿನ್ನದ ಬಾಣದೊಂದಿಗೆ ರಕ್ತ ಧಾರೆಯನ್ನು ಸುರಿಸುತ್ತಾ ಅಲ್ಲಿಂದ ಓಡಿ ತಪ್ಪಿಸಿಕೊಂಡನು.

೨೧. ಅನಂತರ ವಂಚಕನಾದ ನಿರ್ವಾಸಭುಜನೂ ಮತ್ತು ಅವನ ಸೂಚನೆಯಿಂದ ಪ್ರೇರಿತರಾದ ಇತರ ಸೋದರರೂ ವೀರನಾದ ಶೃಂಗಭುಜನಿಗೆ ಹೀಗೆ ಹೇಳಿದರು:

೨೨. "ತಂದೆಗೆ ಸಂಬಂಧಿಸಿದ ಆ ಚಿನ್ನದ ಬಾಣವನ್ನು ಈಗ ನಮಗೆ ತಂದುಕೊಡು. ಇಲ್ಲದಿದ್ದರೆ ನಾವೆಲ್ಲರೂ ನಿನ್ನೆದುರಿಗೆ ಇಂದೇ ಪ್ರಾಣಬಿಡುತ್ತೇವೆ.

೨೩. ಅದಿಲ್ಲದೇ ತಂದೆಯು ನಮ್ಮನ್ನು ಇಲ್ಲಿಂದ ಹೊರಕ್ಕೆ ಕಳಿಸುತ್ತಾನೆ. ಅದೇ ರೀತಿಯ ಇನ್ನೊಂದನ್ನು ಮಾಡಲು ಅಥವಾ ಪಡೆಯಲು ಸಾಧ್ಯವೇ ಇಲ್ಲ.'

೨೪. ಅದನ್ನು ಕೇಳುತ್ತಲೇ ಆ ಕಪಟಿಗಳಿಗೆ ವೀರನಾದ ಶೃಂಗಭುಜನು ಹೇಳಿದನು : "ಧೈರ್ಯದಿಂದ ಇರಿ. ನಿಮಗೆ ಅಂಜಿಕೆಯಾಗುವುದು ಬೇಡ. ದೈನ್ಯವನ್ನು ಬಿಟ್ಟುಬಿಡಿ.

೨೫. ನಾನು ಈಗಲೇ ಹೋಗಿ ಆ ಹೀನರಾಕ್ಷಸನನ್ನು ಕೊಂದು ಬಾಣವನ್ನು ತಂದುಕೊಡುವೆ' ಇಷ್ಟು ಹೇಳಿ ಶೃಂಗಭುಜನು ಬಿಲ್ಲು ಬಾಣಗಳನ್ನು ತೆಗೆದುಕೊಂಡನು.

---

ಸ ಗೃಹೀತ್ವಾ ತದಾಕೃಷ್ಯ ತೇನ ಸ್ವರ್ಣಶರೇಣ ತಮ್ ।
ರತ್ನಪುಂಖೇನ ವಿವ್ಯಾಧ ಬಕಂ ಶೃಂಗಭುಜೋ ಬಲೀ ॥ ೧೯

ಸ ವಿದ್ಧಮಾತ್ರಸ್ತಂ ಕಾಯಲಗ್ನಮಾದಾಯ ಸಾಯಕಮ್ ।
ಬಕಃ ಸ್ರವದಸೃಗ್ಧಾರಃ ಪಲಾಯ್ಯೈವ ತತೋ ಯಯೌ ॥ ೨೦

ತತಃ ಶೃಂಗಭುಜಂ ವೀರಂ ಸ ನಿರ್ವಾಸಭುಜಃ ಶಠಃ ।
ತತ್ಸಂಜ್ಞಾಪ್ರೇರಿತಾಸ್ತೇ ಚ ಭ್ರಾತರೋಽನ್ಯೇ ತಮಬ್ರುವನ್ ॥ ೨೧

ದೇಹಿ ಹೇಮಮಯಂ ತಂ ನಸ್ತಾತಸಂಬಂಧಿನಂ ಶರಮ್ ।
ಅನ್ಯಥಾದ್ಯ ಶರೀರಾಣಿ ತ್ಯಕ್ಷ್ಯಾಮಃ ಪುರತಸ್ತವ ॥ ೨೨

ತಾತಸ್ತೇನ ವಿನಾ ಹ್ಯಸ್ಮಾನಿತೋ ನಿರ್ವಾಸಯಿಷ್ಯತಿ ।
ನ ಚ ಕರ್ತುಂ ಗ್ರಹೀತುಂ ವಾ ಶಕ್ಯಂ ತತ್ಪ್ರತಿರೂಪಕಮ್ ॥ ೨೩

ತಚ್ಛ್ರುತ್ವೈವ ಸ ಜಿಹ್ಮಾಂಸ್ತಾನ್ ವೀರಃ ಶೃಂಗಭುಜೋಽಬ್ರವೀತ್ ।
ಧೀರಾ ಭವತ ಮಾ ಭೂದ್ವೋ ಭಯಂ ಕಾರ್ಪಣ್ಯಮುಜ್ಝತ ॥ ೨೪

ಆನೇಷ್ಯಾಮಿ ಶರಂ ಗತ್ವಾ ಹತ್ವಾ ತಂ ರಾಕ್ಷಸಾಧಮಮ್ ।
ಇತ್ಯುಕ್ತ್ವಾ ಸಶರಂ ಚಾಪಂ ನಿಜಂ ಶೃಂಗಭುಜೋಽಗ್ರಹೀತ್ ॥ ೨೫

೭೬. ಮತ್ತೆ ನೆಲದ ಮೇಲೆ ಬಿದ್ದಿದ್ದ ರಕ್ತದ ಧಾರೆಯನ್ನು ಅನುಸರಿಸುತ್ತಾ ವೇಗವಾಗಿ ಬಕನು ಹೋದ ದಿಕ್ಕಿಗೇ ಹೋದನು.

೭೭. ಅವರೂ ಇನ್ನಿತರರೂ ಸಂತೋಷಪಟ್ಟುಕೊಂಡು ತಾಯಂದಿರ ಬಳಿಗೆ ಹೋಗಲು, ಶೃಂಗಭುಜನು ದೂರ ಹೋಗುತ್ತಾ ಕ್ರಮೇಣ ಒಂದು ಕಾಡನ್ನು ತಲುಪಿದನು.

೭೮. ಅಲ್ಲಿ ಕಾಡಿನ ಮಧ್ಯೆ ಹುಡುಕುತ್ತಾ ಸಕಾಲದಲ್ಲಿ ಸುಖಪಡಲೆಂದು ಸಿಕ್ಕಿದ ಪುಣ್ಯವೆಂಬ ವೃಕ್ಷದ ಫಲದಂತೆ, ದೊಡ್ಡ ಪಟ್ಟಣವೊಂದನ್ನು ಕಂಡನು.

೭೯. ಅವನು ಅಲ್ಲಿಯ ಉದ್ಯಾನವನದ ಮರದ ಬುಡದಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದಾಗ ಸ್ವಲ್ಪ ಹೊತ್ತಿನಲ್ಲಿಯೇ ಆಶ್ಚರ್ಯಕರವಾದ ರೂಪವುಳ್ಳ ಕನ್ಯೆಯೊಬ್ಬಳು ಬರುತ್ತಿರುವುದನ್ನು ಕಂಡನು.

೮೦–೮೧. ವಿರಹದಲ್ಲಿ ಪ್ರಾಣವನ್ನು ಕೊಂಡೊಯ್ಯುವ, ಸಮಾಗಮದಲ್ಲಿ ಪ್ರಾಣ ನೀಡುವ (ಆದುದರಿಂದಲೇ) ಬ್ರಹ್ಮನು ವಿಷ ಮತ್ತು ಅಮೃತಗಳೆರಡರಿಂದಲೂ ನಿರ್ಮಿಸಿದ ವಿಚಿತ್ರ ಸೃಷ್ಟಿಯಂತಿರುವ, ಪ್ರೇಮಸೂಸುವ ಕಣ್ಣುಗಳೊಂದಿಗೆ ಮೆಲ್ಲಗೆ ಬಳಿಬಂದ ಅವಳನ್ನು ನೋಡುತ್ತಾ ಅವಳಲ್ಲೇ ನೆಟ್ಟ ಮನಸ್ಸುಳ್ಳವನಾಗಿ ರಾಜಕುಮಾರನು ಹೀಗೆ ಕೇಳಿದನು:

೮೨. "ಎಲೈ ಜಿಂಕೆಯ ಕಣ್ಣಿನವಳೇ ! ಇದು ಯಾರ ಊರು ! ಇದರ ಹೆಸರು ಏನು ? ನೀನು ಯಾರು ? ನೀನು ಇಲ್ಲಿಗೆ ಬಂದ ಕಾರಣವಾದರೂ ಏನು ? ಹೇಳು.'

---

ಯಯೌ ಚ ತಾಂ ಸಮುದ್ದಿಶ್ಯ ದಿಶಂ ಯಾಂ ಸ ಬಕೋ ಗತಃ ।
ಪತಿತಾಂ ತದಸೃಗ್ಧಾರಾಂ ಭೂಮಾವನುಸರನ್ ಜವಾತ್ ॥ ೭೬

ಹೃಷ್ಟೇಷು ತೇಷು ಚಾನ್ಯೇಷು ಮಾತೃಪಾರ್ಶ್ವಂ ಗತೇಷ್ವಥ ।
ಗಚ್ಛನ್‌ಸ ಕ್ರಮಶಃ ಪ್ರಾಪ ದೂರಾಂ ಶೃಂಗಭುಜೋಽಟವೀಮ್ ॥ ೭೭

ತಸ್ಯಾಂ ದದರ್ಶ ಚಿನ್ವಾನೋ ವನಸ್ಯಾಂತರ್ಮಹತ್ ಪುರಮ್ ।
ಭೋಗಾಯೋಪನತಂ ಕಾಲೇ ಫಲಂ ಪುಣ್ಯತರೋರಿವ ॥ ೭೮

ತತ್ರೋದ್ಯಾನತರೋರ್ಮೂಲೇ ಸ ವಿಶ್ರಾಂತಃ ಕ್ಷಣಾದಿವ ।
ಆಶ್ಚರ್ಯರೂಪಾಮಾಯಾಂತೀಮತ್ರ ಕನ್ಯಾಮವೈಕ್ಷತ ॥ ೭೯

ವಿರಹೇ ಜೀವಿತಹರಾಂ ಸಂಗಮೇ ಪ್ರಾಣದಾಯಿನೀಮ್ ।
ವಿಚಿತ್ರಾಂ ನಿರ್ಮಿತಾಂ ಧಾತ್ರಾ ವಿಷಾಮೃತಮಯೀಮಿವ ॥ ೮೦

ಶನೈರುಪಗತಾಂ ತಾಂ ಚ ಚಕ್ಷುಷಾ ಪ್ರೇಮವರ್ಷಿಣಾ ।
ಪಶ್ಯಂತೀಂ ತದ್ಗತಮನಾಃ ಸ ಪಪ್ರಚ್ಛ ನೃಪಾತ್ಮಜಃ ॥ ೮೧

ಕಿಂ ನಾಮಧೇಯಂ ಕಸ್ಯೇದಂ ಪುರಂ ಹರಿಣಲೋಚನೇ ।
ತ್ವಂ ಚ ಕಾ ಕಿಂ ತವೇಹಾಯಮಾಗಮಃ ಕಥ್ಯತಾಮಿತಿ ॥ ೮೨

೬೩. ಆಗ ಮುಖವನ್ನು ಸ್ವಲ್ಪ ಬಾಗಿಸಿಕೊಂಡು ನೆಲವನ್ನೇ ನೋಡುತ್ತಾ, ಆ ಸುಂದರಿಯು ಮಧುರವೂ ಪ್ರೇಮಪೂರ್ಣವೂ ಆದ ಮಾತಿನಿಂದ ಅವನಿಗೆ ಹೇಳಿದಳು:

೬೪. "ಇದು ಧೂಮಪುರವೆಂಬ ಸಕಲೈಶ್ವರ್ಯಭರಿತವಾದ ಪಟ್ಟಣ. ಇಲ್ಲಿ ಅಗ್ನಿಶಿಖನೆಂಬ ರಾಕ್ಷಸ ನಾಯಕನು ವಾಸವಾಗಿದ್ದಾನೆ.

೬೫. ಅವನಿಗೆ ತಕ್ಕಂತಹ ಮಗಳಾದ ನಾನು ರೂಪಶಿಖೆ. ಇಲ್ಲಿಗೆ ಬಂದ ಅಸಾಧಾರಣವಾದ ರೂಪವುಳ್ಳ ನಿನ್ನಿಂದ ನನ್ನ ಮನಸ್ಸು ಅಪಹೃತವಾಗಿದೆ.

೬೬. ನನಗೆ ಹೇಳು. ನೀನು ಯಾರು ? ಇಲ್ಲಿಗೆ ಏಕೆ ಬಂದಿದ್ದೀಯೆ ?.' ಅವಳು ಹೀಗೆ ಪ್ರಶ್ನೆಮಾಡಿದಾಗ ಶೃಂಗಭುಜನು ತನ್ನ ಕಥೆಯೆಲ್ಲವನ್ನೂ ಹೇಳಿದನು.

೬೭. ತಾನು ಯಾರು, ತನ್ನ ಹೆಸರೇನು, ಯಾವ ರಾಜನ ಮಗನು, ಬಾಣದ ಸಲುವಾಗಿ ಆ ಧೂಮಪುರಕ್ಕೆ ಹೇಗೆ ಬಂದನು (ಎಂಬುದನ್ನೆಲ್ಲ ಹೇಳಿದನು.)

೬೮. ಆಮೇಲೆ ಸಂಗತಿಯೆಲ್ಲವನ್ನೂ ತಿಳಿದ ಆ ರೂಪಶಿಖೆಯು ಹೇಳಿದಳು. "ಮೂರೂ ಲೋಕಗಳಲ್ಲಿ ನಿನಗೆ ಸಮಾನನಾದ ಬೇರೊಬ್ಬ ಬಿಲ್ಲುಗಾರನು ಇಲ್ಲ.

೬೯. ಏಕೆಂದರೆ ದೊಡ್ಡ ಬಿಲ್ಗಾರನಾದ ನೀನು ಬಕರೂಪದಲ್ಲಿದ್ದ ತಂದೆಯನ್ನು ದೊಡ್ಡಬಾಣದಿಂದ ಪ್ರಹರಿಸಿದ್ದೀಯೆ. ಆ ಚಿನ್ನದ ಬಾಣವನ್ನು ಆಟಕ್ಕೆಂದು ನಾನು ತೆಗೆದುಕೊಂಡೆ.

---

ತತಃ ಸಾಚೀಕೃತಮುಖೀ ನ್ಯಸ್ತದೃಷ್ಟಿರ್ಮಹೀತಲೇ ।
ಸಾ ತಂ ಜಗಾದ ಸುದತೀ ಮಧುರಸ್ನಿಗ್ಧಯಾ ಗಿರಾ ॥ ೬೩

ಇದಂ ಧೂಮಪುರಂ ನಾಮ ಸರ್ವಸಂಪದ್ಗೃಹಂ ಪುರಮ್ ।
ಅಸ್ಮಿನ್ ವಸತ್ಯಗ್ನಿಶಿಖೋ ನಾಮ ರಾಕ್ಷಸಪುಂಗವಃ ॥ ೬೪

ತಸ್ಯ ರೂಪಶಿಖಾಂ ನಾಮ ಸದೃಶೀಂ ವಿದ್ಧಿ ಮಾಂ ಸುತಾಮ್ ।
ಇಹಾಗತಾಮಸಾಮಾನ್ಯತ್ವದ್ರೂಪಾಹೃತಮಾನಸಾಮ್ ॥ ೬೫

ತ್ವಂ ಬ್ರೂಹಿ ಮೇಽಧುನಾ ಕೋಽಸಿ ಕಿಮಿಹಾಭ್ಯಾಗತೋಽಸಿ ಚ ।
ಏವಮುಕ್ತೇ ತಯಾ ತಸ್ಮೈ ಸರ್ವಂ ಶೃಂಗಭುಜೋಽಬ್ರವೀತ್ ॥ ೬೬

ಯೋಽಸೌ ಯನ್ನಾಮಧೇಯಶ್ಚ ಯಸ್ಯ ಪುತ್ರೋ ಮಹೀಪತೇಃ ।
ಯಥಾ ಶರನಿಮಿತ್ತೇನ ತದ್ಧೂಮಪುರಮಾಗತಃ ॥ ೬೭

ತತೋ ವಿದಿತವೃತ್ತಾಂತಾ ಸಾ ತಂ ರೂಪಶಿಖಾಭ್ಯಧಾತ್ ।
ನ ತ್ವಯಾ ಸದೃಗನ್ಯೋಽಸ್ತಿ ತ್ರೈಲೋಕ್ಯೇಽಪಿ ಧನುರ್ಧರಃ ॥ ೬೮

ಯೇನ ತಾತೋಽಪ್ಯಸೌ ವಿದ್ಧೋ ಬಕರೂಪೋ ಮಹೇಷುಣಾ ।
ಸ ಚ ಹೇಮಮಯೋ ಬಾಣಃ ಸ್ವೀಕೃತಃ ಕ್ರೀಡಯಾ ಮಯಾ ॥ ೬೯

೯೦. ತಂದೆಯಾದರೋ ವಿಶಲ್ಯಕರಣೀ ಮುಂತಾದ ಪ್ರಮುಖ ಮಹೌಷಧಿಗಳನ್ನು ಬಲ್ಲ ಮಹಾದಂಷ್ಟ್ರನೆಂಬ ಮಂತ್ರಿಯಿಂದ ಇದೀಗ ಗಾಯವನ್ನು ವಾಸಿ ಮಾಡಿಕೊಂಡಿದ್ದಾನೆ

೯೧. ಆದ್ದರಿಂದ ತಂದೆಗೆ ತಿಳಿಸಿ, ಆರ್ಯಪುತ್ರನೇ ! ನಿನ್ನನ್ನು ಬೇಗನೆ ಒಳಕ್ಕೆ ಕರೆದೊಯ್ಯುವೆ. ನನ್ನ ಆತ್ಮವನ್ನು ಈಗ ನಿನಗೆ ಅರ್ಪಿಸಿಬಿಟ್ಟಿದ್ದೇನೆ.'

೯೨. ಹೀಗೆ ಹೇಳಿ ಶೃಂಗಭುಜನನ್ನು ಸ್ವಲ್ಪ ಹೊತ್ತು ಅಲ್ಲಿಯೇ ಇರಿಸಿ ರೂಪಶಿಖೆಯು ತಂದೆಯಾದ ಅಗ್ನಿಶಿಖನ ಬಳಿಗೆ ಹೋದಳು.

೯೩. "ಅಪ್ಪಾ ! ಶೃಂಗಭುಜನೆಂಬ ಒಬ್ಬ ರಾಜಕುಮಾರನು ಇಲ್ಲಿಗೆ ಬಂದಿದ್ದಾನೆ. ರೂಪ ಕುಲಶೀಲ, ವಯಸ್ಸು ಮತ್ತು ಗುಣಗಳಲ್ಲಿ ಅವನಂತಹವನು ಇನ್ನೊಬ್ಬನಿಲ್ಲ.

೯೪. ಯಾರೋ ದೇವಾಂಶ ಸಂಭೂತನೇ ಇಲ್ಲಿಗೆ ಇಳಿದು ಬಂದಿರಬೇಕು. ಅವನು ಮನುಷ್ಯನಲ್ಲ ಎಂದು ನಾನು ಭಾವಿಸಿದ್ದೇನೆ. ಅವನು ನನ್ನ ಪತಿಯಾಗದೇ ಇದ್ದರೆ ನಿಶ್ಚಿತವಾಗಿಯೂ ನಾನು ಪ್ರಾಣವನ್ನು ಕಳೆದುಕೊಳ್ಳುವೆನು.'

೯೫–೯೬. ಹೀಗೆ ಅವಳೆನ್ನಲು ತಂದೆಯಾದ ರಾಕ್ಷಸನು ಹೇಳಿದನು : 'ಮಗಳೇ, ಮನುಷ್ಯರು ನಮ್ಮ ಆಹಾರ. ಆದರೂ ನೀನು ಒತ್ತಾಯ ಮಾಡುವೆಯಾದರೆ ಆಗಲಿ. ಆ ರಾಜಕುಮಾರನನ್ನು ಇಲ್ಲಿಗೇ ಕರೆತಂದು ತೋರಿಸು.' ಅದನ್ನು ಕೇಳಿ ರೂಪಶಿಖೆಯು ಶೃಂಗಭುಜನ ಬಳಿಗೆ ಹೋದಳು.

---

ತಾತಸ್ತು ನಿರ್ವ್ರಣಃ ಸದ್ಯೋ ಮಹಾದಂಷ್ಟ್ರೇಣ ಮಂತ್ರಿಣಾ ।
ವಿಶಲ್ಯಕರಣೀಮುಖ್ಯಮಹೌಷಧಿವಿದಾ ಕೃತಃ ॥ ೯೦

ತದ್ಯಾಮಿ ತಾತಂ ಸಂಬೋಧ್ಯ ನಯಾಮ್ಯಭ್ಯಂತರಂ ದ್ರುತಮ್ ।
ತ್ವಾಮಾರ್ಯಪುತ್ರ ನ್ಯಸ್ತೋ ಹಿ ತ್ವಯ್ಯಾತ್ಮಾಯಂ ಮಯಾಧುನಾ ॥ ೯೧

ಇತ್ಯುಕ್ತ್ವಾ ತಮವಸ್ಥಾಪ್ಯ ತತ್ರ ಶೃಂಗಭುಜಂ ಕ್ಷಣಮ್ ।
ಯಯೌ ರೂಪಶಿಖಾ ಪಾರ್ಶ್ವಂ ಪಿತುರಗ್ನಿಶಿಖಸ್ಯ ಸಾ ॥ ೯೨

ತಾತ ಶೃಂಗಭುಜೋ ನಾಮ ರಾಜಸೂನುರಿಹಾಗತಃ ।
ಕೋಽಪ್ಯನನ್ಯಸಮೋ ರೂಪಕುಲಶೀಲವಯೋಗುಣೈಃ ॥ ೯೩

ಜಾನೇ ಕೋಽಪ್ಯವತೀರ್ಣೋಽತ್ರ ದೇವಾಂಶೋ ನ ಸ ಮಾನುಷಃ ।
ಸ ಚೇದ್ಭರ್ತಾ ನ ಮೇ ಸ್ಯಾತ್ತತ್ ತ್ಯಜೇಯಂ ಜೀವಿತಂ ಧ್ರುವಮ್ ॥ ೯೪

ಇತ್ಯುಕ್ತಃ ಸ ತಯಾ ತತ್ರ ಪಿತಾ ತಾಂ ರಾಕ್ಷಸೋಽಬ್ರವೀತ್ ।
ಮಾನುಷಾಃ ಪುತ್ರಿ ಭಕ್ಷ್ಯಾ ನಸ್ತಥಾಪಿ ಯದಿ ತೇ ಗ್ರಹಃ ॥ ೯೫

ತಥಾಸ್ತು ರಾಜಪುತ್ರಂ ತಮಿಹೈವಾನಾಯ್ಯ ದರ್ಶಯ ।
ತಚ್ಛ್ರುತ್ವಾ ಸಾ ಯಯೌ ರೂಪಶಿಖಾ ಶೃಂಗಭುಜಾಂತಿಕಮ್ ॥ ೯೬

೯೭. ತಂದೆಯು ಹೇಳಿದ್ದಂತೆಯೇ ಅವನನ್ನು ತಂದೆಯ ಬಳಿಗೆ ಕರೆದೊಯ್ದಳು. ಅಗ್ನಿಶಿಖನೂ ಸಹ ವಿನಯಶಾಲಿಯಾಗಿದ್ದ ಅವನನ್ನು ಗೌರವದಿಂದ ಕಂಡು ಹೇಳಿದನು.

೯೮. "ನನ್ನ ಮಾತನ್ನು ಎಂದೂ ಸ್ವಲ್ಪವೂ ಮೀರದೇ ಇದ್ದರೆ, ರಾಜಕುಮಾರನೇ ! ರೂಪಶಿಖೆಯನ್ನು ನಾನು ನಿನಗೆ ಮದುವೆಮಾಡಿಕೊಡುತ್ತೇನೆ.'

೯೯. ಅದಕ್ಕೆ ಶೃಂಗಭುಜನು "ನಿನ್ನ ಆಜ್ಞಾವಚನವನ್ನೆಂದೂ ಮೀರಿ ನಡೆಯುವುದಿಲ್ಲ' ಎಂದು ವಿನಯದಿಂದ ನುಡಿದನು.

೧೦೦. "ಹಾಗಾದರೆ ಏಳು. ಸ್ನಾನಗೃಹದಲ್ಲಿ ಸ್ನಾನ ಮಾಡಿ ಬಾ' ಎಂದು ಅಗ್ನಿಶಿಖನು ಸಂತೋಷದಿಂದ ಹೇಳಿದನು.

೧೦೧–೧೦೨. ಆಮೇಲೆ ಮಗಳನ್ನು ಕುರಿತು "ನೀನು ಹೋಗಿ ನಿನ್ನೆಲ್ಲ ಸೋದರಿಯರನ್ನೂ ಕರೆದುಕೊಂಡು ಬೇಗನೆ ಬಾ, ಎಂದು ಹೇಳಲು ಆಗಲಿ ಎಂದು ರೂಪಶಿಖೆ ಶೃಂಗಭುಜ ಇಬ್ಬರೂ ಅಲ್ಲಿಂದ ತೆರಳಿದರು.

೧೦೩. ಆಗ ಬುದ್ಧಿವಂತೆಯಾದ ಆ ರೂಪಶಿಖೆಯ ಶೃಂಗಭುಜನಿಗೆ ಹೇಳಿದಳು. "ಆರ್ಯಪುತ್ರನೇ, ನನಗೆ ನೂರು ಜನ ಸೋದರ ಕನ್ಯೆಯರಿದ್ದಾರೆ.

---

ಉಕ್ತ್ವಾ ಯಥಾ ಕೃತಂ ತಚ್ಚ ತಂ ನಿನಾಯಾಂತಿಕಂ ಪಿತುಃ ।
ಸೋಽಪಿ ತಂ ನಮ್ರಮಾದೃತ್ಯ ತತ್ಪಿತಾಗ್ನಿಶಿಖೋಽಬ್ರವೀತ್ ॥ ೯೭

ದದಾಮಿ ರಾಜಪುತ್ರೈತಾಂ ತುಭ್ಯಂ ರೂಪಶಿಖಾಮಹಮ್ ।
ಯದಿ ಮದ್ವಚನಂ ಕಿಂಚಿತ್ ನಾತಿಕ್ರಮಸಿ ಜಾತುಚಿತ್ ॥ ೯೮

ಇತ್ಯುಕ್ತವಂತಂ ತಂ ಸೋಽಪಿ ಪ್ರಹ್ವಃ ಶೃಂಗಭುಜೋಽಬ್ರವೀತ್ ।
ಬಾಢಮುಲ್ಲಂಘಯಿಷ್ಯಾಮಿ ನೈವಾಜ್ಞಾವಚನಂ ತವ ॥ ೯೯

ಇತಿ ಶೃಂಗಭುಜೇನೋಕ್ತಸ್ತುಷ್ಟಃ ಸೋಽಗ್ನಿಶಿಖೋಽಭ್ಯಧಾತ್ ।
ಉತ್ತಿಷ್ಠ ತರ್ಹಿ ಸ್ನಾತ್ವಾ ತ್ವಮಾಗಚ್ಛ ಸ್ನಾನವೇಶ್ಮನಃ ॥ ೧೦೦

ತಮೇವಮುಕ್ತ್ವಾವಾದೀತ್ತಾಂ ಸುತಾಂ ರೂಪಶಿಖಾಂ ಚ ಸಃ ।
ತ್ವಂ ಗಚ್ಛ ಸರ್ವಾ ಭಗಿನೀರಾದಾಯಾಗಚ್ಛ ಸತ್ವರಮ್ ॥ ೧೦೧

ಏವಮಗ್ನಿಶಿಖೇನೋಕ್ತೌ ತೇನ ನಿರ್ಜಗ್ಮತುಸ್ತತಃ ।
ತಥೇತಿ ತಾವುಭೌ ಶೃಂಗಭುಜೋ ರೂಪಶಿಖಾ ಚ ಸಾ ॥ ೧೦೨

ತತಸ್ತಂ ಸಾ ಸುಧೀಃ ಶೃಂಗಭುಜಂ ರೂಪಶಿಖಾಭ್ಯಧಾತ್ ।
ಆರ್ಯಪುತ್ರ ಕುಮಾರೀಣಾಂ ಸ್ವಸ್ರೂಣಾಮಸ್ತಿ ಮೇ ಶತಮ್ ॥ ೧೦೩

೧೦೪. ನಾವೆಲ್ಲರೂ ಒಂದೇ ತರಹ ಇದ್ದೇವೆ. ಒಂದೇ ರೀತಿಯ ಆಭರಣ. ಅಂಥದೇ ಬಟ್ಟೆ. ನಮ್ಮೆಲ್ಲರ ಕೊರಳಿನಲ್ಲಿಯೂ ಒಂದೇ ರೀತಿಯ ಹಾರಲತೆಗಳಿರುತ್ತವೆ.

೧೦೫. ಆದ್ದರಿಂದ ನಮ್ಮ ತಂದೆಯು ನಿನಗೆ ಭ್ರಮೆಯುಂಟುಮಾಡಲೋಸುಗ ನಮ್ಮೆಲ್ಲರನ್ನೂ ಸೇರಿಸಿ ಇವರಲ್ಲಿ ಯಾರು ನಿನಗೆ ಇಷ್ಟವೋ ಅವಳನ್ನು ಆರಿಸಿಕೋ' ಎಂದು ಹೇಳುತ್ತಾನೆ.

೧೦೬. ಅವನ ಈ ಕಪಟ ಅಭಿಪ್ರಾಯವನ್ನೆಲ್ಲ ನಾನು ಬಲ್ಲೆ. ಇಲ್ಲದಿದ್ದರೆ ಅವನೇಕೆ ನಮ್ಮೆಲ್ಲರನ್ನೂ ಒಟ್ಟಿಗೆ ಸೇರಿಸುತ್ತಾನೆ ?

೧೦೭. ಆಗ ನಾನು ನನ್ನ ಕೊರಳಹಾರವನ್ನು ತಲೆಯ ಮೇಲಕ್ಕೆ ತರುತ್ತೇನೆ. ಅದರಿಂದ ನನ್ನನ್ನು ಕಂಡುಹಿಡಿದು ನೀನು ಹೂಮಾಲೆಯನ್ನು ನನ್ನ ಮೇಲೆ ಎಸೆಯಬೇಕು.

೧೦೮. ನನ್ನ ತಂದೆಯು ದೆವ್ವದಂತೆ. ಅವನಿಗೆ ವಿವೇಕ, ಬುದ್ಧಿಯಿಲ್ಲ. ಹಾಗೆಯೇ ಜಾತಿಗೆ ಸಹಜವಾದ ಅವನ ಜಾಡು ನನಗೂ ಎಲ್ಲಿ ಹೋಗುತ್ತದೆ ?

೧೦೯. ಆದ್ದರಿಂದ ನಿನ್ನನ್ನು ಮೋಸಗೊಳಿಸಲು ಅವನು ಏನೇನು ಹೇಳುವನೋ ಅವೆಲ್ಲವನ್ನೂ ಒಪ್ಪಿಕೊಂಡು ನನಗೆ ಹೇಳಬೇಕು. ಮುಂದೇನು ಮಾಡಬೇಕೆಂಬುದು ನನಗೆ ಗೊತ್ತಿದೆ.'

೧೧೦. ಇಷ್ಟು ಹೇಳಿದ ಆ ರೂಪಶಿಖೆಯು ಸೋದರಿಯರ ಸನಿಹಕ್ಕೆ ನಡೆದಳು. 'ಹಾಗೆಯೇ ಆಗಲಿ' ಎಂದು ಹೇಳಿ ಶೃಂಗಭುಜನೂ ಸ್ನಾನ ಮಾಡಲು ತೆರಳಿದನು.

---

ಸರ್ವಾ ವಯಂ ಸದೃಶ್ಯಶ್ಚ ತುಲ್ಯಾಭರಣವಾಸಸಃ ।
ಸರ್ವಾಸಾಂ ಸಂತಿ ಕಂಠೇಷು ತುಲ್ಯಾ ಹಾರಲತಾಶ್ಚ ನಃ ॥ ೧೦೪

ತತ್ತಾತೋ ಮೇಲಯಿತ್ವಾಸ್ಮಾಂಸ್ತ್ವಾಂ ವಿಮೋಹಯಿತುಂ ಪ್ರಿಯ ।
ಆಸಾಂ ಮಧ್ಯಾದಭೀಷ್ಟಾಂ ತ್ವಂ ವೃಣೀಷ್ವೇತಿ ವದಿಷ್ಯತಿ ॥ ೧೦೫

ಜಾನಾಮ್ಯೇತಮಹಂ ತಸ್ಯ ವ್ಯಾಜಾಭಿಪ್ರಾಯಮೀದೃಶಮ್ ।
ಸರ್ವಾಃ ಸಂಘಟಯತ್ಯಸ್ಮಾನ್ ಕಿಮರ್ಥಮಯಮನ್ಯಥಾ ॥ ೧೦೬

ತದಾ ಮೂರ್ಧ್ನಿ ಕರಿಷ್ಯೇ ಚ ಕಂಠಾದ್ಧಾರಲತಾಮಹಮ್ ।
ತದಭಿಜ್ಞಾನಲಬ್ಧಾಯಾಂ ವನಮಾಲಾಂ ಮಯಿ ಕ್ಷಿಪೇಃ ॥ ೧೦೭

ಭೌತಪ್ರಾಯಶ್ಚ ತಾತೋಽಯಂ ಬುದ್ಧಿರ್ನಾಸ್ಯ ವಿವೇಕಿನೀ ।
ತಥಾ ಮಯ್ಯಪಿ ಮಾರ್ಗೋಽಸ್ಯ ಜಾತಿಸಿದ್ಧಃ ಕ್ವ ಗಚ್ಛತಿ ॥ ೧೦೮

ತದೇಷ ವಂಚನಾರ್ಥಂ ತೇ ಯದ್ಯತ್ಕಿಂಚಿದ್ವದಿಷ್ಯತಿ ।
ಅಂಗೀಕೃತ್ಯ ತ್ವಯಾ ತತ್ತದ್ವಾಚ್ಯಂ ಮೇ ವೇದ್ಮ್ಯಹಂ ಪರಮ್ ॥ ೧೦೯

ಇತ್ಯುಕ್ತ್ವಾ ಭಗಿನೀನಾಂ ಸಾ ಪಾರ್ಶ್ವಂ ರೂಪಶಿಖಾ ಯಯೌ ।
ತಥೇತ್ಯುಕ್ತ್ವಾ ಚ ಗತವಾನ್ ಸ್ನಾತುಂ ಶೃಂಗಭುಜೋಽಪಿ ಸಃ ॥ ೧೧೦

೧೧೧. ಅನಂತರ ರೂಪಶಿಖೆಯು ಸೋದರಿಯರೊಂದಿಗೆ ತಂದೆಯ ಬಳಿಗೆ ಬಂದಳು. ಶೃಂಗಭುಜನೂ ಸಹ ಚೇಟಿಯರಿಂದ ಸ್ನಾನಮಾಡಿಸಲ್ಪಟ್ಟವನಾಗಿ ಮತ್ತೆ ಅಲ್ಲಿಗೆ ಬಂದನು.

೧೧೨. ಆಗ ಅಗ್ನಿಶಿಖನು "ಇವರ ನಡುವೆ ನಿನಗೆ ಇಷ್ಟವಾದವಳಿಗೆ ಈ ವನಮಾಲೆಯನ್ನು ನೀಡು' ಎನ್ನುತ್ತಾ ಹಾರವನ್ನು ಕೊಟ್ಟನು.

೧೧೩. ಅದನ್ನು ಪಡೆದುಕೊಂಡ ರಾಜಕುಮಾರನು ಮೊದಲೇ ಸೂಚಿಸಿದ್ದಂತೆ ತಲೆಯಮೇಲೆ ಹಾರ ಹಾಕಿಕೊಂಡ ರೂಪಶಿಖೆಯ ಕೊರಳಿಗೆ ಹಾರವನ್ನು ಎಸೆದನು.

೧೧೪. ಅನಂತರ ಅಗ್ನಿಶಿಖನು ಶೃಂಗಭುಜ ರೂಪಶಿಖೆಯರಿಗೆ "ನಾಳೆ ಬೆಳಿಗ್ಗೆ ನಿಮ್ಮಿಬ್ಬರ ವಿವಾಹ ಮಂಗಳವನ್ನು ನೆರವೇರಿಸುವೆನು' ಎಂದನು.

೧೧೫. ಹೀಗೆಂದು ರೂಪಶಿಖೆ ಮತ್ತಿತರರನ್ನು ಮನೆಗೆ ಹೋಗುವಂತೆ ಹೇಳಿ ಕಳಿಸಿಕೊಟ್ಟು ಸ್ವಲ್ಪ ಹೊತ್ತಿನಲ್ಲಿಯೇ ಶೃಂಗಭುಜನನ್ನು ಕರೆದು ಮತ್ತೆ ಹೀಗೆಂದನು.

೧೧೬. "ಈ ಜೋಡಿ ಎತ್ತುಗಳನ್ನು ತೆಗೆದುಕೊಂಡು ಊರ ಹೊರಗೆ ಹೋಗು. ಅಲ್ಲಿ ಒಟ್ಟಿರುವ ರಾಶಿಯಿಂದ ನೂರು ಖಾರಿ* ಎಳ್ಳನ್ನು ಇಂದು ನೆಲದಲ್ಲಿ ನೆಡು.'

---

ಅಥಾಗಾತ್ ಸ್ವಸೃಭಿಃ ಸಾಕಂ ಪಾರ್ಶ್ವಂ ರೂಪಶಿಖಾ ಪಿತುಃ ।
ಸೋಽಪಿ ಶೃಂಗಭುಜಶ್ಚೇಟೀ ಸ್ನಾಪಿತೋಽತ್ರಾಯಯೌ ಪುನಃ ॥ ೧೧೧
ಆಸಾಂ ಮಧ್ಯಾನ್ನಿಜೇಷ್ಟಾಯಾಃ ಪ್ರಯಚ್ಛೈತಾಮಿತಿ ಬ್ರುವನ್ ।
ವನಮಾಲಾಂ ದದೌ ಶೃಂಗಭುಜಾಯಾಗ್ನಿಶಿಖೋಽಥ ಸಃ ॥ ೧೧೨
ಸೋಽಪ್ಯಾದಾಯೈವ ತಾಂ ರೂಪಶಿಖಾಯಾಃ ಕ್ಷಿಪ್ತವಾನ್‌ಗಲೇ ।
ಪ್ರಾಙ್‌ಮೂರ್ಧನ್ಯಸ್ತಸಂಕೇತಹಾರಯಷ್ಟೇರ್ನೃಪಾತ್ಮಜಃ ॥ ೧೧೩
ತತಃಸೋಽಗ್ನಿಶಿಖೋ ರೂಪಶಿಖಾಂ ಶೃಂಗಭುಜಾನ್ವಿತಮ್ ।
ನಿಜಗಾದ ವಿಧಾಸ್ಯೇ ವಾಂ ಪ್ರಾತರುದ್ವಾಹಮಂಗಲಮ್ ॥ ೧೧೪
ಇತ್ಯುಕ್ತ್ವಾ ತೌ ಚ ತಾಶ್ಚಾನ್ಯಾ ವಿಸಸರ್ಜ ಸುತಾ ಗೃಹಮ್ ।
ಕ್ಷಣಾಚ್ಚ ತಂ ಶೃಂಗಭುಜಂ ಸಮಾಹೂಯೈವಮಬ್ರವೀತ್ ॥ ೧೧೫
ಗಚ್ಛೇದಂ ದಾಂತಯುಗಲಂ ಸಮಾದಾಯ ಪುರಾದ್ಬಹಿಃ ।
ರಾಶಿಸ್ಥಂ ಭುವಿ ತತ್ರಾದ್ಯ ತಿಲಖಾರೀಶತಂ ವಪ ॥ ೧೧೬

---

* ಖಾರೀ : ಹಿಂದಿನ ಒಂದು ಅಳತೆ. ವಿದ್ವಾನ್ ಎನ್. ರಂಗನಾಥಶರ್ಮರ ಅಮರಕೋಶ ವ್ಯಾಖ್ಯಾನದಂತೆ ನಿಕುಂಚಕ : ಒಂದು ಮುಷ್ಟಿ, ಚಟಾಕು, ಕುಡುವ = ನಾಲ್ಕು ಚಟಾಕು = ಒಂದು ಪಾವು ಪ್ರಸ್ಥ = ಒಂದು ಸೇರು. ಆಢಕ = ನಾಲ್ಕು ಸೇರು, ದ್ರೋಣ=ಎಂಟು ಆಢಕ=೩೨ ಸೇರು. ಖಾರೀ = ಮೂರು ದ್ರೋಣ = ೯೬ ಸೇರು (=ಅಂದಾಜು ಒಂದು ಕ್ವಿಂಟಾಲ್=೧೦೦ ಕೆ.ಜಿ.)

೧೧೭. ಅದನ್ನು ಕೇಳಿ ಆಗಲಿ ಎಂದು ಹೇಳಿ ಶೃಂಗಭುಜನು ತ್ವರೆಯಿಂದ ರೂಪಶಿಖೆಯ ಬಳಿಗೆ ಹೋಗಿ ಹೇಳಿದನು. ಅದಕ್ಕೆ ಅವಳೆಂದಳು:

೧೧೮. "ಆರ್ಯಪುತ್ರನೇ, ಈ ವಿಷಯದಲ್ಲಿ ನೀನು ಸ್ವಲ್ಪವೂ ದುಃಖಪಟ್ಟುಕೊಳ್ಳಬೇಡ. ನೀನು (ನಿಶ್ಚಿಂತನಾಗಿ) ಹೋಗು. ನನ್ನ ಮಾಯೆಯಿಂದ ಇದನ್ನು ಬೇಗನೆ ಮಾಡಿಮುಗಿಸುತ್ತೇನೆ'

೧೧೯–೧೨೦. ಅದನ್ನು ಕೇಳಿ ರಾಜಕುಮಾರನು ಅಲ್ಲಿಗೆ ಹೋಗಿ ಎಳ್ಳಿನ ರಾಶಿಯನ್ನು ನೋಡಿ ವಿಹ್ವಲನಾಗಿ ಉಳುತ್ತಾ ಬೀಜಬಿತ್ತಲು ಪ್ರಾರಂಭಿಸಿದಾಗ ಪ್ರಿಯೆಯ ಮಾಯೆಯ ಬಲದಿಂದ ನೆಲದಲ್ಲಿ ಕ್ರಮವಾಗಿ ಅಗೆದು ಬಿತ್ತಿದ್ದುದನ್ನು ನೋಡಿ ತುಂಬಾ ಆಶ್ಚರ್ಯಗೊಂಡನು.

೧೨೧. ಅಗ್ನಿಶಿಖನ ಬಳಿಗೈದು ಈ ಕೆಲಸವನ್ನು ಮಾಡಿದ್ದಾಯಿತು ಎಂದು ಬಿನ್ನವಿಸಿದನು. ಆಮೇಲೆ ಈ ವಂಚಕ ರಾಕ್ಷಸನು ಮತ್ತೆ ಹೀಗೆಂದನು.

೧೨೨. "ಎಳ್ಳುಗಳನ್ನು ಬಿತ್ತಿದ್ದರಿಂದ ನನಗೆ ಏನೂ ಆಗಬೇಕಾಗಿಲ್ಲ. ಹೋಗಿ ಅವನ್ನೆಲ್ಲ ಒಟ್ಟು ಮಾಡು'. ಅದನ್ನು ಕೇಳಿ ಶೃಂಗಭುಜನು ರೂಪಶಿಖೆಯ ಹತ್ತಿರ ಹೋಗೆ ಮತ್ತೆ ಹೇಳಿದನು.

೧೨೩. ಅವಳು ಅವನನ್ನು ಕಳಿಸಿಕೊಟ್ಟು ತನ್ನ ಮಾಯೆಯಿಂದ ಅಸಂಖ್ಯಾತ ಇರುವೆಗಳನ್ನು ಸೃಜಿಸಿ ನೆಲಕ್ಕೆ ಬಿಟ್ಟು ಅವುಗಳಿಂದ ಎಳ್ಳುಗಳನ್ನು ಒಟ್ಟು ಮಾಡಿಸಿದಳು.

---

ತಚ್ಛ್ರುತ್ವಾ ಸ ತಥೇತ್ಯುಕ್ತ್ವಾ ಗತ್ವಾ ಶೃಂಗಭುಜೋಽಬ್ರವೀತ್ ।
ವಿಗ್ನೋ ರೂಪಶಿಖಾಯಾಸ್ತತ್ಸಾಪ್ಯೇವಂ ನಿಜಗಾದ ತಮ್ ॥ ೧೧೭
ಆರ್ಯಪುತ್ರ ನ ಕಾರ್ಯಸ್ತೇ ವಿಷಾದೋಽತ್ರ ಮನಾಗಪಿ ।
ಗಚ್ಛ ತ್ವಂ ಸಾಧಯಾಮ್ಯೇತದಹಂ ಕ್ಷಿಪ್ರಂ ಸ್ವಮಾಯಯಾ ॥ ೧೧೮
ತಚ್ಛ್ರುತ್ವಾ ತತ್ರ ಗತ್ವಾ ಸ ದೃಷ್ಟ್ವಾ ರಾಜಸುತಸ್ತಿಲಾನ್ ।
ರಾಶಿಸ್ಥಾನ್ ವಿಹ್ವಲೋ ಯಾವದ್ವಪ್ತುಂ ಪ್ರಕ್ರಮತೇ ಕೃಷನ್ ॥ ೧೧೯
ತಾವದ್ದದರ್ಶ ಭೂಮಿಂ ತಾಂ ಕೃಷ್ಟಾಮುಪ್ತಾಂಶ್ಚ ತಾಂಸ್ತಿಲಾನ್ ।
ಪ್ರಿಯಾಮಾಯಾಬಲಾತ್ ಸರ್ವಾನ್ ಕ್ರಮೇಣೈವ ಸುವಿಸ್ಮಿತಃ ॥ ೧೨೦
ಗತ್ವಾ ಚಾಗ್ನಿಶಿಖಾಯೈತತ್ ಕೃತಂ ಕಾರ್ಯಂ ನ್ಯವೇದಯತ್ ।
ತತಃ ಸ ವಂಚಕೋ ಭೂಯಸ್ತಮಭಾಷತ ರಾಕ್ಷಸಃ ॥ ೧೨೧
ನ ಮಮೋಪ್ತೈಸ್ತಿಲೈಃ ಕಾರ್ಯಂ ಗಚ್ಛ ರಾಶೀಕುರುಷ್ವ ತಾನ್ ।
ತಚ್ಛ್ರುತ್ವೋಪೇತ್ಯ ತದ್ರೂಪಶಿಖಾಯೈ ಸೋಽಬ್ರವೀತ್ ಪುನಃ ॥ ೧೨೨
ಸಾ ತಂ ವಿಸೃಜ್ಯ ಭೂಮಿಂ ತಾಂ ಸೃಷ್ಟ್ವಾಸಂಖ್ಯಾಃ ಪಿಪೀಲಿಕಾಃ ।
ತಾಭಿಃ ಸಂಘಟಯಾಮಾಸ ತಿಲಾಂಸ್ತಾನ್ನಿಜಮಾಯಯಾ ॥ ೧೨೩

೧೨೪. ಅದನ್ನು ನೋಡಿ ಶೃಂಗಭುಜನು ಅಗ್ನಿಶಿಖನ ಬಳಿಹೋಗಿ ಎಳ್ಳುಗಳನ್ನು ಒಟ್ಟುಮಾಡಿ ಮುಗಿಸಿದ್ದಾಯಿತೆಂದು ಹೇಳಿದನು.

೧೨೫–೧೨೬. ಆಮೇಲೆ ಮೂರ್ಖನೂ ಭಂಡನೂ ಆದ ಅಗ್ನಿಶಿಖನು ಅವನಿಗೆ ಮತ್ತೆ ಹೇಳಿದನು. "ಇಲ್ಲಿಂದ ದಕ್ಷಿಣಕ್ಕೆ ಎರಡು ಯೋಜನದಷ್ಟು ದೂರ ಹೋದರೆ ಕಾಡಿನಲ್ಲಿ ಒಂದು ಪಾಳು ಶಿವದೇವಾಲಯವಿದೆ. ಅಲ್ಲಿ ನನ್ನ ಪ್ರೀತಿಯ ಸೋದರನಾದ ಧೂಮಶಿಖ ಎಂಬುವನಿದ್ದಾನೆ

೧೨೭–೧೨೮. ನೀನು ಅಲ್ಲಿಗೆ ಕೂಡಲೇ ಹೋಗಿ ದೇವಾಲಯದ ಎದುರು ಹೀಗೆ ಹೇಳಬೇಕು. ಎಲೈ ಧೂಮಶಿಖನೇ, ನಿನ್ನನ್ನು ನಿನ್ನ ಅನುಚರರೊಡನೆ ಆಹ್ವಾನಿಸಲು ಅಗ್ನಿಶಿಖನು ನನ್ನನ್ನು ದೂತನಾಗಿ ಕಳುಹಿಸಿದ್ದಾನೆ. ಆದ್ದರಿಂದ ನೀನು ಬೇಗ ಬಾ. ಬೆಳಿಗ್ಗೆಯೇ ರೂಪಶಿಖೆಯು ವಿವಾಹಮಂಗಳವು ನೆರವೇರಲಿದೆ.

೧೨೯. ಇಷ್ಟನ್ನು ಹೇಳಿ ನೀನು ಇಲ್ಲಿಗೆ ಇಂದೇ ಬೇಗ ಬಾ. ನಾಳೆ ಬೆಳಿಗ್ಗೆ ನನ್ನ ಮಗಳಾದ ರೂಪಶಿಖೆಯನ್ನು ಮದುವೆ ಮಾಡಿಕೊಳ್ಳುವಿಯಂತೆ.'

೧೩೦. ಆ ಪಾಪಿಯು ಹಾಗೆ ಹೇಳಲು ಆಗಲಿ ಎಂದ ಶೃಂಗಭುಜನು ಅಂತೆಯೇ ರೂಪಶಿಖೆಗೆ ಅವೆಲ್ಲವನ್ನೂ ಹೇಳಿದನು.

---

ತದ್‌ದೃಷ್ಟ್ವೈವ ಪುನರ್ಗತ್ವಾ ತಸ್ಮೈ ಸೋಽಗ್ನಿಶಿಖಾಯ ತಾನ್ ।
ನ್ಯವೇದಯತ್ ಶೃಂಗಭುಜಸ್ತಿಲಾನ್ರಾಶೀಕೃತಾನಪಿ ॥ ೧೨೪

ತತಃ ಸೋಽಗ್ನಿಶಿಖೋ ಮೂರ್ಖಃ ಶಠೋಭೂಯೋಽಪ್ಯುವಾಚ ತಮ್ ।
ಇತೋ ದಕ್ಷಿಣತೋ ಗತ್ವಾ ಯೋಜನದ್ವಯಮಾತ್ರಕಮ್ ॥ ೧೨೫

ಅಸ್ತಿ ದೇವಕುಲಂ ಶೂನ್ಯಮರಣ್ಯೇ ಭದ್ರಶಾಂಭವಮ್ ।
ತಸ್ಮಿನ್ ಧೂಮಶಿಖೋ ನಾಮ ಭ್ರಾತಾ ವಸತಿ ಮೇ ಪ್ರಿಯಃ ॥ ೧೨೬

ತತ್ರೇದಾನೀಂ ವ್ರಜೈವಂ ಚ ವೇದೇರ್ದೇವಕುಲಾಗ್ರತಃ ।
ಭೋ ಧೂಮಶಿಖ ದೂತಸ್ತೇ ಸಾನುಗಸ್ಯ ನಿಮಂತ್ರಣೇ ॥ ೧೨೭

ಪ್ರಹಿತೋಽಗ್ನಿಶಿಖೇನಾಹಂ ಶೀಘ್ರಮಾಗಮ್ಯತಾಂ ತ್ವಯಾ ।
ಭಾವೀ ರೂಪಶಿಖಾಯಾ ಹಿ ಪ್ರಾತಃ ಪರಿಣಯೋತ್ಸವಃ ॥ ೧೨೮

ಏತಾವದುಕ್ತ್ವೈವಾತ್ರ ತ್ವಮಿಹಾಯಾಹ್ಯದ್ಯ ಸತ್ವರಮ್ ।
ಪ್ರಾತಃ ಪರಿಣಯಸ್ವೈತಾಂ ಸುತಾಂ ರೂಪಶಿಖಾಂ ಮಮ ॥ ೧೨೯

ಇತ್ಯುಕ್ತಸ್ತೇನ ಪಾಪೇನ ತಥೇತ್ಯುಕ್ತ್ವಾ ತಥೈವ ಚ ।
ಗತ್ವಾ ರೂಪಶಿಖಾಯಾಸ್ತತ್ಸರ್ವಂ ಶೃಂಗಭುಜೋಽಬ್ರವೀತ್ ॥ ೧೩೦

೧೩೧. ಆ ಸಾಧ್ವಿಯು ಮಣ್ಣನ್ನೂ, ನೀರನ್ನೂ, ಮುಳ್ಳುಗಳನ್ನೂ ಮತ್ತು ಬೆಂಕಿಯನ್ನೂ ಕೊಟ್ಟು ಅವನಿಗೆ ತನ್ನ ಉತ್ತಮ ಕುದುರೆಯನ್ನೂ ನೀಡುತ್ತ ಹೇಳಿದಳು.

೧೩೨–೧೩೩. "ಈ ಕುದುರೆಯನ್ನೇರಿ ಆ ದೇವಾಲಯಕ್ಕೆ ನಮಿಸಿ, ಧೂಮಶಿಖನಿಗೆ ನಮ್ಮ ತಂದೆ ಹೇಳಿದ ನಿಮಂತ್ರಣವನ್ನು ಹೇಳಿ ವೇಗವಾಗಿ ಓಡುವ ಇದೇ ಕುದುರೆಯ ಮೇಲೇರಿ ಶೀಘ್ರವಾಗಿ ಹಿಂತಿರುಗು. ಕತ್ತು ತಿರುಗಿಸಿ ಮತ್ತೆ ಮತ್ತೆ ಹಿಂದೆ ನೋಡು.

೧೩೪. ಆಮೇಲೆ ಧೂಮಶಿಖನೇನಾದರೂ ಹಿಂದೆ ಬರುತ್ತಿರುವುದನ್ನು ಕಂಡರೆ ಆಗ ನಿನ್ನ ಹಿಂದೆ ಈ ಮಾರ್ಗದಲ್ಲಿ ಈ ಮಣ್ಣನ್ನು ಎಸೆ.

೧೩೫. ಆಮೇಲೆಯೂ ಆ ಧೂಮಶಿಖನೇನಾದರೂ ಹಿಂದೆ ಬರುತ್ತಿದ್ದರೆ ಅಂತೆಯೇ ನಿನಗೂ ಅವನಿಗೂ ನಡುವೆ ಹಿಂದಿನಿಂದ ಈ ನೀರನ್ನು ಚೆಲ್ಲು.

೧೩೬. ಹಾಗಿದ್ದೂ ಅವನು ಬರುತ್ತಿದ್ದರೆ ಈ ಮುಳ್ಳುಗಳನ್ನು ಹಿಂದೆ ಎಸೆ. ಇಷ್ಟಾದರೂ ಅವನು ಹಿಂಬಾಲಿಸುತ್ತಿದ್ದರೆ ನಿಮ್ಮಿಬ್ಬರ ನಡುವೆ ಈ ಬೆಂಕಿಯನ್ನು ಎಸೆ.

೧೩೭. ಹೀಗೆ ಮಾಡಿದರೆ ನೀನು ಸೋಲದೆ ಇಲ್ಲಿಗೆ ಹಿಂತಿರುಗುತ್ತೀಯೆ. ನಿನಗೆ ಇದರಲ್ಲಿ ಸಂದೇಹವೇ ಬೇಡ. ಹೊರಡು, ಇಂದು ನನ್ನ ವಿದ್ಯೆಯ ಮಹಿಮೆಯನ್ನು ನೋಡು.'

---

ಸಾ ಸಾಧ್ವೀ ಮೃತ್ತಿಕಾಂ ತೋಯಂ ಕಂಟಕಾನಗ್ನಿಮೇವ ಚ ।
ದತ್ವಾ ತಸ್ಮೈ ವರಾಶ್ವಂ ಚ ನಿಜಮೇವಂ ಜಗಾದ ತಮ್ ॥ ೧೩೧

ಏತಮಾರುಹ್ಯ ತುರಗಂ ನತ್ವಾ ದೇವಕುಲಂ ಚ ತತ್ ।
ದ್ರುತಂ ಧೂಮಶಿಖಸ್ಯೋಕ್ತ್ವಾ ತತ್ತಾತೋಕ್ತಂ ನಿಮಂತ್ರಣಮ್ ॥ ೧೩೨

ಆಗಂತವ್ಯಂ ತ್ವಯಾ ಶೀಘ್ರಮಶ್ವೇನಾನೇನ ಧಾವತಾ ।
ಪೃಷ್ಠತೋ ವೀಕ್ಷಿತವ್ಯಂ ಚ ಮುಹುರ್ವಲಿತಕಂಧರಮ್ ॥ ೧೩೩

ಪಶ್ಚಾತ್ತಮಾಗತಂ ಧೂಮಶಿಖಂ ದ್ರಕ್ಷ್ಯಸಿ ಚೇತ್ತತಃ ।
ತನ್ಮಾರ್ಗೇ ಮೃತ್ತಿಕೈಷಾ ತೇ ಕ್ಷೇಪ್ತವ್ಯಾತ್ಮಪೃಷ್ಠತಃ ॥ ೧೩೪

ತತೋಽಪಿ ಪಶ್ಚಾದಾಗಚ್ಛೇತ್ ಸ ತೇ ಧೂಮಶಿಖೋ ಯದಿ ।
ತಥೈವ ಪೃಷ್ಠತಸ್ತ್ಯಾಜ್ಯಂ ತೋಯಮೇವಂ ತ್ವಯಾಂತರಾ ॥ ೧೩೫

ತದಪ್ಯೇಷ್ಯತಿ ಚೇತ್ ಕ್ಷೇಪ್ಯಾಸ್ತದ್ವದೇತೇಽಸ್ಯ ಕಂಟಕಾಃ ।
ತಥಾಪಿ ಚೇತ್ತ್ವೋಽನುಪತೇತ್ ತನ್ಮಧ್ಯೇಽಗ್ನಿಮಿಮಂ ಕ್ಷಿಪೇಃ ॥ ೧೩೬

ಏವಂ ಕೃತೇ ಹಿ ನಿರ್ವಿಘ್ನಃ ತ್ವಮಿಹೈಷ್ಯಸಿ ಮಾ ಚ ತೇ ।
ವಿಕಲ್ಪೋ ಭೂದ್ವ್ರಜ ದ್ರಕ್ಷ್ಯಸ್ಯದ್ಯ ವಿದ್ಯಾಬಲಂ ಮಮ ॥ ೧೩೭

೧೩೮. ಹೀಗೆ ರೂಪಶಿಖೆಯು ಹೇಳಿದಾಗ ಮಣ್ಣು ಇತ್ಯಾದಿಗಳನ್ನು ತೆಗೆದುಕೊಂಡು ಹಾಗೆಯೇ ಆಗಲಿ ಎನ್ನುತ್ತಾ ಆ ಕುದುರೆಯನ್ನೇರಿ ಕಾಡಿನ ದೇವಾಲಯಕ್ಕೆ ಹೋದನು.

೧೩೯–೧೪೦. ಶೃಂಗಭುಜನು ಅಲ್ಲಿ ಎಡಗಡೆ ಗೌರಿಯೂ ಬಲಗಡೆ ಗಣಪತಿಯೂ ಇರುವ ಪರಶಿವನನ್ನು ಕಂಡು ನಮಿಸಿ, ಅಗ್ನಿಶಿಖನು ಹೇಳಿದ್ದ ನಿಮಂತ್ರಣದ ಮಾತನ್ನು ಧೂಮಶಿಖನಿಗೆ ಬೇಗನೆ ಉಸುರಿ ಆ ಕೂಡಲೇ ಜಾಣತನದಿಂದ ಕುದುರೆಯನ್ನು ಜೋರಾಗಿ ಓಡಿಸಿ ಹೊರಟು ಬಿಟ್ಟನು.

೧೪೧. ಸ್ವಲ್ಪ ಹೊತ್ತಿನಲ್ಲಿಯೇ ಕತ್ತು ತಿರುಗಿಸಿ ನೋಡಿದರೆ ಆ ಧೂಮಶಿಖನು ಹಿಂದೆ ಬರುತ್ತಿರುವುದು ಕಂಡಿತು.

೧೪೨. ಕೂಡಲೇ ತನ್ನ ಹಿಂದೆ ಅವನು ಬರುವ ಹಾದಿಯಲ್ಲಿ ಮಣ್ಣನ್ನು ಎಸೆದನು. ಎಸೆದಾಕ್ಷಣ ಇವರೀರ್ವರ ಮಧ್ಯೆ ದೊಡ್ಡದೊಂದು ಬೆಟ್ಟವೇರ್ಪಟ್ಟಿತು.

೧೪೩. ಅದನ್ನೂ ಹೇಗೋ ದಾಟಿ ರಾಕ್ಷಸನು ಹಿಂದೆಯೇ ಬರುತ್ತಿರುವುದನ್ನು ನೋಡಿದ ರಾಜಕುಮಾರನು ಅದೇ ರೀತಿಯಲ್ಲಿ ನೀರನ್ನು ಚೆಲ್ಲಿದನು.

೧೪೪. ಅದರಿಂದ ಇಬ್ಬರ ನಡುವೆ ಅಲೆಗಳಿಂದ ತೊಯ್ದಾಡುತ್ತಿರುವ ದೊಡ್ಡ ನದಿಯೊಂದು ನಿರ್ಮಿತವಾಯಿತು. ಅದನ್ನೂ ದಾಟಿ ರಾಕ್ಷಸನು ಹೇಗೋ ಹಿಂಬಾಲಿಸಿ ಬರಲು,

---

ಇತ್ಯುಕ್ತಃ ಸ ತಯಾ ಶೃಂಗಭುಜೋ ಧೃತಮೃದಾದಿಕಃ ।
ತಥೇತಿ ತದ್ಧಯಾರೂಢೋಽರಣ್ಯೇ ದೇವಕುಲಂ ಯಯೌ ॥ ೧೩೮

ತತ್ರ ವಾಮಸ್ಥಗೌರೀಕಂ ದಕ್ಷಿಣಸ್ಥವಿನಾಯಕಮ್ ।
ದೃಷ್ಟ್ವಾ ನತ್ವಾ ಚ ವಿಶ್ವೇಶಮುಕ್ತ್ವಾಗ್ನಿಶಿಖೋದಿತಮ್ ॥ ೧೩೯

ನಿಮಂತ್ರಣವಚಸ್ತಸ್ಯ ತೂರ್ಣಂ ಧೂಮಶಿಖಸ್ಯ ತತ್ ।
ತತಶ್ಚಚಾಲಚತುರಂ ಪ್ರಧಾವಿತತುರಂಗಮಃ ॥ ೧೪೦

ಕ್ಷಣಾಚ್ಚ ಪೃಷ್ಠತೋ ಯಾವದ್ವೀಕ್ಷತೇ ವಲಿತಾನನಃ ।
ತಾವದ್ಧೂಮಶಿಖಂ ಪಶ್ಚಾದಾಗತಂ ತಂ ದದರ್ಶ ಸಃ ॥ ೧೪೧

ಚಿಕ್ಷೇಪ ಚಾಶು ಮಾರ್ಗೇಽಸ್ಯ ಮೃತ್ತಿಕಾಂ ತಾಂ ಸ್ವಪೃಷ್ಠತಃ ।
ಕ್ಷಿಪ್ತಯಾತ್ರ ತಯಾ ಮಧ್ಯೇ ಸದ್ಯೋಽಭೂತ್ಪರ್ವತೋ ಮಹಾನ್ ॥ ೧೪೨

ತಮುಲ್ಲಂಘ್ಯ ಕಥಂಚಿತ್ತಮಾಗತಂ ವೀಕ್ಷ್ಯ ರಾಕ್ಷಸಮ್ ।
ತಥೈವ ಪೃಷ್ಠತಸ್ತೋಯಂ ತತ್ಸ ರಾಜಸುತೋಽಕ್ಷಿಪತ್ ॥ ೧೪೩

ತೇನ ತತ್ರಾಂತರಾ ಜಜ್ಞೇ ವೇಲ್ಲದ್ವೀಚಿರ್ಮಹಾನದೀ ।
ತಾಮಪ್ಯುತ್ತೀರ್ಯ ಕಥಮಪ್ಯಾಗತೇಽಸ್ಮಿನ್ನಿಶಾಚರೇ ॥ ೧೪೪

೧೪೫. ಶೃಂಗಭುಜನು ಬೇಗನೆ ಮುಳ್ಳುಗಳನ್ನು ಚೆಲ್ಲಿದನು. ಅವುಗಳಿಂದ ಇಬ್ಬರ ನಡುವೆ ದೊಡ್ಡ ಮುಳ್ಳಿನ ಕಾಡೊಂದು ಸೃಷ್ಟಿಯಾಯಿತು.

೧೪೬. ಅದರಿಂದಲೂ ಆ ರಾಕ್ಷಸನು ಹೊರಬರಲು ಶೃಂಗರಾಜನು ತನ್ನ ಹಿಂದೆ ಬೆಂಕಿಯನ್ನು ಎಸೆದನು. ಅದರಿಂದ ಹುಲ್ಲುಗಳ ಸಮೇತ ಇಡಿಯ ಕಾಡು ಹೊತ್ತಿ ಉರಿಯಿತು.

೧೪೭. ಖಾಂಡವವನದಂತೆ ಪ್ರಜ್ವಲಿಸುತ್ತಿದ್ದು ದಾಟಲು ಅಸಾಧ್ಯವಾಗಿದ್ದ ಆ ಬೆಂಕಿಯನ್ನು ನೋಡಿದ ಧೂಮಶಿಖನು ಖಿನ್ನನಾಗಿ ಹೆದರಿ ಬಂದ ದಾರಿ ಹಿಡಿದು ಹೋಗಿ ಬಿಟ್ಟನು.

೧೪೮. ರೂಪಶಿಖೆಯ ಮಾಯೆಯಿಂದ ಭ್ರಮೆಯಲ್ಲಿದ್ದ ಆ ರಾಕ್ಷಸ ತಾನು ಆಕಾಶ ಮಾರ್ಗದಲ್ಲಿ ಹೋಗಬಲ್ಲೆನೆಂಬುದನ್ನೂ ಮರೆತು ಕಾಲುನಡಿಗೆಯಲ್ಲಿ ಹಿಂದಿರುಗಿದನು.

೧೪೯. ಆಗ ಶೃಂಗಭುಜನು ತನ್ನ ಪ್ರಿಯೆಯ ಮಾಯೆಯ ವೈಭವವನ್ನು ಒಳಗೇ ಪ್ರಶಂಸೆಮಾಡುತ್ತಾ ನಿರ್ಭೀತನಾಗಿ ಧೂಮಪುರಕ್ಕೆ ಹಿಂದಿರುಗಿ ಬಂದನು.

೧೫೦. ಆಮೇಲೆ ರೂಪಶಿಖೆಗೆ ಕುದುರೆಯನ್ನು ಕೊಟ್ಟು ತಾನು ಮಾಡಿದ್ದನ್ನೆಲ್ಲ ಅವಳಿಗೆ ಹೇಳಿ ಸಂತೋಷಪಡಿಸಿ, ಅಗ್ನಿಶಿಖನನ್ನು ಕಾಣಲು ಹೋದನು.

---

ಶೀಘ್ರಂ ಶೃಂಗಭುಜಃ ಪಶ್ಚಾತ್ ಕಂಟಕಾಂಸ್ತಾನವಾಕಿರತ್ ।
ತೈರುದ್ಬಭೂವ ಗಹನಂ ವನಂ ಮಧ್ಯೇ ಸಕಂಟಕಮ್ ॥ ೧೪೫
ತತೋಽಪಿ ನಿರ್ಗತೇ ತಸ್ಮಿನ್ ರಕ್ಷಸ್ಯಗ್ನಿಂ ಸ್ವಪೃಷ್ಠತಃ ।
ಜಹೌ ತೇನ ಸ ಜಜ್ವಾಲ ಮಾರ್ಗಂ ಸತೃಣಕಾನನಃ ॥ ೧೪೬
ತಂ ವೀಕ್ಷ್ಯ ಖಾಂಡವಮಿವ ಜ್ವಲಿತಂ ದುರತಿಕ್ರಮಮ್ ।
ಯಯೌ ಧೂಮಶಿಖಃ ಖಿನ್ನೋ ಭೀತಶ್ಚ ಸ ಯಥಾಗತಮ್ ॥ ೧೪೭
ತದಾ ರೂಪಶಿಖಾಮಾಯಾಮೋಹಿತಃ ಸ ಹಿ ರಾಕ್ಷಸಃ ।
ಪದ್ಭ್ಯಾಮಾಗಾದಗಾಚ್ಚೈವ ನ ಸಸ್ಮಾರ ನಭೋಗತಿಮ್ ॥ ೧೪೮
ಅಥ ಪ್ರಶಂಸನ್ನಂತಸ್ತತ್ಪ್ರಿಯಾಮಾಯಾವಿಜೃಂಭಿತಮ್ ।
ಗತಭೀರಾಯಯೌ ಧೂಮಪುರಂ ಶೃಂಗಭುಜಃ ಸ ತತ್ ॥ ೧೪೯
ತತೋ ರೂಪಶಿಖಾಯೈ ತಂ ಸಮರ್ಪ್ಯಾಶ್ವಂ ನಿವೇದ್ಯ ಚ ।
ಯಥಾ ಕೃತಂ ಸ ಹೃಷ್ಟಾಯೈ ಜಗಾಮಾಗ್ನಿಶಿಖಾಂತಿಕಮ್ ॥ ೧೫೦

೧೫೧. "ನಾನು ಹೋಗಿ ಸೋದರ ಧೂಮಶಿಖನನ್ನು ಕರೆದು ಬಂದದ್ದಾಯಿತು' ಎಂದು ಅವನೆನ್ನಲು ಗಾಬರಿಗೊಂಡ ಅಗ್ನಿಶಿಖನು ಶೃಂಗಭುಜನಿಗೆ ಹೇಳಿದನು.

೧೫೨. "ನೀನು ಅಲ್ಲಿಗೆ ಹೋಗಿದ್ದು ನಿಜವಾದರೆ ಏನಾದರೂ ಗುರುತನ್ನು ಹೇಳು' ಎಂದಾಗ ಈತನು ಕುಟಿಲತೆಯಿಂದ ನುಡಿದನು:

೧೫೩. "ಅಲ್ಲಿನ ಈ ಗುರುತನ್ನು ಹೇಳುವೆ ಕೇಳು. ಆ ಶಿವದೇವಾಲಯದಲ್ಲಿ ಶಿವನಿಗೆ ಎಡದಲ್ಲಿ ಪಾರ್ವತಿಯೂ ಬಲಗಡೆಯಲ್ಲಿಗಣಪತಿಯೂ ಇದ್ದಾರೆ.'

೧೫೪. ಅದನ್ನು ಕೇಳಿ ಅಚ್ಚರಿಗೊಂಡ ಅಗ್ನಿಶಿಖನು ಕ್ಷಣಕಾಲ ಹೀಗೆ ಆಲೋಚನೆ ಮಾಡಿದನು. "ಇವನು ಅಲ್ಲಿಗೆ ಹೋಗಿದ್ದರೂ ನನ್ನ ಸೋದರನು ಈತನನ್ನು ತಿನ್ನಲು ಹವಣಿಸಲಿಲ್ಲವೇಕೆ ?

೧೫೫. ಆದ್ದರಿಂದ ಈತನಾರೋ (ಸಾಮಾನ್ಯ) ಮನುಷ್ಯನಿರಲಿಕ್ಕಿಲ್ಲ. ಯಾರೋ ದೇವತೆಯೆಂಬುದೇ ನಿಶ್ಚಿತ. ಆದ್ದರಿಂದ ನನ್ನ ಮಗಳಿಗೆ ತಕ್ಕ ಪತಿಯು ಇವನೇ ಸರಿ.'

೧೫೬. ಎಂದು ಯೋಚಿಸಿ ಕೃತಾರ್ಥನಾದ ಆ ಶೃಂಗಭುಜನನ್ನು ರೂಪಶಿಖೆಯ ಬಳಿಗೆ ಕಳಿಸಿಕೊಟ್ಟನು. ಆದರೆ ತಾನೇ ಮೋಸಹೋಗಿರುವುದನ್ನು ಅವನು ಅರಿಯಲಿಲ್ಲ.

೧೫೭. ಮದುವೆಯ ತವಕದಲ್ಲಿ ಆ ರಾಜಕುಮಾರನು ಅವಳೊಂದಿಗೆ ಚೆನ್ನಾಗಿ ತಿಂದು ಕುಡಿದು ಆ ರಾತ್ರಿಯನ್ನು ಹೇಗೋ ಕಳೆದನು.

---

ನಿಮಂತ್ರಿತೋ ಮಯಾ ಗತ್ವಾ ಭ್ರಾತಾ ಧೂಮಶಿಖಸ್ತವ ।
ಇತ್ಯುಕ್ತವಂತಂ ತಂ ಸೋಽತ್ರ ಸಂಭ್ರಾಂತೋಽಗ್ನಿಶಿಖೋಽಬ್ರವೀತ್ ॥ ೧೫೧

ಯದಿ ತತ್ರ ಗತೋಽಭೂಸ್ತ್ವಮಭಿಜ್ಞಾನಂ ತದುಚ್ಯತಾಮ್ ।
ಇತಿ ತೇನೋದಿತಃ ಶೃಂಗಭುಜೋ ಜಿಹ್ಮಂ ಜಗಾದ ತಮ್ ॥ ೧೫೨

ಶೃಣ್ವಿದಂ ವಚ್ಮ್ಯಭಿಜ್ಞಾನಂ ತತ್ರ ದೇವಕುಲೇ ವಿಭೋಃ ।
ವಾಮೇಽಸ್ತಿ ಪಾರ್ವತೀ ಪಾರ್ಶ್ವೇ ದಕ್ಷಿಣೇ ಚ ವಿನಾಯಕಃ ॥ ೧೫೩

ತಚ್ಛ್ರುತ್ವಾ ವಿಸ್ಮಿತಃ ಸೋಽಗ್ನಿಶಿಖಃ ಕ್ಷಣಮಚಿಂತಯತ್ ।
ಕಥಂ ಗತೋಽಪಿ ಮದ್ಭ್ರಾತ್ರಾ ಶಕಿತೋ ನೈಷ ಖಾದಿತುಮ್ ॥ ೧೫೪

ತಜ್ಜಾನೇ ಮಾನುಷೋ ನಾಯಂ ದೇವೋಽಯಂ ಕೋಽಪಿ ನಿಶ್ಚಿತಮ್ ।
ಅನುರೂಪಸ್ತದೇಷೋಽಸ್ತು ಭರ್ತಾಸ್ಯ ದುಹಿತುರ್ಮಮ ॥ ೧೫೫

ಇತಿ ಸಂಚಿಂತ್ಯ ತಂ ಶೃಂಗಭುಜಂ ರೂಪಶಿಖಾಂತಿಕಮ್ ।
ಕೃತಾರ್ಥಂ ವ್ಯಸೃಜತ್ ಸ್ವಂ ತು ನಾಂಗಭೇದಂ ವಿವೇದ ಸಃ ॥ ೧೫೬

ಸ ಚ ಶೃಂಗಭುಜಸ್ತತ್ರ ಗತ್ವಾ ಪರಿಣಯೋತ್ಸುಕಃ ।
ಭುಕ್ತಪೀತಸ್ತಯಾ ಸಾಕಂ ಕಥಂಚಿದನಯನ್ನಿಶಾಮ್ ॥ ೧೫೭

೧೫೮. ಮಾರನೆಯ ದಿನ ಬೆಳಿಗ್ಗೆ ಅಗ್ನಿಶಿಖನು ತನ್ನ ಸಂಪತ್ತು ಹಾಗೂ ಸಿದ್ಧಿಗಳಿಗೆ ತಕ್ಕಂತೆ ಶಾಸ್ತ್ರೋಕ್ತವಾಗಿ ಅಗ್ನಿಸಾಕ್ಷಿಯಾಗಿ ರೂಪಶಿಖೆಯನ್ನು ಶೃಂಗಭುಜನಿಗೆ ಮದುವೆ ಮಾಡಿಕೊಟ್ಟನು.

೧೫೯. ಆ ರಾಕ್ಷಸ ಕನ್ಯಯೆಲ್ಲಿ ? ಈ ರಾಜಕುಮಾರನೆಲ್ಲಿ ? ಇವರಿಬ್ಬರ ಮದುವೆಯು ಎಲ್ಲಿ ? ಹಿಂದಿನ ಕರ್ಮಗಳ ಗತಿಯು ವಿಚಿತ್ರವಾದದ್ದೇ ಸರಿ.

೧೬೦. ಆ ರಾಜಕುಮಾರನು ಬಳುಕುವ ಚೆಲುವೆಯಾದ ಆ ರಾಕ್ಷಸ ಕನ್ಯೆಯನ್ನು ಪ್ರಿಯತಮೆಯನ್ನಾಗಿ ಪಡೆದು ಕೆಸರಿನಲ್ಲಿ ಹುಟ್ಟಿದ ಕಮಲವುಳ್ಳ ತಾವರೆಕೊಳದಲ್ಲಿ ರಾಜಹಂಸವು ಕಂಗೊಳಿಸುವಂತೆ ಶೋಭಿಸಿದನು.

೧೬೧. ಅವನು ಅಲ್ಲಿ ರಾಕ್ಷಸನ ಸಿದ್ಧಿಯಿಂದ ಸಜ್ಜುಗೊಳ್ಳುತ್ತಿದ್ದ ವಿವಿಧ ಸುಖೋಪಭೋಗಗಳನ್ನು, ಅವಳಲ್ಲೇ ನೆಟ್ಟ ಮನಸ್ಸುಗಳ್ಳುವನಾಗಿ ಆಕೆಯೊಂದಿಗೆ ಅನುಭವಿಸುತ್ತಾ ಇದ್ದನು.

೧೬೨. ಹೀಗೆ ಕೆಲವು ದಿನಗಳು ಕಳೆಯಲಾಗಿ ಶೃಂಗಭುಜನು ರೂಪಶಿಖೆಗೆ ಗುಟ್ಟಾಗಿ ಹೇಳಿದನು. "ಬಾ ಪ್ರಿಯೆ, ವರ್ಧಮಾನಪುರಕ್ಕೆ ಹೋಗೋಣ.

೧೬೩. ಅದು ನನ್ನ ರಾಜಧಾನಿ. ನಾವು ಹೀಗೆ ಹೊರಗುಳಿದು ಇತರರು ಅದನ್ನು ಅನುಭವಿಸುವುದನ್ನು ನಾನು ಸಹಿಸಲಾರೆ. ನಮ್ಮಂತಹವರಿಗೆ ಮಾನವೇ ಜೀವ.

---

ಪ್ರಾತಶ್ಚಾಗ್ನಿಶಿಖಸ್ತಸ್ಮೈ ತಾಂ ಸ ರೂಪಶಿಖಾಂ ದದೌ ।
ಋದ್ಧ್ಯಾ ಸ್ವಸಿದ್ಧ್ಯುಚಿತಯಾ ವಿಧಿವದ್ವಹ್ನಿಸಾಕ್ಷಿಕಮ್ ॥ ೧೫೮
ಕ್ವ ರಾಕ್ಷಸಸುತಾ ಕುತ್ರ ರಾಜಪುತ್ರಃ ಕ್ವ ಚೈತಯೋಃ ।
ವಿವಾಹೋ ಬತ ಚಿತ್ರೈವ ಗತಿಃ ಪ್ರಾಕ್ತನಕರ್ಮಣಾಮ್ ॥ ೧೫೯
ಸ ರೇಜೇ ರಾಜಸೂನುಸ್ತಾಂ ಪ್ರಾಪ್ಯ ರಕ್ಷಸುತಾಂ ಪ್ರಿಯಾಮ್ ।
ಪೇಶಲಾಂ ಪಂಕಸಂಭೂತಾಂ ರಾಜಹಂಸೋಽಬ್ಜಿನೀಮಿವ ॥ ೧೬೦
ತಸ್ಥೌ ಚ ಸ ತಯಾ ತತ್ರ ತದೇಕಮನಸಾ ಸಹ ।
ಭುಂಜಾನೋ ವಿವಿಧಾನ್ ಭೋಗಾನ್ ರಕ್ಷಃ ಸಿದ್ಧ್ಯುಪಕಲ್ಪಿತಾನ್ ॥ ೧೬೧
ಗತೇಷ್ವಥ ದಿನೇಷ್ವತ್ರ ತಾಂ ಸ ರೂಪಶಿಖಾಂ ರಹಃ ।
ಅವಾದೀದೇಹಿ ಗಚ್ಛಾವೋ ವರ್ಧಮಾನಪುರಂ ಪ್ರಿಯೇ ॥ ೧೬೨
ಸಾ ಹಿ ಸ್ವಾ ರಾಜಧಾನೀ ನಸ್ತಸ್ಯಾಶ್ಚೈವಂ ಪ್ರವಾಸನಮ್ ।
ಪರೈಃ ಸೋಢುಂ ನ ಶಕ್ನೋಮಿ ಮಾನಪ್ರಾಣಾ ಹಿ ಮಾದೃಶಾಃ ॥ ೧೬೩

೧೬೪. ಆದ್ದರಿಂದ ತಾಯ್ನಾಡನ್ನು ತ್ಯಜಿಸುವುದು ಕಷ್ಟವಾದರೂ ನನ್ನ ಸಲುವಾಗಿ ಅದನ್ನು ಬಿಟ್ಟು ಬಾ. ಇದನ್ನು ನಿಮ್ಮ ತಂದೆಗೂ ಹೇಳು. ಆ ಚಿನ್ನದ ಬಾಣವನ್ನು ನನ್ನ ಕೈಗಿಡು.'

೧೬೫. ಹೀಗೆ ಶೃಂಗಭುಜನು ಹೇಳಿದಾಗ ರೂಪಶಿಖೆಯೆಂದಳು: "ಆರ್ಯಪುತ್ರನೇ, ನೀನು ಏನನ್ನು ಅಪ್ಪಣೆ ಮಾಡುವಿಯೋ ಅದನ್ನು ಈಗ ನಾನು ನಡೆಸಿಕೊಡಲೇ ಬೇಕು.

೧೬೬ ತಾಯ್ನಾಡು ಯಾವುದು, ಸ್ವಜನರು ಯಾರು? ಈಗ ನನಗೆ ಎಲ್ಲವೂ ನೀನೇ. ಒಳ್ಳೆಯ ಸ್ತ್ರೀಯರಿಗೆ ಪತಿಯನ್ನು ಹೊರತುಪಡಿಸಿ ಬೇರೆ ಯಾರೂ ಇಲ್ಲ.

೧೬೭ ತಂದೆಗೆ ಈ ಸಂಗತಿಯನ್ನು ತಿಳಿಸಬಾರದು. ಅವನು ನಮ್ಮನ್ನು ಹೋಗಲು ಬಿಡುವುದಿಲ್ಲ. ಆ ಕೋಪಿಷ್ಠನಿಗೆ ತಿಳಿಯದಂತೆಯೇ ನಾವು ತೆರಳಬೇಕು.

೧೬೮. ಸೇವಕರಿಂದ ತಿಳಿದು ಆಮೇಲೆ ಅವನೇನಾದೂ ಬಂದರೆ ಆಗ ದೆವ್ವಕ್ಕೆ ಸಮಾನನಾದ ಬುದ್ಧಿಯಿಲ್ಲದ ಆತನನ್ನು ನನ್ನ ವಿದ್ಯೆಯಿಂದ ಭ್ರಾಂತಿಗೊಳಿಸುತ್ತೇನೆ.'

---

ತನ್ಮಂಚ ಜನ್ಮಭೂಮಿಂ ತ್ವಮತ್ಯಾಜ್ಯಾಮಪಿ ಮತ್ಕೃತೇ ।
ಆವೇದಯ ಪಿತುಸ್ತಂ ಚ ಹಸ್ತೇ ಹೇಮಶರಂ ಕುರು ॥ ೧೬೪

ಇತಿ ಶೃಂಗಭುಜೇನೋಕ್ತಾ ಸಾ ತಂ ರೂಪಶಿಖಾಬ್ರವೀತ್ ।
ಯದಾದಿಶಸಿ ತತ್ಕಾರ್ಯಮಾರ್ಯಪುತ್ರ ಮಯಾಧುನಾ ॥ ೧೬೫

ಕಾ ಜನ್ಮಭೂಃ ಕಃ ಸ್ವಜನಃ ಸರ್ವಮೇತದ್ಭವಾನ್ ಮಮ ।
ನ ಪತಿವ್ಯತಿರೇಕೇಣ ಸುಸ್ತ್ರೀಣಾಮಪರಾ ಗತಿಃ ॥ ೧೬೬

ತಾತಸ್ಯಾವೇದನೀಯಂತು ನೈತತ್ ಸೋಽಸ್ಮಾನ್ಹಿ ನ ತ್ಯಜೇತ್ ।
ತಸ್ಮಾದವಿದಿತಂ ತಸ್ಯ ಗಂತವ್ಯಂ ಕ್ರೋಧನಸ್ಯ ನಃ ॥ ೧೬೭

ಆಗಮಿಷ್ಯತಿ ಚೇತ್ ಪಶ್ಚಾತ್ ಬುದ್ಧ್ವಾ ಪರಿಜನಾತ್ತತಃ ।
ಮೋಹಯಿಷ್ಯಾಮ್ಯಬುದ್ಧಿಂ ತಂ ಭೌತತುಲ್ಯಂ ಸ್ವವಿದ್ಯಯಾ ॥ ೧೬೮

ಇತಿ ತಸ್ಯಾ ವಚಃ ಶ್ರುತ್ವಾ ಪ್ರಹೃಷ್ಟಃ ಸೋಽಪರೇಽಹನಿ ।
ದತ್ತರಾಜ್ಯಾರ್ಧಯಾನರ್ಘರತ್ನಪೂರ್ಣಸಮುದ್ಗಯಾ ॥ ೧೬೯

೧೧೯–೧೨೧. ಹೀಗೆಂದ ಅವಳ ಮಾತನ್ನು ಕೇಳಿ ಸಂತೋಷಪಟ್ಟ ಅವನು ಒಂದು ದಿನ ಅರ್ಧ ರಾಜ್ಯವನ್ನು ನೀಡಿದ ಅವಳ ಸಂಗಡ ಅವಳೇ ತಂದ ಬೆಲೆ ಬಾಳುವ ರತ್ನಗಳಿಂದ ತುಂಬಿದ ಭರಣಿ ಹಾಗೂ ಚೆಂದದ ಆ ಚಿನ್ನದ ಬಾಣದ ಜೊತೆಗೆ ಅವಳ ಶ್ರೇಷ್ಠಕುದುರೆಯಾದ ಶರವೇಗವನ್ನು ಏರಿ ಅವಳೊಂದಿಗೆ ಸ್ವಚ್ಛಂದವಾಗಿ ಉದ್ಯಾನದಲ್ಲಿ ಸುತ್ತುವ ನೆಪಮಾಡಿ ಊಳಿಗದವರನ್ನು ವಂಚಿಸಿ ವರ್ಧಮಾನಪುರವನ್ನು ಕುರಿತು ಹೊರಟನು.

೧೨೨. ಅವರಿಬ್ಬರೂ ಬಹುದೂರ ಹೋದ ಮೇಲೆ ಅದನ್ನು ತಿಳಿದ ಅಗ್ನಿಶಿಖ ರಾಕ್ಷಸನು ಆಕಾಶಮಾರ್ಗದಲ್ಲಿ ಸಿಟ್ಟಿನಿಂದ ಬಂದನು.

೧೨೩. ಅವನ ಬರುವಿಕೆಯ ವೇಗದಿಂದ ಹೊರಟ ಶಬ್ದವನ್ನು ಮಾರ್ಗದಲ್ಲಿ ದೂರದಿಂದಲೇ ಕೇಳಿದ ರೂಪ ಶಿಖೆಯು ಶೃಂಗಭುಜನಿಗೆ ಹೇಳಿದಳು.

೧೨೪. "ಆರ್ಯಪುತ್ರನೇ, ನಮ್ಮನ್ನು ಹಿಂದಿರುಗಿಸಲು ನಮ್ಮ ತಂದೆಯು ಬರುತ್ತಿದ್ದಾನೆ. ಆದರೆ ಇಲ್ಲಿ ನೀನು ನಿಶ್ಚಿಂತನಾಗಿರು. ಇವನನ್ನು ಹೇಗೆ ವಂಚಿಸುತ್ತೇನೆ ಎಂದು ನೋಡು.

೧೨೫. ನನ್ನ ವಿದ್ಯೆಯ ಮುಸುಕಿನಿಂದ ಆತ ನಿನ್ನನ್ನಾಗಲೀ ಕುದುರೆಯನ್ನಾಗಲೀ ಕಾಣಲಾರನು.' ಹೀಗೆ ಹೇಳಿ ಕುದುರೆಯಿಂದ ಇಳಿದ ಅವಳು ಮಾಯೆಯಿಂದ ಪುರುಷ ರೂಪವನ್ನು ಧರಿಸಿದಳು.

---

ತಯೈವಾನೀತತಚ್ಚಾರುಸುವರ್ಣಶರಯಾ ಸಹ ।
ಆರುಹ್ಯ ಶರವೇಗಾಖ್ಯಂ ತದೀಯಂ ತುರಗೋತ್ತಮಮ್ ॥ ೧೨೦
ವಂಚಯಿತ್ವಾ ಪರಿಜನಂ ಸ್ವೈರೋದ್ಯಾನಭ್ರಮಚ್ಛಲಾತ್ ।
ತತಃ ಶೃಂಗಭುಜಃ ಪ್ರಾಯಾದ್ವರ್ಧಮಾನಪುರಂ ಪ್ರತಿ ॥ ೧೨೧
ಗತಯೋರ್ದೂರಮಧ್ವಾನಂ ಬುದ್ಧ್ವಾ ಸೋಽಗ್ನಿಶಿಖಸ್ತಯೋಃ ।
ದಂಪತ್ಯೋರಾಯಯೌ ಪಶ್ಚಾನ್ನಭಸಾ ರಾಕ್ಷಸಃ ಕ್ರುಧಾ ॥ ೧೨೨
ತಸ್ಯಾಗಮನವೇಗೋತ್ಥಂ ಶಬ್ದಂ ಶ್ರುತ್ವಾ ಚ ದೂರತಃ ।
ಮಾರ್ಗೇ ರೂಪಶಿಖಾ ಸಾಥ ತಂ ಶೃಂಗಭುಜಮಬ್ರವೀತ್ ॥ ೧೨೩
ಆರ್ಯಪುತ್ರಾಗತಸ್ತಾತೋ ನಿವರ್ತಯಿತುಮೇಷ ನಃ ।
ತತ್ತ್ವಮಾಃಸ್ವೇಹ ನಿಃಶಂಕಃ ಪಶ್ಯೈನಂ ವಂಚಯೇ ಕಥಮ್ ॥ ೧೨೪
ನೈಷ ದ್ರಕ್ಷ್ಯತಿ ಸಾಶ್ವಂ ತ್ವಾಂ ವಿದ್ಯಯಾಚ್ಛಾದಿತಂ ಮಯಾ ।
ಇತ್ಯುಕ್ತ್ವಾಶ್ವಾವತೀರ್ಣಾ ಸಾ ಪುಂರೂಪಂ ಮಾಯಯಾಕರೋತ್ ॥ ೧೨೫

೧೭೬-೧೭೭. "ಆ ದೊಡ್ಡ ರಾಕ್ಷಸನು ಇಲ್ಲಿಗೆ ಬರುತ್ತಾನೆ. ಆದ್ದರಿಂದ ನೀನು ಮೌನವಾಗಿರು.' ಎಂದು ಹೇಳಿ ಕಟ್ಟಿಗೆಯ ಸಲುವಾಗಿ ಈ ಕಾಡಿಗೆ ಬಂದಿದ್ದ ಕಟ್ಟಿಗೆಯವನ ರೂಪದಲ್ಲಿ ಕೊಡಲಿಯಿಂದ ಕಟ್ಟಿಗೆ ಸೀಳುತ್ತಾ ಇದ್ದಳು. ಶೃಂಗಭುಜನು ಇದನ್ನು ನೋಡುತ್ತಾ ನಗುತ್ತಾ ನಿಂತಿದ್ದನು.

೧೭೮. ಅಗ್ನಿಶಿಖನು ಅಲ್ಲಿಗೆ ಬಂದು, ಈ ಮರ ಕಡಿಯುವವನ್ನು ನೋಡಿ, ಆಕಾಶದಿಂದ ಕೆಳಗಿಳಿದು ದಡ್ಡತನದಿಂದ ಪ್ರಶ್ನೆ ಮಾಡಿದನು:

೧೭೯. "ಏನಯ್ಯಾ, ಈ ಮಾರ್ಗದಲ್ಲಿ ಗಂಡುಹೆಣ್ಣುಗಳಿಬ್ಬರು ಹೋಗುತ್ತಿದ್ದುದನ್ನು ನೋಡಿದೆಯಾ ?' ಆಗ ಗಂಡುವೇಷದ ಆಕೆಯು ಬೇಸರದಿಂದಲೇ ಅವನಿಗೆಂದಳು:

೧೮೦-೧೮೧. ಇಂದು ರಾಕ್ಷಸಾಧಿಪತಿಯಾದ ಅಗ್ನಿಶಿಖನು ಸತ್ತಿರುವುದರಿಂದ ಅವನನ್ನು ಸುಡಲು ನಾವಿಬ್ಬರೂ ಹೆಚ್ಚು ಕಟ್ಟಿಗೆಯನ್ನು ಕಡಿಯುತ್ತಾ ಇದ್ದೆವು. ಪರಿಶ್ರಮದ ಕಾರಣ ನಮ್ಮ ಕಣ್ಣುಗಳು ಒದ್ದೆಯಾಗಿದ್ದು ನಾವು ಯಾರನ್ನೂ ಕಾಣೆವು. ಅದನ್ನು ಕೇಳಿ ದಡ್ಡನಾದ ಆ ರಾಕ್ಷಸನು ಆಲೋಚನೆ ಮಾಡಿದನು.

೧೮೨. "ಅಯ್ಯೋ ಇದೇನು ? ನಾನು ಸತ್ತಿರುವೆನಾ ? ಹಾಗಾದರೆ ನನಗೆ ರೂಪಶಿಖೆಯನ್ನು ಕಟ್ಟಿಕೊಂಡು ಆಗಬೇಕಾದ್ದೇನು ? ನನ್ನ ಮನೆಗೇ ಹೋಗಿ ಸೇವಕರನ್ನು ಕೇಳುತ್ತೇನೆ.'

---

ಇಹಾಯಾತಿ ಮಹದ್ರಕ್ಷಸ್ತ್ವಂ ತೂಷ್ಣೀಂ ಕ್ಷಣಂ ಭವ ।
ಇತ್ಯುಕ್ತ್ವಾ ಕಾಷ್ಠಿಕಂ ಚಾತ್ರ ದಾರ್ವರ್ಥಂ ವನಮಾಗತಮ್ ॥ ೧೭೬
ತತ್ಕುಠಾರೇಣ ಕಾಷ್ಠಾನಿ ಪಾಟಯಂತೀ ಕಿಲಾಸ್ತ ಸಾ ।
ತದಾ ರೂಪಶಿಖಾ ಶೃಂಗಭುಜೇ ಪಶ್ಯತಿ ಸಸ್ಮಿತೇ ॥ ೧೭೭
ತಾವತ್ಸೋಽಗ್ನಿಶಿಖಸ್ತತ್ರ ಪ್ರಾಪ್ಯೈತಾಂ ಕಾಷ್ಠಿಕಾಕೃತಿಮ್ ।
ದೃಷ್ಟ್ವಾವತೀರ್ಯ ಗಗನಾನ್ಮೂಢಃ ಪಪ್ರಚ್ಛ ರಾಕ್ಷಸಃ ॥ ೧೭೮
ಕಿಂ ಭೋ ದೃಷ್ಟೌ ಪಥಾನೇನ ಯಾಂತೌ ಸ್ತ್ರೀಪುರುಷಾವಿತಿ ।
ತತಃ ಕಥಂಚಿತ್ ಖಿನ್ನೇವ ಪುಂವೇಷಾ ಸಾ ತಮಬ್ರವೀತ್ ॥ ೧೭೯
ನ ದೃಷ್ಟೌ ಕೌಚಿದಾವಾಭ್ಯಾಂ ಸ್ವಿನ್ನದೃಗ್ಭ್ಯಾಂ ಪರಿಶ್ರಮಾತ್ ।
ರಕ್ಷಃಪತೇರ್ಮೃತಸ್ಯಾದ್ಯ ದಾಹಾಯಾಗ್ನಿಶಿಖಸ್ಯ ಹಿ ॥ ೧೮೦
ಆವಾಂ ಕಾಷ್ಠಾನಿ ಭೂಯಾಂಸಿ ಪಾಟಯಂತಾವಿಹ ಸ್ಥಿತೌ ।
ತಚ್ಛ್ರುತ್ವಾ ರಾಕ್ಷಸಃ ಸೋಽತ್ರ ಮೂಢಬುದ್ಧಿರ್ವ್ಯಚಿಂತಯತ್ ॥ ೧೮೧
ಅಹೋ ಕಥಂ ವಿಪನ್ನೋಽಹಂ ತತ್ಕಿಂ ಮೇ ಸುತಯಾ ತಯಾ ।
ಗಚ್ಛಾಮಿ ತಾವತ್ ಪೃಚ್ಛಾಮಿ ಗೃಹೇ ಪರಿಜನಂ ನಿಜಮ್ ॥ ೧೮೨

೧೮೩. ಹೀಗೆ ಚಿಂತಿಸಿದ ಅಗ್ನಿಶಿಖನು ಬೇಗನೆ ಮನೆಗೆ ಹೊರಟುಹೋದನು. ಗಂಡನೊಂದಿಗೆ ನಗುತ್ತಾ ರೂಪಶಿಖೆಯು ಮೊದಲಿನಂತೆಯೇ (ಪ್ರಯಾಣವನ್ನು) ಮುಂದುವರೆಸಿದಳು.

೧೮೪. ಆ ಹೊತ್ತಿಗೆ ಒಳಗೊಳಗೇ ನಗುತ್ತಿದ್ದ ಊಳಿಗದವರಿಂದ ತಾನು ಬದುಕಿರುವುದನ್ನು ಕೇಳಿ ಸಂತೋಷಪಟ್ಟ ಆ ರಾಕ್ಷಸನು ಬೇಗನೆ ಹಿಂತಿರುಗಿ ಬಂದನು.

೧೮೫. ಭಯಂಕರವಾದ ಶಬ್ದದಿಂದ ಆತನು ಮತ್ತೆ ಬರುತ್ತಿರುವುದನ್ನು ದೂರದಿಂದಲೇ ತಿಳಿದ ರೂಪಶಿಖೆಯು ಕುದುರೆಯಿಂದ ಇಳಿದು ಮೊದಲಿನಂತೆಯೇ ಮಾಯೆಯಿಂದ ಪತಿಯನ್ನು ಮರೆಮಾಚಿ,

೧೮೬. ದಾರಿಯಲ್ಲಿ ಬರುತ್ತಿದ್ದ ಪತ್ರವಾಹಕನ ಕೈಯಿಂದ ಪತ್ರವೊಂದನ್ನು ಪಡೆದುಕೊಂಡು ಮತ್ತೆ ಗಂಡುರೂಪವನ್ನು ಧರಿಸಿದಳು.

೧೮೭. ಅಷ್ಟು ಹೊತ್ತಿಗೆ ಅಲ್ಲಿಗೆ ಬಂದ ಅಗ್ನಿಶಿಖನು ಪುಂವೇಷಧಾರಿ ಪುತ್ರಿಯನ್ನು ಕೇಳಿದನು. 'ಹೆಂಡತಿಯೊಂದಿಗೆ ಪುರುಷನೊಬ್ಬನನ್ನು ದಾರಿಯಲ್ಲಿ ನೀವೇನಾದರೂ ನೋಡಿರುವೆಯಾ ?'

೧೮೮. ಆಗ ಗಂಡುರೂಪದಲ್ಲಿದ್ದ ಆಕೆಯು ಉಸಿರುಬಿಡುತ್ತಾ ಅವನಿಗೆಂದಳು. "ಅವಸರದಲ್ಲಿ ಕೆಲಸದಲ್ಲಿ ಮಗ್ನನಾಗಿದ್ದರಿಂದ ಅಂಥವನಾರನ್ನೂ ನೋಡಲಿಲ್ಲ.

---

ಇತಿ ಸಂಚಿಂತ್ಯ ಸ ಗೃಹಂ ತೂರ್ಣಮಗ್ನಿಶಿಖೋ ಯಯೌ ।
ಭರ್ತ್ರಾ ಸಮಂ ಹಸಂತೀ ಸಾ ಪ್ರಾಗ್ವತ್ ಪ್ರಾಸ್ಥಿತ ತತ್ಸುತಾ ॥ ೧೮೩

ಕ್ಷಣಾಚ್ಚ ಪುನರುವ್ಯಾಗಾತ್ಸಾಂತರ್ಹಾಸಾತ್ ಪರಿಚ್ಛದಾತ್ ।
ಪೃಷ್ಟ್ವಾಜ್ಜೀವಂತಮಾತ್ಮಾನಂ ಶ್ರುತ್ವಾ ಹೃಷ್ಟಃ ಸ ರಾಕ್ಷಸಃ ॥ ೧೮೪

ಬುದ್ಧ್ವಾ ಘೋರೇಣ ಶಬ್ದೇನ ದೂರಾತ್ತಂ ಪುನರಾಗತಮ್ ।
ಹಯಾವತೀರ್ಣಾ ಪ್ರಚ್ಛಾದ್ಯ ಮಾಯಯಾ ಪೂರ್ವವತ್ ಪತಿಮ್ ॥ ೧೮೫

ಮಾರ್ಗಾಗತಸ್ಯ ಕಸ್ಯಾಪಿ ಲೇಖಹಾರಸ್ಯ ಹಸ್ತತಃ ।
ಲೇಖಮಾದಾಯ ಪುಂರೂಪಂ ಚಕ್ರೇ ರೂಪಶಿಖಾ ಪುನಃ ॥ ೧೮೬

ತಾವಚ್ಚ ಪೂರ್ವವತ್ಪ್ರಾಪ್ತಸ್ತದ್ರೂಪಾಂ ತಾಂ ಸ ರಾಕ್ಷಸಃ ।
ಪಪ್ರಚ್ಛ ಪಥಿ ಸಸ್ತ್ರೀಕಸ್ತ್ವಯಾ ದೃಷ್ಟಃ ಪುಮಾನಿತಿ ॥ ೧೮೭

ತತಃ ಪುರುಷರೂಪಾ ಸಾ ಶ್ವಸಂತೀ ನಿಜಗಾದ ತಮ್ ।
ನ ತ್ವರಾಹೃತಚಿತ್ತೇನ ತಾದೃಕ್ಕೋಽಪೀಕ್ಷಿತೋ ಮಯಾ ॥ ೧೮೮

೧೮೯–೧೯೦. ಇಂದು ಯುದ್ಧದಲ್ಲಿ ಶತ್ರುವಿನಿಂದ ಹತನಾದ ಅಗ್ನಿಶಿಖನು ಇನ್ನೂ ಸ್ವಲ್ಪ ಉಸಿರಾಡುತ್ತಿರುವಾಗಲೇ ತನ್ನ ರಾಜ್ಯವನ್ನು ಒಪ್ಪಿಸಬೇಕೆಂದಿದ್ದು ಅದಕ್ಕಾಗಿ ತನ್ನದೇ ಆದ ಊರಿನಲ್ಲಿ ಸ್ವೇಚ್ಛೆಯಾಗಿ ಬದುಕುತ್ತಿರುವ ಸೋದರ ಧೂಮಶಿಖನನ್ನು ಇಲ್ಲಿಗೆ ಕರೆತರಲು ಕಳುಹಿಸಿರುವ ಪತ್ರವನ್ನು ನಾನು ಒಯ್ಯುತ್ತಿದ್ದೇನೆ.'

೧೯೧. ಅದನ್ನು ಕೇಳಿದ ಅಗ್ನಿಶಿಖನು "ನನ್ನನ್ನು ಇಂದು ಶತ್ರುಗಳು ಸಾಯಿಸಿಬಿಟ್ಟಿರುವರೇನು?' ಎಂದು ಗಾಬರಿಗೊಂಡು ಅದನ್ನು ನೋಡಲು ಮತ್ತೆ ತನ್ನ ಮನೆಗೆ ಹೋದನು.

೧೯೨. "ಸತ್ತವರು ಯಾರು ? ನಾನು ಆರೋಗ್ಯವಾಗಿಯೇ ಇರುವೆನಲ್ಲ' ಎಂದು ಆತನು ಅರಿಯಲೇ ಇಲ್ಲ. ಬ್ರಹ್ಮನು ಸೃಷ್ಟಿಸಿದ ಒಂದು ವಿಚಿತ್ರ ತಾಮಸವ್ಯಕ್ತಿಯೇ ಅವನು.

೧೯೩. ಮನೆಗೆ ಹೋಗಿ ಜನರು ನಗುವ ಆ ಸುಳ್ಳನ್ನು ತಿಳಿದರೂ ಅವನು ಮೋಹದಿಂದ ಬಳಲಿ ಮಗಳನ್ನು ಮರೆತು ಮತ್ತೆ ಬರಲೇ ಇಲ್ಲ.

೧೯೪. ಆ ರೂಪಶಿಖೆಯು ಹೀಗೆ ತಂದೆಗೆ ಮೋಹವನ್ನು ಉಂಟುಮಾಡಿ ಮೊದಲಿನಂತೆಯೇ (ಸ್ತ್ರೀ ವೇಷ ತಳೆದು) ಪತಿಯ ಬಳಿಗೆ ಹೋದಳು. ಪತಿವ್ರತಾಸ್ತ್ರೀಯರು ಗಂಡನ ಹಿತವನ್ನು ಬಿಟ್ಟು ಬೇರೇನನ್ನೂ ಅರಿಯರು.

---

ಅಹಮಗ್ನಿಶಿಖೇನಾದ್ಯ ರಣೇ ಶತ್ರುಹತೇನ ಹಿ ।
ಕಿಂಚಿಚ್ಛೇಷಾಸುನಾ ರಾಜ್ಯಂ ಸಮರ್ಪಯಿತುಮಿಚ್ಛತಾ ॥ ೧೮೯

ಆಹ್ವಾನಾಯ ಸ್ವನಗರೇ ಸ್ಥಿತೇನೋಚ್ಛೃಂಖಲಸ್ಥಿತೇಃ ।
ಭ್ರಾತುರ್ಧೂಮಶಿಖಸ್ಯೇಹ ಪ್ರಹಿತೋ ಲೇಖಹಾರಕಃ ॥ ೧೯೦

ತಚ್ಛ್ರುತ್ವಾಗ್ನಿಶಿಖಃ ಸೋಽತ್ರ ಕಿಂ ಹತೋಽಹಂ ಪರೈರಿತಿ ।
ಸಂಭ್ರಾಂತಃ ಪ್ರಯಯೌ ಭೂಯಃ ಸ್ವಗೃಹಂ ತದವೇಕ್ಷಿತುಮ್ ॥ ೧೯೧

ಕೋ ಹತಃ ಸ್ವಸ್ಥ ಏಷೋಽಹಮಿತ್ಯಬೋಧಿ ತು ನೈವ ಸಃ ।
ಕೋಽಪ್ಯಹೋ ತಾಮಸಶ್ಚಿತ್ರೋ ಮೂಢಸರ್ಗಃ ಪ್ರಜಾಪತೇಃ ॥ ೧೯೨

ಗೃಹಂ ಪ್ರಾಪ್ತಶ್ಚ ತದ್‌ಬುದ್ಧ್ವಾಪ್ಯಸತ್ಯಂ ಲೋಕಹಾಸನಮ್ ।
ಪುನಃ ಸ ನಾಯಯೌ ಮೋಹಶ್ರಾಂತೋ ವಿಸ್ಮೃತ್ಯ ತಾಂ ಸುತಾಮ್ ॥ ೧೯೩

ಸಾಪಿ ಸಂಮೋಹ್ಯ ಪಿತರಂ ಪ್ರಾಗ್ವತ್ ರೂಪಶಿಖಾ ಪತಿಮ್ ।
ತಮಭ್ಯಗಾತ್ ಪತಿಹಿತಾದನ್ಯತ್ ಸಾಧ್ವ್ಯೋ ನ ಜಾನತೇ ॥ ೧೯೪

೧೯೫. ಅನಂತರ ಆ ಆಶ್ಚರ್ಯದ ಕುದುರೆಯನ್ನೇರಿ ಶೃಂಗಭುಜನು ತನ್ನ ಪತ್ನಿಯೊಡನೆ ವೇಗವಾಗಿ ವರ್ಧಮಾನಪುರಕ್ಕೆ ಹೋದನು.

೧೯೬. ಅಲ್ಲಿ ಆತನು ಮಡದಿಯೊಂದಿಗೆ ಬರುತ್ತಿರುವ ಸಂಗತಿಯನ್ನು ತಿಳಿದ ತಂದೆ ವೀರಭುಜನು ಸಂತೋಷಗೊಂಡು ಅವನನ್ನು ಸ್ವಾಗತಿಸಲು ತಾನೇ ಮೊದಲು ಹೋದನು.

೧೯೭. ಸತ್ಯಭಾಮೆಯೊಂದಿಗೆ ಶ್ರೀಕೃಷ್ಣನು ಶೋಭಿಸುವಂತೆ ರೂಪಶಿಖೆಯೊಂದಿಗೆ ಶೋಭಿಸುತ್ತಿದ್ದ ಶೃಂಗಭುಜನನ್ನು ಕಂಡ ರಾಜನು ಆಗ ಹೊಸ ರಾಜ್ಯವು ದೊರೆತಂತೆ ಭಾವಿಸಿದನು.

೧೯೮–೧೯೯. ಕುದುರೆಯಿಂದ ಇಳಿದು ಹೆಂಡತಿಯೊಂದಿಗೆ ಕಾಲಿಗೆ ಬಿದ್ದ ಮಗನನ್ನು ಎಬ್ಬಿಸಿ ಅಪ್ಪಿಕೊಂಡು ಬೇಸರವನ್ನು ನೀಗಿಸುವ ಉದಾರ ಮಂಗಳಕ್ರಿಯೆಯನ್ನು ಕಣ್ಣಿನಿಂದಲೇ ಮಾಡಿದನೋ ಎಂಬಂತೆ ಆನಂದಬಾಷ್ಪ ತುಂಬಿಕೊಂಡಿದ್ದ ಕಣ್ಣುಗಳಿಂದ ಕೂಡಿ, ನಂತರ ಉತ್ಸವವನ್ನು ಆಚರಿಸಿ ಆತನನ್ನು ಊರೊಳಗೆ ಬರಮಾಡಿಕೊಂಡನು.

೨೦೦. "ನೀನು ಎಲ್ಲಿಗೆ ಹೋಗಿದ್ದೆ ಮಗು ?' ಎಂದು ಅವನು ಕೇಳಿದ್ದಕ್ಕೆ ಶೃಂಗಭುಜನು ತನ್ನ ಕಥೆಯನ್ನು ಮೊದಲಿನಿಂದಲೂ ಹೇಳಿದನು.

---

ತತಸ್ತಯಾ ಸಮಂ ಶೃಂಗಭುಜಃ ಪತ್ನ್ಯಾ ಸ ಸತ್ವರಮ್ ।
ಆಶ್ಚರ್ಯತುರಗಾರೂಢೋ ವರ್ಧಮಾನಪುರಂ ಯಯೌ ॥ ೧೯೫

ತತ್ರ ಬುದ್ಧ್ವಾ ತಮಾಯಾಂತಂ ಯುಕ್ತಂ ಶೃಂಗಭುಜಂ ತಯಾ ।
ಪಿತಾ ವೀರಭುಜಸ್ತಸ್ಯ ಹೃಷ್ಟೋಽಗ್ರೇ ನಿರ್ಯಯೌ ನೃಪಃ ॥ ೧೯೬

ಸ ದೃಷ್ಟ್ವಾ ಶೋಭಿತಂ ವಧ್ವಾ ತಂ ಶೌರಿಮಿವ ಭಾಮಯಾ ।
ಪ್ರಾಪ್ತಾಂ ತದಾ ನವಾಂ ಮೇನೇ ನರೇಂದ್ರೋ ರಾಜ್ಯಸಂಪದಮ್ ॥ ೧೯೭

ಅಶ್ವಾವತೀರ್ಣಮೇನಂ ಚ ಪಾದಲಗ್ನಂ ಸವಲ್ಲಭಮ್ ।
ಉತ್ಥಾಪ್ಯಾಲಿಂಗ್ಯ ತನಯಂ ಹರ್ಷಬಾಷ್ಪಾಂಬು ಬಿಭ್ರತಾ ॥ ೧೯೮

ಚಕ್ಷುಷೇವ ಕೃತೋದಾರನಿರ್ವಿಚ್ಛಮನಮಂಗಲಃ ।
ಪ್ರಾವೇಶಯದ್ರಾಜಧಾನೀಂ ಸ ತತೋ ವಿಹಿತೋತ್ಸವಃ ॥ ೧೯೯

ಕ್ವ ಗತೋಽಭೂಸ್ತ್ವಮಿತ್ಯತ್ರ ತೇನ ಪೃಷ್ಟಃ ಸುತೋಽಥ ಸಃ ।
ನಿಜಮಾಮೂಲತಃ ಶೃಂಗಭುಜೋ ವೃತ್ತಾಂತಮಬ್ರವೀತ್ ॥ ೨೦೦

೨೦೧. ಅನಂತರ ನಿರ್ವಾಸಭುಜನು ಮತ್ತಿತರ ಸೋದರರನ್ನೆಲ್ಲ ಕರೆದು ತಂದೆಯ ಸಮಕ್ಷಮದಲ್ಲಿ ಆ ಚಿನ್ನದ ಬಾಣವನ್ನು ಒಪ್ಪಿಸಿಕೊಟ್ಟನು.

೨೦೨. ಅದನ್ನು ಕೇಳಿ ಪರಿಪ್ರಶ್ನೆಮಾಡಿದ ವೀರಭುಜ ರಾಜನು ವಿಷಯವರಿತು ಅಷ್ಟೂ ಮಕ್ಕಳಲ್ಲಿ ಪ್ರೀತಿಯನ್ನು ಬಿಟ್ಟು ಕೇವಲ ಶೃಂಗಭುಜನನ್ನು ಮಾತ್ರವೇ ತನ್ನ ಮಗನೆಂದು ತಿಳಿದನು.

೨೦೩–೨೦೫. ಅನಂತರ ಆ ರಾಜನು ಹೀಗೆ ವಿವೇಕದಿಂದ ಚಿಂತಿಸಿದನು. "ತಪ್ಪಿತಸ್ಥನಲ್ಲದಿದ್ದರೂ ಇವನನ್ನು ದ್ವೇಷದಿಂದ ಇವನ ಸೋದರ ರೂಪದ ಶತ್ರುಗಳು ಕಳಿಸಿಕೊಟ್ಟಂತೆಯೇ ನಿಶ್ಚಯವಾಗಿಯೂ ಇವನ ತಾಯಿಯಾದ ನನ್ನ ಪ್ರೀತಿಯ ಗುಣವರೆಯು ತಪ್ಪೇ ಮಾಡದಿದ್ದರೂ ಈ ತಾಯಂದಿರು ಸುಳ್ಳಾಗಿಯೇ ದೂಷಿಸಿದ್ದಾರೆ. ಆದ್ದರಿಂದ ಈಗಲೇ ಹೋಗಿ ಖಂಡಿತ ನೋಡುತ್ತೇನೆ, ತಡವೇಕೆ ?'

೨೦೬. ಎಂದು ವಿಚಾರಮಾಡಿ ಎಂದಿನಂತೆ ಅಂದಿನ ಹಗಲನ್ನು ಕಳೆದು ರಾತ್ರಿಯಲ್ಲಿ ಇನ್ನೊಬ್ಬ ರಾಣಿಯಾದ ಅಯಶೋಲೇಖೆಯನ್ನೂ ಅರಿತುಕೊಳ್ಳಲು ರಾತ್ರಿ ಅಲ್ಲಿಗೆ ಹೋದನು.

---

ಆಹೂಯ ತತ್ಸಮಕ್ಷಂ ಚ ಭ್ರಾತೃಭ್ಯಸ್ತತ್ಸಮರ್ಪಯತ್ ।
ಸ ನಿರ್ವಾಸಭುಜಾದಿಭ್ಯಸ್ತೇಭ್ಯೋ ಹೇಮಮಯಂ ಶರಮ್ ॥ ೨೦೧

ತತ್ಸ ಬುದ್ಧ್ವಾ ಚ ಪೃಷ್ಟ್ವಾ ಚ ತೇಷು ವೀರಭುಜೋ ನೃಪಃ ।
ವ್ಯರಜ್ಯದನ್ಯೇಷು ಸುತೇಷ್ವೇಕಂ ಮೇನೇ ಚ ತಂ ಸುತಮ್ ॥ ೨೦೨

ತತಃ ಸ ರಾಜಾ ಮತಿಮಾನ್ ಸಮ್ಯಗೇವಮಚಿಂತಯತ್ ।
ಜಾನೇ ಯಥೈಷ ವಿದ್ವೇಷಾದಭೂದೇಭಿಃ ಪ್ರವಾಸಿತಃ ॥ ೨೦೩

ಪಾಪೈರ್ನಿರಪರಾಧೋಽಪಿ ಶತ್ರುಭಿರ್ಭ್ರಾತೃನಾಮಭಿಃ ।
ತಥೈವ ನೂನಮೇತೇಷಾಂ ಜನನೀಭಿರ್ಮಮ ಪ್ರಿಯಾ ॥ ೨೦೪

ಮಾತಾಸ್ಯ ಸಾ ಗುಣವರಾ ನಿರ್ದೋಷಾ ದೂಷಿತಾ ಮೃಷಾ ।
ತತ್ಕಿಂ ಚಿರೇಣ ಪಶ್ಯಾಮಿ ಯಾವದದ್ಯೈವ ನಿಶ್ಚಯಮ್ ॥ ೨೦೫

ಇತ್ಯಾಲೋಚ್ಯ ಯಥಾವತ್ತದ್ದಿನಂ ನೀತ್ವಾಭ್ಯಗಾನ್ನಿಶಿ ।
ಜಿಜ್ಞಾಸುರಯಶೋಲೇಖಾಂ ರಾಜ್ಞೀಂ ತಾಂ ಸ ನೃಪೋಽಪರಾಮ್ ॥
೨೦೬

೨೦೭. ರಾಜನು ಬಂದಿದ್ದರಿಂದ ತುಂಬ ಸಂತೋಷಗೊಂಡ ಆಕೆಗೆ ಅವನು ಮದ್ಯವನ್ನು ಅತಿಯಾಗಿ ಕುಡಿಸಿದನು. ಸುರತವಾದ ಮೇಲೆ, ರಾಜನು ಎಚ್ಚರುವಾಗಿಯೇ ಇರಲು, ರಾಣಿಯು ನಿದ್ದೆಯಲ್ಲಿಯೇ ಕನವರಿಸಿದಳು:

೨೦೮. "ಗುಣವರೆಯ ಬಗ್ಗೆ ನಾವು ಸುಳ್ಳು ಆರೋಪ ಮಾಡದೇ ಇದ್ದರೆ ಈ ರಾಜನು ನನ್ನ ಬಳಿಗೆ ಹೀಗೆ ಬರುತ್ತಿದ್ದನೇನು ?

೨೦೯. ನಿದ್ದೆ ಮಾಡುತ್ತಿದ್ದ ದುರ್ಬುದ್ಧಿಯ ಈ ಮಾತನ್ನು ಕೇಳಿ ರಾಜನು ಒಂದು ತೀರ್ಮಾನಕ್ಕೆ ಬಂದು ಕೋಪದಿಂದ ಅಲ್ಲಿಂದ ಎದ್ದು ಹೊರಟುಹೋದನು.

೨೧೦. ರಾಜನು ತನ್ನ ಮನೆಗೆ ಹೋಗಿ ಮಂತ್ರಿಗಳನ್ನು ಕರೆದು ಹೇಳಿದನು "ಆ ಗುಣವರೆಯನ್ನು ನೆಲಮಾಳಿಗೆಯಿಂದ ಎಬ್ಬಿಸಿ ಅವಳು ಸ್ನಾನ ಮಾಡಿದ ನಂತರ ಇಲ್ಲಿಗೆ ಕರೆತನ್ನಿರಿ.

೨೧೧. ಅವಳ ಅನಿಷ್ಟ ಶಾಂತಿಗೆ 'ಇಂದಿನ ದಿನ ಶುಭದಿನವೆಂದು ಅವಳ ನೆಲಮಾಳಿಗೆ ವಾಸಕ್ಕೆ ಅವಧಿಯನ್ನು ಜ್ಞಾನಿಗಳು ಹೇಳಿದ್ದರು.'

೨೧೨. ಅದನ್ನು ಕೇಳಿ ಅವರು "ಆಗಲಿ' ಎಂದು ನುಡಿದು ಹೋಗಿ ರಾಣಿಯನ್ನು ಹೊರತಂದು ಅವಳು ಸ್ನಾನಮಾಡಿ ಸಿಂಗರಿಸಿ ಕೊಂಡ ನಂತರ ರಾಜನ ಬಳಿಗೆ ಅವಳನ್ನು ಬೇಗನೆ ಕರೆತಂದರು.

---

ತದಭ್ಯಾಗಮಹೃಷ್ಟಾ ಸಾ ಮದ್ಯಂ ತೇನಾತಿಪಾಯಿತಾ ।
ರತಾಂತಸುಪ್ತಾ ವ್ಯಲಪದ್ರಾಜ್ಞಿ ತಸ್ಮಿನ್ಸಜಾಗರೇ ॥ ೨೦೭

ಮಿಥ್ಯಾ ಗುಣವರಾಯಾಶ್ಚೇನ್ನಾವದಿಷ್ಯಾಮ ದೂಷಣಮ್ ।
ತತ್ಕಿಮೇವಮುಪಾಯಾಸ್ಯದಯಂ ರಾಜಾದ್ಯ ಮಾಮಿಹ ॥ ೨೦೮

ಇತಿ ತಸ್ಯಾ ವಚಃ ಶ್ರುತ್ವಾ ಸುಪ್ತಾಯಾ ದುಷ್ಟಚೇತಸಃ ।
ಉತ್ಪನ್ನನಿಶ್ಚಯೋ ರಾಜಾ ಕ್ರೋಧಾದುತ್ಥಾಯ ನಿರ್ಯಯೌ ॥ ೨೦೯

ಗತ್ವಾ ಸ್ವಾವಾಸಮಾನಾಯ್ಯ ಸ ಜಗಾದ ಮಹತ್ತರಾನ್ ।
ಉದ್ಧೃತ್ಯ ತಾಂ ಗುಣವರಾಂ ಸ್ನಾತಾಮಾನಯತ ದ್ರುತಮ್ ॥ ೨೧೦

ಅಯಂ ಕ್ಷಣೋಽಸ್ಯದ್ಯತನೋ ಜ್ಞಾನಿನಾನಿಷ್ಟಶಾಂತಯೇ ।
ತಸ್ಯಾ ಭೂಗೃಹವಾಸಸ್ಯ ಕಥಿತೋಽಭೂತ್ಕಿಲಾವಧಿಃ ॥ ೨೧೧

ತಚ್ಛ್ರುತ್ವಾ ತೈಸ್ತಥೇತ್ಯುಕ್ತ್ವಾ ಗತ್ವಾ ಸ್ನಾತಾ ವಿಭೂಷಿತಾ ।
ರಾಜ್ಞೀ ಗುಣವರಾ ಕ್ಷಿಪ್ರಮಾನಿನ್ಯೇ ಸಾ ತದಂತಿಕಮ್ ॥ ೨೧೨

೨೧೩. ಆಮೇಲೆ ವಿರಹ ಸಾಗರವನ್ನು ದಾಟಿ ನೆಮ್ಮದಿ ಪಡೆದಿದ್ದ ಆ ದಂಪತಿಗಳಿಬ್ಬರೂ ಪರಸ್ಪರ ಆಲಿಂಗನ ಮಾಡಿದರೂ ತೃಪ್ತಿ ಹೊಂದದೆ ಆ ರಾತ್ರಿಯನ್ನು ಕಳೆದರು.

೨೧೪. ಆಗಲೇ ರಾಜನು ಮಹಾರಾಣಿಗೆ ಸಂತೋಷದಿಂದ ಶೃಂಗಭುಜನ ಸಂಗತಿಯನ್ನು ಬಣ್ಣಿಸಿದನು. ಅದನ್ನೇ ಮಗನಿಗೂ ತಿಳಿಸಿದನು.

೨೧೫. ಅನಂತರ ನಿದ್ರೆಯಿಂದೆದ್ದ ಅಯಶೋಲೇಖೆಯು ತನ್ನ ಮೋಸವನ್ನು ತನ್ನ ಬಾಯಿಂದಲೇ ಕೇಳಿ ರಾಜನು ಎದ್ದುಹೋದನು ಎಂದು ಊಹಿಸಿ ತುಂಬ ವಿಷಾದಗೊಂಡಳು.

೨೧೬. ವೀರಭುಜ ಮಹಾರಾಜನು ಮಾರನೆಯ ದಿನ ಬೆಳಿಗ್ಗೆ ಮಗನಾದ ಶೃಂಗಭುಜನನ್ನು ರೂಪಶಿಖೆಯೊಂದಿಗೆ ಗುಣವರೆಯ ಬಳಿಗೆ ಕರೆತಂದನು.

೨೧೭. ನೆಲಮಾಳಿಗೆಯಿಂದ ಹೊರಬಂದ ತಾಯಿಯನ್ನು ಕಂಡು ಹತ್ತಿರಹೋಗಿ ನವವಧು ರೂಪಶಿಖೆಯೊಂದಿಗೆ ಅವರಿಬ್ಬರ ಕಾಲುಗಳಿಗೂ ಎರಗಿದನು.

೨೧೮. ಗುಣವರೆಯೂ ಸಹ ಮಾರ್ಗವನ್ನು ದಾಟಿ ಬಂದ ಮಗನನ್ನು ಬಿಗಿದಪ್ಪಿ ಪ್ರವಾಸದಲ್ಲಿ ದೊರೆತ ಸೊಸೆಯನ್ನು ಆಲಿಂಗಿಸಿ ಸಂತೋಷದ ಮೇಲೆ ಸಂತೋಷವನ್ನು ಹೊಂದಿದಳು.

೨೧೯. ಅನಂತರ ತಂದೆಯ ಆಣತಿಯಂತೆ ಶೃಂಗಭುಜನು ಆಕೆಗೆ ತನ್ನ ಕಥೆಯನ್ನು ಮತ್ತು ರೂಪಶಿಖೆಯು ಮಾಡಿದ್ದೆಲ್ಲವನ್ನೂ ವಿಸ್ತಾರವಾಗಿ ಹೇಳಿದನು.

---

ತತಸ್ತೌ ದಂಪತೀ ತೀರ್ಣವಿರಹಾರ್ಣವನಿರ್ವೃತೌ ।
ಅನ್ಯೋನ್ಯಾಲಿಂಗನಾತೃಪ್ತೌ ನಿನ್ಯತುಸ್ತಾಂ ವಿಭಾವರೀಮ್ ॥ ೨೧೩
ಅವರ್ಣಯತ್ ಸ ರಾಜಾತ್ರ ದೇವ್ಯೈ ತಸ್ಯೈ ಮುದಾ ತದಾ ।
ತಂ ಶೃಂಗಭುಜವೃತ್ತಾಂತಂ ತದೇವ ನಿಜಸೂನವೇ ॥ ೨೧೪
ಸಾಥ ಪ್ರಬುದ್ಧಾ ರಾಜಾನಂ ಗತಂ ಬುದ್ಧ್ವಾ ಸ್ವವಾಕ್ಛಲಮ್ ।
ಸಂಭಾವ್ಯೈವಾಯಶೋಲೇಖಾ ವಿಷಾದಮಗಮತ್ ಪರಮ್ ॥ ೨೧೫
ಪ್ರಾತಶ್ಚ ಸ ನೃಪೋ ವೀರಭುಜೋ ಗುಣವರಾಂತಿಕಮ್ ।
ಆನಾಯಯತ್ ಶೃಂಗಭುಜಂ ಸುತಂ ರೂಪಶಿಖಾಯುತಮ್ ॥ ೨೧೬
ಸೋಽಭ್ಯೇತ್ಯ ಮಾತರಂ ದೃಷ್ಟ್ವಾ ಹೃಷ್ಟೋ ಭೂಗೃಹನಿರ್ಗತಾಮ್ ।
ತಯೋರ್ವವಂದೇ ಚರಣೌ ಪಿತ್ರೋರ್ನವವಧೂಯುತಃ ॥ ೨೧೭
ಅಥೋತ್ತೀರ್ಣಂ ತಮಾಶ್ಲಿಷ್ಯ ಪುತ್ರಂ ಗುಣವರಾಪಿ ಸಾ ।
ತಾಂ ಚ ಸ್ನುಷಾಂ ತಥಾ ಪ್ರಾಪ್ತಾಮುತ್ಸವಾದುತ್ಸವಂ ಯಯೌ ॥ ೨೧೮
ತತಃ ಪಿತುರ್ನಿದೇಶಾತ್ಸ ತಸ್ಯೈ ಶೃಂಗಭುಜೋಽಬ್ರವೀತ್ ।
ವಿಸ್ತರೇಣ ಸ್ವವೃತ್ತಾಂತಂ ಯಚ್ಚ ರೂಪಶಿಖಾಕೃತಮ್ ॥ ೨೧೯

೨೨೦–೨೧. ಆಗ ರಾಣಿ ಗುಣವರೆಯು ಸಂತೋಷದಿಂದ ಅವನಿಗೆಂದಳು. "ಮಗನೇ, ನಿನ್ನ ಸಲುವಾಗಿ ಈ ರೂಪಶಿಖೆಯು ಏನೇನನ್ನು ಮಾಡಲಿಲ್ಲ ? ತನ್ನ ಬಾಳನ್ನೂ ಬಂಧುಗಳನ್ನೂ ಮತ್ತು ಊರನ್ನೂ ಬಿಟ್ಟು ಬಂದು ಆಶ್ಚರ್ಯಕರವಾದ ಚರಿತ್ರೆಯುಳ್ಳ ಇವಳು ನಿನಗೆ ಈ ಮೂರನ್ನೂ ಕೊಟ್ಟಿದ್ದಾಳೆ.

೨೨೨. ನಿನ್ನ ಸಲುವಾಗಿಯೇ ವಿಧಿವಶದಿಂದಾಗಿ ಇಲ್ಲಿ ಅವತರಿಸಿರುವ ಈಕೆಯು ಯಾರೋ ದೇವತೆಯೇ ಸರಿ. ಇವಳು ಎಲ್ಲ ಪತಿವ್ರತೆಯರ ತಲೆಯ ಮೇಲೆ ಕಾಲಿರಿಸಿದ್ದಾಳೆ.

೨೨೩. ರಾಣಿಯು ಹೀಗೆನ್ನಲು ರಾಜನು ಅವಳ ಮಾತನ್ನೇ ಅಭಿನಂದಿಸಿದನು. ರೂಪಶಿಖೆಯು ವಿನಯದಿಂದ ತಲೆ ತಗ್ಗಿಸಿದಳು.

೨೨೪. ಆ ವೇಳೆಗೆ ಅದೇ ಅಯಶೋಲೇಖೆಯಿಂದ ಮುಂಚೆ ಸುಳ್ಳು ಅಪವಾದ ಹೊತ್ತಿದ್ದ ಅಂತಃಪುರಾಧ್ಯಕ್ಷ ಸುರಕ್ಷಿತನು ತೀರ್ಥಕ್ಷೇತ್ರಗಳನ್ನೆಲ್ಲ ಸುತ್ತಿ ಹಿಂತಿರುಗಿ ಬಂದನು.

೨೨೫. ಸಾರಥಿಯು ಅವನನ್ನು ತಂದೊಪ್ಪಿಸಿದಾಗ ಅವನು ರಾಜನ ಕಾಲಿಗೆ ಸಂತೋಷದಿಂದ ನಮಿಸಿದನು. ನಿಜ ಸಂಗತಿಯನ್ನು ತಿಳಿದಿದ್ದ ವೀರಭುಜ ರಾಜನು ಸಂತುಷ್ಟನಾಗಿ ಅವನನ್ನು ಬಹುವಾಗಿ ಗೌರವಿಸಿದನು.

೨೨೬. ಅವನ ಮೂಲಕವೇ ಉಳಿದೆಲ್ಲ ದುಷ್ಟರಾಣಿಯರನ್ನು ಕರೆಸಿ "ಇವರೆಲ್ಲರನ್ನೂ ಇಲ್ಲಿಯೇ ನೆಲಮಾಳಿಗೆಯಲ್ಲಿ ಹಾಕು' ಎಂದು ಹೇಳಿದನು.

---

ತತೋ ಗುಣವರಾ ರಾಜ್ಞೀ ಸಾ ಪ್ರಹೃಷ್ಟಾ ಜಗಾದ ತಮ್ ।
ಕಿಂ ಕಿಂ ನ ರೂಪಶಿಖಯಾ ಕೃತಂ ಪುತ್ರ ತವಾನಯಾ ॥ ೨೨೦

ಹಿತ್ವಾ ಸ್ವಜೀವಿತಂ ಬಂಧೂನ್ದೇಶಂ ಚೇಹ ಯದೇತಯಾ ।
ತ್ರೀಣ್ಯೇತಾನಿ ಪ್ರದತ್ತಾನಿ ತುಭ್ಯಂ ಚಿತ್ರಚರಿತ್ರಯಾ ॥ ೨೨೧

ತ್ವದರ್ಥಮವತೀರ್ಣೈಷಾ ಕಾಪಿ ದೇವೀ ವಿಧೇರ್ವಶಾತ್ ।
ಪತಿವ್ರತಾನಾಂ ಸರ್ವಾಸಾಂ ಯಯಾ ಮೂರ್ಧ್ನಿ ಪದಂ ಕೃತಮ್ ॥ ೨೨೨

ಏವಮುಕ್ತೇ ತಯಾ ರಾಜ್ಞ್ಯಾ ತದ್ವಾಕ್ಯಮಭಿನಂದತಿ ।
ರಾಜ್ಞಿ ರೂಪಶಿಖಾಯಾಂ ಚ ವಿನಯಾನತಮೂರ್ಧನಿ ॥ ೨೨೩

ಆಯಯೌ ಸ ತಯೈವ ಪ್ರಾಗಯಶೋಲೇಖಯಾ ಮೃಷಾ ।
ದೂಷಿತೋಽಂತಃಪುರಾಧ್ಯಕ್ಷೋ ಭ್ರಾಂತತೀರ್ಥಃ ಸುರಕ್ಷಿತಃ ॥ ೨೨೪

ಕ್ಷತ್ರಾ ನಿವೇದಿತಂ ತಂ ಚ ಪ್ರಹೃಷ್ಟಂ ಚರಣಾನತಮ್ ।
ಜ್ಞಾತಾರ್ಥೋಽಪೂಜಯದ್ರಾಜಾ ಭೃಶಂ ವೀರಭುಜೋಽಥ ಸಃ ॥ ೨೨೫

ತೇನೈವಾನಾಯ್ಯ ಚಾನ್ಯಾಸ್ತಾ ರಾಜ್ಞೀರತ್ರೈವ ದುರ್ಜನೀಃ ।
ತಮೇವೋವಾಚ ಗಚ್ಛೈತಾ ಭೂಗೃಹೇ ನಿಖಿಲಾಃ ಕ್ಷಿಪ ॥ ೨೨೬

೨೨೭. ಅದನ್ನು ಕೇಳಿ ಅವರೆಲ್ಲ ಭೀತರಾದರು. ಅವರನ್ನು ನೆಲಮಾಳಿಗೆಯಲ್ಲಿ ಹಾಕಿದ ಮೇಲೆ ರಾಣಿ ಗುಣವರೆಯು ರಾಜನ ಕಾಲಿಗೆ ಬಿದ್ದು ಬೇಡಿ ಕೊಂಡಳು:

೨೨೮. "ಮಹಾರಾಜನೇ, ಬೇಕಾದರೆ ನನ್ನನ್ನೇ ಮತ್ತೆ ನೆಲಮಾಳಿಗೆಯಲ್ಲಿ ಚಿರಕಾಲ ಹಾಕು. ಆದರೆ ಪ್ರಸನ್ನನಾಗು. ಇವರೆಲ್ಲ ಹೀಗೆ ಅಂಜಿಕೊಂಡಿರುವುದನ್ನು ನಾನು ನೋಡಲಾರೆ.'

೨೨೯. ಹೀಗೆ ರಾಜನನ್ನು ಬೇಡಿಕೊಂಡ ಅವಳು ರಾಣಿಯರ ಬಂಧನವನ್ನು ನಿವಾರಿಸಿದಳು. ವಿರುದ್ಧರಾದವರಿಗೆ ದಯೆ ತೋರಿಸುವುದೇ ಮಹಾತ್ಮರ ಪ್ರತಿಕ್ರಿಯೆಯಲ್ಲವೇ !

೨೩೦. ಆಮೇಲೆ ರಾಣಿಯರೆಲ್ಲ ನಾಚಿಕೆಪಟ್ಟುಕೊಂಡು ಇಷ್ಟವಾದುದಲ್ಲವಾದಾರೂ ಮತ್ತೊಂದು ಭುಜವನ್ನು (ಮತ್ತೊಬ್ಬ ಶೃಂಗಭುಜನನ್ನು) ಪಡೆಯಲು ಆಸೆ ಪಡುತ್ತಾ ತಮ್ಮತಮ್ಮ ಮನೆಗಳಿಗೆ ಹೋದರು.

೨೩೧. ರಾಜನಾದರೋ ಮಹಾಶಯಳಾದ ಗುಣವತಿಯನ್ನು ತುಂಬ ಗೌರವದಿಂದ ಕಂಡನು. ಆ ಮಡದಿಯಿಂದ ತಾನೂ ಪುಣ್ಯಾತ್ಮನೆಂದು ಭಾವಿಸಿದನು.

೨೩೨. ಆಮೇಲೆ ನಿರ್ವಾಸಭುಜ ಮುಂತಾದ ಇತರ ಮಕ್ಕಳನ್ನೆಲ್ಲ ಕರೆಸಿ ಅವರನ್ನು ದೇಶದಿಂದ ಹೊರಹಾಕಲು ನಿರ್ಧರಿಸಿ ಆ ರಾಜನು ಉಪಾಯದಿಂದ ಕೃತಕವಾಗಿ ಅವರಿಗೆಂದನು.

---

ತತ್ ಶ್ರುತ್ವಾ ತಾಸು ಭೀತಾಸು ಕ್ಷಿಪ್ತಾಸು ಕೃಪಯಾ ನೃಪಮ್ ।
ತಂ ಸಾ ಗುಣವರಾ ದೇವೀ ಪಾದಲಗ್ನಾ ವ್ಯಜಿಜ್ಞಪತ್ ॥ ೨೨೭

ದೇವ ಮಾಮೇವ ಭೂಯೋಽಪಿ ಚಿರಂ ಸ್ಥಾಪಯ ಭೂಗೃಹೇ ।
ಪ್ರಸೀದ ನೈವಮೇತಾ ಹಿ ಭೀತಾಃ ಶಕ್ನೋಮಿ ವೀಕ್ಷಿತುಮ್ ॥ ೨೨೮

ಇತಿ ಪ್ರಾರ್ಥ್ಯ ನೃಪಂ ತಾಸಾಂ ಬಂಧನಂ ಸಾ ನ್ಯವಾರಯತ್ ।
ಮಹತಾಮನುಕಂಪಾ ಹಿ ವಿರುದ್ಧೇಷು ಪ್ರತಿಕ್ರಿಯಾ ॥ ೨೨೯

ತತಸ್ತಾಃ ಪ್ರೇಷಿತಾ ರಾಜ್ಞಾ ಲಜ್ಜಿತಾಃ ಸ್ವಗೃಹಾನ್ ಯಯುಃ ।
ಅನಿಷ್ಟಮಪಿ ವಾಂಛಂತ್ಯೋ ದೀಯಮಾನಂ ಭುಜಾಂತರಮ್ ॥ ೨೩೦

ತಾಂ ಚ ರಾಜಾ ಗುಣವರಾಂ ಬಹು ಮೇನೇ ಮಹಾಶಯಾಮ್ ।
ಆತ್ಮಾನಂ ಚ ತಯಾ ಪತ್ನ್ಯಾ ಕೃತಪುಣ್ಯಮಮನ್ಯತ ॥ ೨೩೧

ಅಥಾನಾಯ್ಯ ಸುತಾನನ್ಯಾನ್ ಸ ನಿರ್ವಾಸಭುಜಾದಿಕಾನ್ ।
ನಿರ್ವಾಸಯಿಷ್ಯನ್ ಯುಕ್ತ್ಯಾ ತಾನ್ ರಾಜಾ ಕೃತಕಮಭ್ಯಧಾತ್ ॥ ೨೩೨

೨೩೩. "ಪಾಪಿಗಳಾದ ನೀವು ಪ್ರಯಾಣಮಾಡುತ್ತಿದ್ದ ವ್ಯಾಪಾರಿಯೊಬ್ಬನನ್ನು ಕೊಂದಿದ್ದೀರೆಂದು ತಿಳಿದುಬಂದಿದೆ. ಆದ್ದರಿಂದ ಎಲ್ಲ ಪುಣ್ಯಕ್ಷೇತ್ರಗಳನ್ನೂ ಸಂದರ್ಶಿಸಲು ಹೊರಡಿರಿ. ಇನ್ನು ಇಲ್ಲಿ ನಿಲ್ಲಬೇಡಿ.

೨೩೪. ಅದನ್ನು ಕೇಳಿದ ಇತರ ರಾಜರು ವೀರಭುಜನಿಗೆ ಏನನ್ನು ಹೇಳಲೂ ಶಕ್ತರಾಗಲಿಲ್ಲ. ಪ್ರಭುವು ಹಠಮಾಡುತ್ತಿರುವಾಗ ತಿಳಿವಳಿಕೆ ಹೇಳಲು ಯಾರಿಗೆ ತಾನೆ ಸಾಧ್ಯವಾದೀತು ?

೨೩೫. ಅದರಂತೆಯೇ ಹೊರಟ ಆ ಸೋದರರನ್ನು ನೋಡಿ ಶೃಂಗಭುಜನು ದಯೆಯಿಂದ ಕಣ್ಣೀರು ತುಂಬಿಬರಲು ತನ್ನ ತಂದೆಗೆ ಬಿನ್ನವಿಸಿದನು.

೨೩೬. "ಅಪ್ಪಾ, ಇವರ ಇದೊಂದು ತಪ್ಪನ್ನು ಮನ್ನಿಸಿ ಇವರಿಗೆ ದಯೆ ತೋರು.' ಹೀಗೆ ನುಡಿದು ರಾಜನ ಪಾದಗಳಿಗೆ ಬಿದ್ದನು.

೧೩೭–೧೨೮. ಆ ರಾಜನೂ ತನ್ನ ಮಗನು ಬಾಲ್ಯದಲ್ಲಿ ಯಶೋದೆಯನ್ನು ಆಶ್ರಯಿಸಿದ ಹಾಗೂ (ಗೋವರ್ಧನ) ಗಿರಿಯ ಭಾರವನ್ನು ಸಹಿಸಿದ ಹರಿಯಂತೆ, ಕೀರ್ತಿ ದಯೆಗಳನ್ನು ಹೊಂದಿ ರಾಜರ ಭಾರವನ್ನು ಸಹಿಸುವ (ಶಕ್ತಿಯುಳ್ಳ)ವನೆಂದು ತಿಳಿದು ತನ್ನ ಅಭಿಪ್ರಾಯವನ್ನು ಗುಟ್ಟಾಗಿಯೇ ಇಟ್ಟು ದ್ವೇಷವನ್ನು ಉಳಿಸಿಕೊಂಡು, ಅವನ ಮಾತಿನಂತೆಯೇ ನಡೆದನು. ಅವರೆಲ್ಲರೂ ತಮ್ಮ ಸೋದರನು ತಮ್ಮ ಪ್ರಾಣವನ್ನು ಉಳಿಸಿಕೊಟ್ಟನೆಂಬ ಭಾವನೆಯಿಟ್ಟುಕೊಂಡರು.[1]

---

ಶ್ರುತಂ ಮಯಾ ವಣಿಕ್ಪಾಪೈರ್ಭವದ್ಭಿಃ ಪಥಿಕೋ ಹತಃ ।
ತದ್ಭ್ರಾಂತುಂ ಸರ್ವತೀರ್ಥಾನಿ ಯಾತ ಮಾ ಸ್ಮೇಹ ತಿಷ್ಠತ ॥ ೨೩೩

ತತ್ಶ್ರುತ್ವಾ ತಂ ನ ಶೇಕುಸ್ತೇ ನೃಪಂ ಬೋಧಯಿತುಂ ನೃಪಾಃ ।
ಪ್ರಭೌ ಹಠಪ್ರವೃತ್ತೇ ಹಿ ಕಸ್ಯ ಪ್ರತ್ಯಾಯನಾ ಭವೇತ್ ॥ ೨೩೪

ತತಸ್ತಾನ್ ಗಚ್ಛತೋ ದೃಷ್ಟ್ವಾ ಭ್ರಾತೄನ್ ಶೃಂಗಭುಜೋಽಥ ಸಃ ।
ಕೃಪೋದ್ಭೂತಾಶ್ರುಪೂರ್ಣಾಕ್ಷಃ ಪಿತರಂ ತಂ ವ್ಯಜಿಜ್ಞಪತ್ ॥ ೨೩೫

ತಾತಾಪರಾಧಮೇಕಂ ತ್ವಂ ಕ್ಷಮಸ್ವೈಷಾಂ ಕೃಪಾಂ ಕುರು ।
ಇತ್ಯುಕ್ತ್ವಾ ಪಾದಯೋಸ್ತಸ್ಯ ನಿಪಪಾತ ಸ ಭೂಪತೇಃ ॥ ೨೩೬

ಸೋಽಪಿ ಮತ್ವಾ ನರೇಂದ್ರಸ್ತಂ ಭೂಭೃದ್ಭಾರಸಹಂ ಸುತಮ್ ।
ಯಶೋದಯಾಶ್ರಿತಂ ಬಾಲ್ಯೇಽಪ್ಯವತಾರಂ ಹರೇರಿವ ॥ ೨೩೭

ಗೂಢಾಶಯೋ ವೈರರಕ್ಷೀ ವಚಸ್ತಸ್ಯ ತಥಾಕರೋತ್ ।
ತೇಽಪಿ ತಂ ಭ್ರಾತರಂ ಸರ್ವೇ ಪ್ರಾಣದಂ ಮೇನಿರೇ ನಿಜಮ್ ॥ ೨೩೮

---

1 ಟಿಪ್ಪಣಿ: ಹರಿಯ ಪರವಾದ ಅರ್ಥದಲ್ಲಿ ಯಶೋದಯಾಶ್ರಿತಂ ಎಂಬುದು ಯಶೋದೆಗೆ ಅನ್ವಯಿಸುತ್ತದೆ. ಶೃಂಗಭುಜನ ಪರವಾದ ಅರ್ಥದಲ್ಲಿ ಯಶೋ–ದಯಾಶ್ರಿತಂ ಎಂದು ಯಶಸ್ಸು, ದಯೆ ಗಳಿಸಿರುವವನೆಂದಾಗುತ್ತದೆ. ಹಾಗೆಯೇ ಭೂಭೃದ್ಭಾರವೆಂಬುದು ಗೋವರ್ಧನಗಿರಿಗೆ ಹಾಗೂ ರಾಜರಿಗೆ ಅನ್ವಯಿಸುತ್ತದೆ.

೨೩೯. ಪ್ರಜೆಗಳೆಲ್ಲರೂ ಶೃಂಗಭುಜನ ಆ ಅತಿಶಯಗುಣವನ್ನು ಕಂಡು ಅವನಲ್ಲಿ ಪ್ರೀತಿಯನ್ನಿಟ್ಟರು.

೨೪೦. ಅನಂತರ ಮಾರನೆಯ ದಿನ ಹಿರಿಯಸೋದರರು ಇದ್ದರೂ ಗುಣದಲ್ಲಿ ಹಿರಿಯನಾಗಿದ್ದ ಶೃಂಗಭುಜನನ್ನು ವೀರಭುಜ ಮಹಾರಾಜನು ಯುವರಾಜನನ್ನಾಗಿ ಪಟ್ಟಾಭಿಷೇಕ ಮಾಡಿದನು.

೨೪೧. ಹೀಗೆ ಪಟ್ಟಾಭಿಷಿಕ್ತನಾದ ಶೃಂಗಭುಜನು ಆಮೇಲೆ ತಂದೆಗೆ ತಿಳಿಸಿ ಎಲ್ಲ ಸೇನೆಯೊಂದಿಗೆ ದಿಗ್ವಿಜಯಕ್ಕೆ ಹೊರಟನು.

೨೪೨. ತೋಳ್ಬಲದಿಂದ ರಾಜ ಸಮೂಹಗಳನ್ನೆಲ್ಲ ಗೆದ್ದ ಅವನು ಎಲ್ಲ ದಿಕ್ಕುಗಳಲ್ಲೂ ತನ್ನ ಕೀರ್ತಿಸಿರಿಯನ್ನು ಹರಡಿ ಹಿಂದಿರುಗಿ ಬಂದನು.

೨೪೩–೨೪೪. ವಿವೇಕಿಯಾದ ಶೃಂಗಭುಜನು ಮುಂದೆ ವಿಧೇಯರಾಗಿದ್ದ ಸೋದರರೊಂದಿಗೆ ರಾಜ್ಯಭಾರವನ್ನು ನಡೆಸುತ್ತಾ ನಿಶ್ಚಿಂತೆಯಿಂದ, ಸುಖೋಪಭೋಗಗಳಿಂದ ಮಾತಾಪಿತೃಗಳನ್ನು ಸುಖವಾಗಿಟ್ಟು ಸಂತಸಪಡಿಸುತ್ತಾ ಬ್ರಾಹ್ಮಣರಿಗೆ ದಾನನೀಡುತ್ತಾ ಅರ್ಥಸಿದ್ಧಿಯೆಂಬಂತಿದ್ದ ಸುಂದರಿ ರೂಪಶಿಖೆಯೊಂದಿಗೆ ಸುಖವಾಗಿದ್ದನು.

೨೪೫. ಈ ರೀತಿಯಾಗಿ ಗುಣವರಾ–ರೂಪಶಿಖೆಯರೆಂಬ ಅತ್ತೆ–ಸೊಸೆಯರಂತೆ ಉತ್ತಮಸ್ತ್ರೀಯರು ಪತಿಗೆ ಎಲ್ಲ ರೀತಿಯಿಂದಲೂ ಸೇವೆಗೈಯ್ಯುತ್ತಾರೆ.

---

ಸರ್ವಾಃ ಪ್ರಕೃತಯೋಽಪ್ಯತ್ರ ತಸ್ಯ ಶೃಂಗಭುಜಸ್ಯ ತಮ್ ।
ಗುಣಾತಿಶಯಮಾಲೋಕ್ಯ ದಧುಸ್ತದನುರಾಗಿತಾಮ್ ॥ ೨೩೯

ತತೋಽನ್ಯೇದ್ಯುಃ ಗುಣಜ್ಯೇಷ್ಠಂ ತಜ್ಜ್ಯೇಷ್ಠೇಷ್ವಪಿ ಸತ್ಸು ಸಃ ।
ಪಿತಾ ವೀರಭುಜೋ ರಾಜಾ ಯೌವರಾಜ್ಯೇಽಭಿಷಿಕ್ತವಾನ್ ॥ ೨೪೦

ಸ ಚ ಪ್ರಾಪ್ತಾಭಿಷೇಕಃ ಸನ್ ದಿಗ್ಜಯಾಯ ಯಯೌ ತತಃ ।
ವಿಜ್ಞಪ್ಯ ಪಿತರಂ ಸರ್ವೈರ್ಬಲೈಃ ಶೃಂಗಭುಜಃ ಸಹ ॥ ೨೪೧

ಬಾಹುವೀರ್ಯಜಿತಾಶೇಷವಸುಧಾಧಿಪಮಂಡಲಮ್ ।
ಆದಾಯ ಚಾಯಯೌ ದಿಕ್ಷು ಪ್ರವಿಕೀರ್ಯ ಯಶಃಶ್ರಿಯಮ್ ॥ ೨೪೨

ತತೋ ವಹನ್ ರಾಜ್ಯಭಾರಂ ಪ್ರಹ್ವೈರ್ಭ್ರಾತೃಭಿಃ ಸಹ ।
ನಿಶ್ಚಿಂತಭೋಗಸುಖಿತೌ ರಂಜಯನ್ ಪಿತರೌ ಕೃತೀ ॥ ೨೪೩

ದಾನಂ ದದದ್ಬ್ರಾಹ್ಮಣೇಭ್ಯಸ್ತಸ್ಥೌ ಶೃಂಗಭುಜಃ ಸುಖೀ ।
ರೂಪವತ್ಯಾರ್ಥಸಿದ್ಧ್ಯೇವ ಸ ರೂಪಶಿಖಯಾ ಸಹ ॥ ೨೪೪

ಇತ್ಥನನ್ಯಾಃ ಪತಿಂ ಸಾಧ್ವ್ಯಃ ಸರ್ವಾಕಾರಮುಪಾಸತೇ ।
ಏತೇ ಗುಣವರಾರೂಪಶಿಖೇ ಶ್ವಶ್ರೂಸ್ನುಷೇ ಯಥಾ ॥ ೨೪೫

೨೪೬ ಎಂಬುದಾಗಿ ಹರಿಶಿಖನ ಬಾಯಿಂದ ಕಥೆಯನ್ನು ಕೇಳಿದ ನರವಾಹನದತ್ತನು ಚೆನ್ನಾಗಿದೆ ಎನ್ನುತ್ತಾ ರತ್ನಪ್ರಭೆಯೊಂದಿಗೆ ತುಂಬ ಸಂತೋಷಪಟ್ಟನು.

೨೪೭ ಆಮೇಲೆ ಎದ್ದು, ಬೇಗನೆ ಅಹ್ನಿಕವನ್ನು ಮಾಡಿ, ತಂದೆಯಾದ ವತ್ಸರಾಜನ ಬಳಿಗೆ ಪತ್ನೀಸಹಿತನಾಗಿ ಹೋಗಿ, ಊಟಮಾಡಿ ಗೀತವಾದ್ಯಗಳಿಂದ ಅಪರಾಹ್ಣವನ್ನು ಕಳೆದು, ತನ್ನ ಕಾಂತೆಯೊಂದಿಗೆ ತನ್ನ ಅಂತಃಪುರದಲ್ಲಿ ರಾತ್ರಿಯನ್ನು ಕಳೆದನು.

ಮಹಾಕವಿ ಸೋಮದೇವಭಟ್ಟನು ವಿರಚಿಸಿದ
ಕಥಾಸರಿತ್ಸಾಗರದ ರತ್ನಪ್ರಭಾಲಂಬಕದಲ್ಲಿ
ಐದನೆಯ ತರಂಗವು ಮುಗಿಯಿತು.

---

ಇತಿ ನರವಾಹನದತ್ತೋ ಹರಿಶಿಖಮುಖತಃ ಕಥಾಮಿಮಾಂ ಶ್ರುತ್ವಾ।
ರತ್ನಪ್ರಭಾಸಮೇತಃ ಸಾಧ್ವಿತಿ ಜಲ್ಪಂಸ್ತುತೋಷ ಪರಮ್ ॥ ೨೪೬

ಉತ್ಥಾಯ ಚಾಹ್ನಿಕಮಥಾಶು ವಿಧಾಯ ಗತ್ವಾ
ವತ್ಸೇಶ್ವರಸ್ಯ ನಿಕಟಂ ಸ ಪಿತುಃ ಸಭಾರ್ಯಃ।
ಭುಕ್ತ್ವಾಪರಾಹ್ಣಮತಿವಾಹ್ಯ ಚ ಗೀತವಾದ್ಯೈಃ
ಸ್ವಾಂತಃಪುರೇ ಸದಯಿತೋ ರಜನೀಂ ನಿನಾಯ ॥ ೨೪೭

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ
ಕಥಾಸರಿತ್ಸಾಗರೇ
ರತ್ನಪ್ರಭಾಲಂಬಕೇ ಪಂಚಮಸ್ತರಂಗಃ।

---

# ಆರನೆಯ ತರಂಗ

೧ ಅನಂತರ ಬೆಳಿಗ್ಗೆ ರತ್ನಪ್ರಭೆಯ ಮನೆಯಲ್ಲಿದ್ದ ನರವಾಹನದತ್ತನ ಬಳಿಗೆ ಗೋಮುಖ ಮುಂತಾದವರು ಮತ್ತೆ ಬಂದರು.

೨. ಮರುಭೂತಿಯಾದರೋ ಸ್ವಲ್ಪ (ಹೆಚ್ಚಾಗಿಯೇ) ಕುಡಿದ ಮದ್ಯದಿಂದಾಗಿ ಆಲಸ್ಯದಿಂದ ಮೈಗೆ ಹೂವು ಸುತ್ತಿಕೊಂಡು ಪ್ರಸಾಧನವನ್ನು ಬಳಿದುಕೊಂಡು ತಡವಾಗಿ ಬಂದನು.

೩. ತಪ್ಪಿದ ಹೆಜ್ಜೆಗಳಿಂದ ಹಾಗೂ ಮಾತುಗಳಿಂದ ನಗಿಸುತ್ತಾ ಬಂದ ಅವನ ಚರ್ಯೆಯನ್ನು ಕಂಡು ಗೋಮುಖನ ಮುಖ ಕೆಂಪವಾಯಿತು. ಅವನನ್ನು ಒಳ್ಳೆಯ ಮಾತಿನಲ್ಲೇ ಗೋಮುಖನು ಕೇಳಿದನು.

೪. "ಯೌಗಂಧರಾಯಣನ ಮಗನಾಗಿಯೂ ನೀತಿಯು ನಿನಗೆ ಗೊತ್ತಿಲ್ಲವೇ ? ಬೆಳಿಗ್ಗೆ ಮದ್ಯವನ್ನು ಕುಡಿಯುತ್ತೀಯೆ ಮತ್ತು ಮತ್ತಿನಿಂದ ಒಡೆಯನ ಬಳಿಗೆ ಬರುತ್ತೀಯೆ' ಎಂದನು.

೫ ಅದನ್ನು ಕೇಳಿ ಮತ್ತನಾದ ಮರುಭೂತಿಯು ಹೇಳಿದನು. "ಇದನ್ನು ಒಡೆಯನಾಗಲಿ ಅಥವಾ ಹಿರಿಯನಾಗಲಿ ನನಗೆ ಹೇಳಬೇಕು.

---

# ಷಷ್ಠಸ್ತರಂಗಃ

ತತಃ ಪ್ರಾತಃ ಪುನಾ ರತ್ನಪ್ರಭಾಸದ್ಮನಿ ತಂ ಸ್ಥಿತಮ್ ।
ನರವಾಹನದತ್ತಂ ತೇ ಗೋಮುಖಾದ್ಯಾ ಉಪಾಗಮನ್ ॥ ೧
ಮರುಭೂತಿಃ ಸ ತು ಮನಾಕ್ ಪೀತಾಸವಮದಾಲಸಃ ।
ಬದ್ಧಪುಷ್ಪೋಽನುಲಿಪ್ತಶ್ಚ ವಿಲಂಬಿತ ಉಪಾಯಯೌ ॥ ೨
ಪ್ರಸ್ಖಲತ್ಪದಯಾ ಗತ್ಯಾ ಹಾಸಯಂಸ್ತಂ ಗಿರಾ ತದಾ ।
ತನ್ನೀತಿರಂಜಿತಮುಖೋ ನರ್ಮಣೋವಾಚ ಗೋಮುಖಃ ॥ ೩
ಯೌಗಂಧರಾಯಣಸುತೋ ಭೂತ್ವಾ ನೀತಿಂ ನ ವೇತ್ಸಿ ಕಿಮ್ ।
ಪ್ರಾತಃ ಪಿಬಸಿ ಮದ್ಯಂ ಯನ್ಮತ್ತಃ ಪ್ರಭುಮುಪೈಷಿ ಚ ॥ ೪
ತತ್ ಶ್ರುತ್ವಾ ತಂ ಕ್ರುಧಾ ಕ್ಷೀಬೋ ಮರುಭೂತಿರ್ಜಗಾದ ಸಃ ।
ಏತನ್ಮೇ ಪ್ರಭುಣಾ ವಾಚ್ಯಮಮುನಾ ಗುರುಣಾಪಿ ವಾ ॥ ೫

೬ ಇದನ್ನು ಕಲಿಸಲು ನೀನು ಯಾರವನು ಹೇಳು.' ಹೀಗೆಂದ ಅವನಿಗೆ ಗೋಮುಖನು ಮತ್ತೆ ನಗುತ್ತಾ ನುಡಿದನು.

೭ "ಯಾರಾದರೂ ಪ್ರಭುಗಳು ಅವಿನೀತನನ್ನು ತಮ್ಮ ಮಾತಿನಿಂದ ಗದರಿಸುತ್ತಾರೆಯೇ ? ಅವರ ಅಕ್ಕಪಕ್ಕದವರು ಸರಿಯಾದ ರೀತಿಯಲ್ಲಿ ತಿಳಿಹೇಳಲೇಬೇಕು ಅಷ್ಟೆ

೮ ನಾನು ನಿಜವಾಗಿಯೂ ಯಾವನದ್ದೋ ಪುತ್ರನಾಗಿದ್ದರೆ ನೀನು ಮಂತ್ರಿ ಗೂಳಿ ಅಷ್ಟೆ. ನಿನ್ನ ಈ ಜಾಡ್ಯವೇ ಇದನ್ನು ಹೇಳುತ್ತದೆ. ಆದರೆ ನಿನಗೆ ಎರಡು ಕೊಂಬುಗಳಿಲ್ಲ ಅಷ್ಟೆ'

೯. ಗೋಮುಖನು ಹೀಗೆಂದಾಗ ಈ ಪ್ರಸಂಗದಲ್ಲಿ ಮರುಭೂತಿಯು ನುಡಿದನು. "ಗೋಮುಖನಾದ ನಿನಗೇ ಗೂಳಿತನವು ಒಪ್ಪುತ್ತದೆ.

೧೦. ಆದರೂ ನೀನು ಎತ್ತಲ್ಲವಾಗಿರುವುದು ನಿನ್ನ ಜಾತಿಸಂಕರ (=ಮಿಶ್ರತಳಿಯ ಪ್ರಭಾವ).' ಇದನ್ನು ಕೇಳಿ ಎಲ್ಲರೂ ನಗುತ್ತಿರುವಾಗ ಗೋಮುಖನು ಹೇಳಿದನು.

೧೧. ಈ ಮರುಭೂತಿಯು ಒಂದು ರತ್ನ. ನೂರಾರು ಯತ್ನ ಮಾಡಿದರೂ ಇವನು ವಜ್ರದಂತೆ. ಇವನನ್ನು ಭೇದಿಸಲು ಸಾಧ್ಯವಿಲ್ಲ. ಇವನೊಳಗೆ ಗುಣವನ್ನು ಯಾರು ತುಂಬಿಯಾರು ? (ದಾರವನ್ನು ಪೋಣಿಸಿಯಾರು).

---

ತ್ವಂ ತು ಈ ಶಿಕ್ಷಯಸಿ ಮಾಮಿತ್ಯಕಾತ್ಮಜ ರೇ ವದ ।
ಇತ್ಯುಕ್ತವಂತಂ ತಂ ಭೂಯೋ ಹಸನ್ನಾಹ ಸ್ಮ ಗೋಮುಖಃ ॥ ೬

ಭರ್ತ್ಸಯಂತ್ಯವಿನೀತಂ ಕಿಂ ಸ್ವವಾಚಾ ಪ್ರಭವಿಷ್ಣವಃ ।
ಅವಶ್ಯಂ ತಸ್ಯ ವಕ್ತವ್ಯಂ ತತ್ಪಾರ್ಶ್ವಸ್ಥೈರ್ಯಥೋಚಿತಮ್ ॥ ೭

ಸತ್ಯಂ ಚೇತ್ಯಕಪುತ್ರೋಽಹಂ ತ್ವಂ ಮಂತ್ರಿವೃಷಭಃ ಪುನಃ ।
ವಕ್ತಿ ತೇ ಜಾಡ್ಯಮೇವೈತದ್ವಿಷಾಣೇ ಸ್ತಃ ಪರಂ ನ ತೇ ॥ ೮

ಇತ್ಯುಕ್ತೋ ಗೋಮುಖೇನಾತ್ರ ಮರುಭೂತಿರಭಾಷತ ।
ತವೈವ ವೃಷಭತ್ವಂ ಹಿ ಗೋಮುಖಸ್ಯೋಪಪದ್ಯತೇ ॥ ೯

ತಥಾಪಿ ಯದದಾಂತೋಽಸಿ ಸೋಽಯಂ ತೇ ಜಾತಿಸಂಕರಃ ।
ಏತತ್ಶ್ರುತ್ವಾತ್ರ ಸರ್ವೇಷು ಹಸತ್ಸೂವಾಚ ಗೋಮುಖಃ ॥ ೧೦

ಮರುಭೂತಿರಯಂ ರತ್ನಂ ಜಾತು ಯತ್ನಶತೈರಪಿ ।
ಅವೇಧ್ಯಂ ವಜ್ರಮೇತಸ್ಮಿನ್ ಗುಣಂ ಕೋ ಹಿ ಪ್ರವೇಶಯೇತ್ ॥ ೧೧

೧೨. ಪ್ರಯತ್ನವಿಲ್ಲದೆಯೇ ಭೇದಿಸಬಹುದಾದ ಬೇರೆ ಪುರುಷರತ್ನ ಇದೆ. ಇಲ್ಲಿ ನಿದರ್ಶನವಾಗಿ ಸಿಕತಾಸೇತುವಿನ ಕಥೆಯನ್ನು ಕೇಳು.

೧೩–೧೪. ಪ್ರತಿಷ್ಠಾನದಲ್ಲಿ ತಪೋದತ್ತನೆಂಬೊಬ್ಬ ಬ್ರಾಹ್ಮಣನಿದ್ದನು. ಅವನು ತಂದೆಯು ಎಷ್ಟೇ ಬಲವಂತ ಮಾಡಿದರೂ ಚಿಕ್ಕಂದಿನಲ್ಲಿ ವಿದ್ಯಾಭ್ಯಾಸವನ್ನು ಮಾಡಲಿಲ್ಲ. ಆಮೇಲೆ ಎಲ್ಲರೂ ಅವನನ್ನು ನಿಂದಿಸಲು ಪಶ್ಚಾತ್ತಾಪಗೊಂಡು ಅವನು ವಿದ್ಯೆಯನ್ನು ಸಿದ್ಧಿಸಿಕೊಳ್ಳಲು ತಪಸ್ಸಿಗೆಂದು ಗಂಗಾನದಿಯ ದಡಕ್ಕೆ ಬಂದನು.

೧೫. ಅಲ್ಲಿ ಘೋರ ತಪಸ್ಸನ್ನು ಪ್ರಾರಂಭಿಸಿದ ಅವನನ್ನು ನೋಡಿ ಅಚ್ಚರಿಗೊಂಡ ಇಂದ್ರನು ಅದನ್ನು ತಡೆಯಲು ಬ್ರಾಹ್ಮಣನ ವೇಷದಲ್ಲಿ ಹತ್ತಿರಕ್ಕೆ ಬಂದನು.

೧೬. ಬಂದ ಮೇಲೆ ಆತನು ನೋಡುತ್ತಿರುವಂತೆಯೇ ಗಂಗಾನದಿಯ ದಡದಿಂದ ಮರಳನ್ನು ಎತ್ತಿ ಎತ್ತಿ ಅಲೆಗಳಿಂದ ಕೂಡಿದ್ದ ನೀರಿನಲ್ಲಿ ಹಾಕಿದನು.

೧೭. ಅದನ್ನು ಕಂಡು ಮೌನವನ್ನು ಬಿಟ್ಟ ತಪೋದತ್ತನು "ಎಲೈ ಬ್ರಾಹ್ಮಣನೇ, ಬಿಡುವಿಲ್ಲದಂತೆ ಇದೇನನ್ನು ಮಾಡುತ್ತಿರುವೆ?' ಎಂದು ಕುತೂಹಲದಿಂದ ಕೇಳಿದನು.

೧೮. ಒತ್ತಾಯ ಮಾಡಿದ ಮೇಲೆ ಬ್ರಾಹ್ಮಣ ವೇಷದಲ್ಲಿದ್ದ ಇಂದ್ರನು ನುಡಿದನು. "ಪ್ರಾಣಿಗಳೆಲ್ಲ ದಾಟಲೆಂದು ಗಂಗೆಯ ಮೇಲೆ ಸೇತುವೆಯನ್ನು ಕಟ್ಟುತ್ತಿದ್ದೇನೆ.'

---

ಅನ್ಯತ್ ಪುರುಷರತ್ನಂ ತದ್ಯದಯತ್ನೇನ ವೇಧ್ಯತೇ ।
ಸಿಕತಾಸೇತುವೃತ್ತಾಂತಂ ಶೃಣು ಚಾತ್ರ ನಿದರ್ಶನಮ್ ॥ ೧೨

ಆಸೀತ್ ಕೋಽಪಿ ಪ್ರತಿಷ್ಠಾನೇ ತಪೋದತ್ತ ಇತಿ ದ್ವಿಜಃ ।
ಸ ಪಿತ್ರಾ ಕ್ಲಿಶ್ಯಮಾನೋಽಪಿ ವಿದ್ಯಾ ನಾಧ್ಯೈತ ಶೈಶವೇ ॥ ೧೩

ಅನಂತರಂ ಗರ್ಹ್ಯಮಾಣಃ ಸರ್ವೈರನುಶಯಾನ್ವಿತಃ ।
ಸ ವಿದ್ಯಾಸಿದ್ಧಯೇ ತಪ್ತುಂ ತಪೋ ಗಂಗಾತಟಂ ಯಯೌ ॥ ೧೪

ತತ್ರಾಶ್ರಿತೋಗ್ರತಪಸಸ್ತಸ್ಯ ತಂ ವೀಕ್ಷ್ಯ ವಿಸ್ಮಿತಃ ।
ವಾರಯಿಷ್ಯನ್ ದ್ವಿಜಚ್ಛದ್ಮಾ ಶಕ್ರೋ ನಿಕಟಮಾಯಯೌ ॥ ೧೫

ಆಗತ್ಯ ಚ ಸ ಗಂಗಾಯಾಸ್ತಟಾಚ್ಚಿಕ್ಷೇಪ ವಾರಿಣಿ ।
ಉದ್ಧೃತ್ಯೋದ್ಧೃತ್ಯ ಸಿಕತಾಃ ಪಶ್ಯತಸ್ತಸ್ಯ ಸೋರ್ಮಿಣಿ ॥ ೧೬

ತದ್‌ದೃಷ್ಟ್ವಾ ಮುಕ್ತಮೌನಸ್ತಂ ತಪೋದತ್ತಃ ಸ ಪೃಷ್ಟವಾನ್ ।
ಅಶ್ರಾಂತಃ ಕಿಮಿದಂ ಬ್ರಹ್ಮನ್ ಕರೋಷೀತಿ ಸಕೌತುಕಮ್ ॥ ೧೭

ನಿರ್ಬಂಧಪೃಷ್ಟಃ ಸ ಚ ತಂ ಶಕ್ರೋಽವಾದೀತ್ ದ್ವಿಜಾಕೃತಿಃ ।
ಸೇತುಂ ಬಧ್ನಾಮಿ ಗಂಗಾಯಾಂ ತಾರಾಯ ಪ್ರಾಣಿನಾಮಿತಿ ॥ ೧೮

೧೯. ಅದಕ್ಕೆ ತಪೋದತ್ತನೆಂದನು. "ಎಲವೋ ಮೂರ್ಖ! ಪ್ರವಾಹದಿಂದ ಮರಳಿನಿಂದ ಕೊಚ್ಚಿಹೋಗುವ ಸೇತುವೆಯನ್ನೇನಾದರೂ ಕಟ್ಟಲು ಸಾಧ್ಯವೇ ?'

೨೦-೨೨. ಅದನ್ನು ಕೇಳಿ ಬ್ರಾಹ್ಮಣರೂಪದ ಇಂದ್ರನು ಹೀಗೆ ನುಡಿದನು. "ಹಾಗಾದರೆ ಇಷ್ಟೆಲ್ಲ ತಿಳಿದಿರುವ ನೀನು ಪಾಠ ಓದದೆ ಪಾಠ ಕೇಳದೆ ವ್ರತ ಉಪವಾಸ ಇತ್ಯಾದಿಗಳಿಂದ ವಿದ್ಯೆ ಪಡೆಯಲು ಹೇಗೆ ತೊಡಗಿದ್ದೀಯೆ ! ಅಧ್ಯಯನ ಮಾಡದೆಯೇ ವಿದ್ಯೆ ಕಲಿಯುವುದು ಎಂಬುದು ಇಲ್ಲದ ಮೊಲದ ಕೊಂಬನ್ನು ಪಡೆಯಬೇಕೆಂಬ ಹಂಬಲದಂತೆ ಅಥವಾ ಆಕಾಶದಲ್ಲಿ ಚಿತ್ರ ಬರೆಯುವಂತೆ ಅಥವಾ ಅಕ್ಷರವೇ ಇಲ್ಲದ ಲಿಪಿ ಬರಹದಂತೆ. ಹೀಗೆ ನಡೆಯುವಂತಿದ್ದರೆ ಯಾರೂ ಓದುತ್ತಲೇ ಇರಲಿಲ್ಲ.'

೨೩. ದ್ವಿಜರೂಪದ ಇಂದ್ರನು ಇಂತೆಂದಮೇಲೆ ವಿಚಾರ ಮಾಡಿ ಅದು ಸರಿಯೆಂದು ತಿಳಿದು ತಪೋದತ್ತನು ತಪಸ್ಸನ್ನು ತ್ಯಜಿಸಿ ಮನೆಗೆ ಹಿಂತಿರುಗಿದನು.

೨೪. ಹೀಗೆ ಜಾಣನಿಗೆ ಹೇಳುವುದು ಸುಲಭ. ಮರುಭೂತಿಯೋ ಬುದ್ಧಿಯಿಲ್ಲದವನು. ಅವನಿಗೆ ಉಪದೇಶಿಸುವುದು ಸಾಧ್ಯವಿಲ್ಲ. ಉಪದೇಶಿಸಿದರೂ ಕೋಪಿಸಿಕೊಳ್ಳುತ್ತಾನೆ

೨೫. ಎಂದು ಗೋಮುಖನೆನ್ನಲು ಈ ಮಧ್ಯೆ ಹರಿಶಿಖನು ಹೇಳಿದನು. "ಪ್ರಭುವೇ, ನಿಜಕ್ಕೂ ಸುಬುದ್ಧಿಯವರಿಗೆ ತಿಳುವಳಿಕೆ ಹೇಳುವುದು ಸುಲಭ

---

ತತೋಽಬ್ರವೀತ್ತಪೋದತ್ತಃ ಸೇತುಃ ಕಿಂ ಮೂರ್ಖ ಬಧ್ಯತೇ ।
ಗಂಗಾಯಾಮೋಘಹಾರ್ಯಾಭಿಃ ಸಿಕತಾಭಿಃ ಕದಾಚನ ॥ ೧೯

ತಚ್ಛ್ರುತ್ವಾ ತಮುವಾಚೈವಂ ಶಕ್ರೋಽಥ ದ್ವಿಜರೂಪಧೃಕ್ ।
ಯದ್ಯೇವಂ ವೇತ್ಸಿ ತದ್ವಿದ್ಯಾಂ ವಿನಾ ಪಾಠಂ ವಿನಾ ಶ್ರುತಮ್ ॥ ೨೦

ಕಸ್ಮಾತ್ ವ್ರತೋಪವಾಸಾದ್ಯೈಸ್ತ್ವಂ ಸಾಧಯಿತುಮುದ್ಯತಃ ।
ಇಯಂ ಶಶವಿಷಾಣೇಚ್ಛಾ ವ್ಯೋಮ್ನಿ ವಾ ಚಿತ್ರಕಲ್ಪನಾ ॥ ೨೧

ಅನಕ್ಷರೋ ಲಿಪಿನ್ಯಾಸೋ ಯದ್ವಿದ್ಯಾಧ್ಯಯನಂ ವಿನಾ ।
ಏವಂ ಯದಿ ಭವೇದೇತತ್ ನಹ್ಯಧೀಯೀತ ಕಶ್ಚನ ॥ ೨೨

ಇತ್ಯುಕ್ತಃ ಸ ತಪೋದತ್ತಃ ಶಕ್ರೇಣ ದ್ವಿಜರೂಪಿಣಾ ।
ವಿಚಾರ್ಯ ತತ್ತಥಾ ಮತ್ವಾ ತಪಸ್ತ್ಯಕ್ತ್ವಾ ಗೃಹಂ ಯಯೌ ॥ ೨೩

ಏವಂ ಸುಧೀಃ ಸುಖಂ ಬೋಧ್ಯೋ ಮರುಭೂತಿಸ್ತು ದುರ್ಮತಿಃ ।
ನ ಶಕ್ಯತೇ ಬೋಧಯಿತುಂ ಬೋಧ್ಯಮಾನಶ್ಚ ಕುಪ್ಯತಿ ॥ ೨೪

ಇತ್ಯುಕ್ತೇ ಗೋಮುಖೇನಾತ್ರ ಮಧ್ಯೇ ಹರಿಶಿಖೋಽಭ್ಯಧಾತ್ ।
ಭವಂತಿ ಸುಖಸಂಬೋಧ್ಯಾಃ ಸತ್ಯಂ ದೇವ ಸುಮೇಧಸಃ ॥ ೨೫

೨೬. ಅಂತೆಯೇ, ಹಿಂದೆ ವಾರಾಣಸಿಯಲ್ಲಿ ವಿರೂಪಶರ್ಮನೆಂಬ ಕುರೂಪಿಯೂ ಬಡವನೂ ಆದ ಬ್ರಾಹ್ಮಣೋತ್ತಮನಿದ್ದನು.

೨೭. ಕುರೂಪ ಮತ್ತು ಬಡತನಗಳಿಂದ ಬೇಸತ್ತಿದ್ದ ಅವನು ರೂಪ ಮತ್ತು ಐಶ್ವರ್ಯವನ್ನು ಬಯಸಿ ತಪೋವನಕ್ಕೆ ಹೋಗಿ ತೀವ್ರವಾದ ತಪಸ್ಸನ್ನು ಮಾಡಿದನು.

೨೮. ಆಗ ಇಂದ್ರನು ವಿಕಾರವಾಗಿ ರೋಗದಿಂದ ಬಳಲುತ್ತಿದ್ದ ಕೊಳಕು ನರಿಯ ಅಸಹ್ಯ ರೂಪವನ್ನು ಮಾಡಿಕೊಂಡು ಅವನ ಮುಂದೆ ಬಂದು ನಿಂತುಕೊಂಡನು.

೨೯. ಅಂಗಾಗಗಳನ್ನೆಲ್ಲ ನೊಣಗಳು ಸುತ್ತುವರೆದಿದ್ದು ವಿಲಕ್ಷಣವಾಗಿದ್ದ ಅದನ್ನು ನೋಡಿ ವಿರೂಪಶರ್ಮನು ಮನಸ್ಸಿನಲ್ಲಿಯೇ ಮೆಲ್ಲಗೆ ವಿಚಾರಮಾಡಿದನು.

೩೦. ಪ್ರಪಂಚದಲ್ಲಿ ತಮ್ಮ ಪೂರ್ವಜನ್ಮದ ಕರ್ಮಗಳಿಂದಾಗಿ ಇಂಥವೂ ಹುಟ್ಟುತ್ತವೆ. ಹೀಗಿರುವಾಗ ದೇವರು ನನಗೆ ನೀಡಿದ ವಿಕಾರವು ಅಲ್ಪಪ್ರಮಾಣದ್ದು. ಇಷ್ಟೊಂದು ವಿಕಾರವನ್ನು ಅವನು ಉಂಟುಮಾಡಲಿಲ್ಲವಲ್ಲ.

೩೧. ವಿಧಿಲಿಖಿತವಾದದ್ದನ್ನು ಅನುಭವಿಸದೇ ಮೀರಲು ಯಾರಿಗಾದರೂ ಸಾಧ್ಯವೇ ? ಎಂದು ಚಿಂತಿಸಿದ ಆ ವಿರೂಪಶರ್ಮನು ನಿಧಾನವಾಗಿ ತಪೋವನವನ್ನು ಬಿಟ್ಟು ಮನೆಗೆ ಹೋದನು.

---

ತಥಾ ಚ ಪೂರ್ವಮಭವದ್ವಾರಾಣಸ್ಯಾಂ ದ್ವಿಜೋತ್ತಮಃ ।
ಕಶ್ಚಿದ್ವಿರೂಪಶರ್ಮಾಖ್ಯೋ ವಿರೂಪೋ ನಿರ್ಧನಸ್ತಥಾ ॥ ೨೬

ಸ ಚ ವೈರೂಪ್ಯದೌರ್ಗತ್ಯನಿರ್ವಿಣ್ಣಸ್ತತ್ತಪೋವನಮ್ ।
ಗತ್ವಾ ತೀವ್ರಂ ತಪಶ್ಚಕ್ರೇ ರೂಪದ್ರವಿಣಕಾಂಕ್ಷಯಾ ॥ ೨೭

ತತಃ ಸುರಪತಿಃ ಕೃತ್ವಾ ವಿಕೃತವ್ಯಾಧಿತಾಕೃತೇಃ ।
ಜಂಬುಕಸ್ಯಾಧಮಂ ರೂಪಮೇತ್ಯಾಗ್ರೇ ತಸ್ಯ ತಸ್ಥಿವಾನ್ ॥ ೨೮

ತಂ ವಿಲೋಕ್ಯ ಪರೀತಾಂಗಮಕ್ಷಿಕಾಭಿರಲಕ್ಷಣಮ್ ।
ವಿರೂಪಶರ್ಮಾ ಶನಕೈರ್ಮನಸಾ ವಿಮಮರ್ಶ ಸಃ ॥ ೨೯

ಈದೃಶಾ ಅಪಿ ಜಾಯಂತೇ ಸಂಸಾರೇ ಪೂರ್ವಕರ್ಮಭಿಃ ।
ತನ್ಮಮಾಲ್ಪಮಿದಂ ಧಾತ್ರಾ ಕೃತಂ ಯನ್ನೇದೃಶಃ ಕೃತಃ ॥ ೩೦

ಕೋ ದೈವ ಲಿಖಿತಂ ಭೋಗಂ ಲಂಘಯೇದಿತ್ಯವೇತ್ಯ ಸಃ ।
ವಿರೂಪಶರ್ಮಾ ಶನಕೈಸ್ತಪಃ ಸ್ಥಾನಾದ್ಯಯೌ ಗೃಹಮ್ ॥ ೩೧

೩೨. ಈ ರೀತಿಯಾಗಿ ಸುಬುದ್ಧಿಯುಳ್ಳವನಿಗೆ ಅಲ್ಪ ಪ್ರಯತ್ನದಿಂದಲೇ ತಿಳಿಹೇಳಬಹುದು. ಆದರೆ ಪ್ರಭುವೇ, ವಿಚಾರಮಾಡುವ ಶಕ್ತಿಯಿಲ್ಲದವನಿಗೆ ಎಷ್ಟು ಕಷ್ಟಪಟ್ಟರೂ ಸಾಧ್ಯವಿಲ್ಲ.

೩೩. ಎಂದು ಹರಿಶಿಖನು ಹೇಳಿದ್ದನ್ನು ಗೋಮುಖನು ಒಪ್ಪಿದನು. ಆದರೆ ಮೈಮೇಲೆ ಜ್ಞಾನವಿಲ್ಲದ ತುಂಬ ಮತ್ತನಾದ ಮರುಭೂತಿಯೋ ಕುಪಿತನಾದನು.

೩೪. ಗೋಮುಖನೇ, ನಿನ್ನಂತಹವರ ಪರಾಕ್ರಮವು ಮಾತಿನಲ್ಲಿ ಅಷ್ಟೇ. ತೋಳುಗಳ ವಿಷಯದಲ್ಲಿ ಅಲ್ಲ. ಶಕ್ತಿವಂತರಿಗೆ ಮಾತಿನ ಮಲ್ಲರು ಮತ್ತು ನಪುಂಸಕರೊಡನೆ ಜಗಳವು ನಾಚಿಕೆತರುವಂತಹುದು.

೩೫. ಹೀಗೆ ಹೇಳುತ್ತಿದ್ದ ಕದನಕುತೂಹಲಿಯಾಗಿದ್ದ ಮರುಭೂತಿಯನ್ನು ಪ್ರಭುವಾದ ನರವಾಹನದತ್ತನು ಮುಗುಳ್ನಕ್ಕು ತಾನೇ ಸಮಾಧಾನಗೊಳಿಸಿದನು.

೩೬. ಬಾಲ್ಯಮಿತ್ರರು ಬಗ್ಗೆ ವಾತ್ಸಲ್ಯವುಳ್ಳ ರಾಜನು ಅವರನ್ನು ಮನೆಗೆ ಕಳಿಸಿ, ಇತರ ಕೆಲಸಗಳನ್ನು ಮಾಡುತ್ತಾ ಅಂದಿನ ಹಗಲನ್ನು ಸುಖವಾಗಿ ಕಳೆದನು.

೩೭. ಬೆಳಗ್ಗೆ ಎಲ್ಲ ಮಂತ್ರಿಗಳೂ ಬಂದಿದ್ದಾಗ, ಮರುಭೂತಿಯು ನಾಚಿಕೆಯಿಂದ ತಲೆ ತಗ್ಗಿಸಿಕೊಂಡಿರಲು ರಾಜನ ಪ್ರಿಯತಮೆಯಾದ ರತ್ನಪ್ರಭೆಯು ಹೀಗೆ ಹೇಳಿದಳು:

---

ಇತ್ಥಂ ಸುಬುದ್ಧಿರಲ್ಪೇನ ದೇವ ಯತ್ನೇನ ಬೋಧ್ಯತೇ ।
ನ ಕೃಚ್ಛ್ರೇಣಾಪಿ ಮಹತಾ ನಿರ್ವಿಚಾರಮತಿಃ ಪುನಃ ॥ ೩೨

ಏವಂ ಹರಿಶಿಖೇನೋಕ್ತೇ ಶ್ರದ್ಧಧಾನೇ ಚ ಗೋಮುಖೇ ।
ಮರುಭೂತಿರನಾತ್ಮಜ್ಞಃ ಕ್ಷೀಬೋಽತಿಕುಪಿತೋಽಭವತ್ ॥ ೩೩

ಬಲಂ ಗೋಮುಖ ವಾಚ್ಯೇವ ನ ತು ಬಾಹ್ವೋರ್ಭವಾದೃಶಾಮ್ ।
ವಾಚಾಲೈಃ ಕಲಹಃ ಕ್ಲೀಬೈಸ್ತ್ರಪಾಕೃದ್ಬಾಹುಶಾಲಿನಾಮ್ ॥ ೩೪

ಇತಿ ಬ್ರುವಾಣಂ ಯುದ್ಧೇಚ್ಛುಂ ಮರುಭೂತಿಂ ಸ್ಮಿತಾನನಃ ।
ನರವಾಹನದತ್ತೋಽಥ ಪ್ರಭುಃ ಸ್ವಯಮಸಾಂತ್ವಯತ್ ॥ ೩೫

ವಿಸೃಜ್ಯ ತಂ ಚ ಸ್ವಗೃಹಂ ತಂ ಬಾಲಸಖಿವತ್ಸಲಃ ।
ಕುರ್ವನ್ದಿವಸಕಾರ್ಯಾಣಿ ನಿನಾಯ ತದಹಃ ಸುಖಮ್ ॥ ೩೬

ಪ್ರಾತಶ್ಚ ಸರ್ವೇಷ್ವಾಯಾತೇಷ್ವೇಷು ಮಂತ್ರಿಷು ತಂ ಪ್ರಿಯಾ ।
ರತ್ನಪ್ರಭಾ ಜಗಾದೈವಂ ಮರುಭೂತೌ ತ್ರಪಾನತೇ ॥ ೩೭

೩೮. "ಆರ್ಯಪುತ್ರನೇ, ನೀನೇ ಪುಣ್ಯವಂತನು. ಏಕೆಂದರೆ ನಿನ್ನ ಈ ಮಂತ್ರಿಗಳು ಬಾಲ್ಯದಿಂದಲೂ ಸ್ನೇಹ ಸಂಕೋಲೆಯಿಂದ ಬದ್ಧರಾಗಿ ಶುದ್ಧಮನಸ್ಸಿನವರಾಗಿದ್ದಾರೆ.

೩೯. ಇಂತಹ ಸ್ನೇಹಪರನಾದ ಒಡೆಯನನ್ನು ಪಡೆದ ಇವರೂ ಧನ್ಯರೇ. ಪೂರ್ವಜನ್ಮದ ಸುಕೃತದ ಫಲವಾಗಿ ನೀವು ಪರಸ್ಪರರನ್ನು ಪಡೆದಿದ್ದೀರೆಂಬುದರ ಬಗ್ಗೆ ಸಂಶಯವೇ ಇಲ್ಲ.'

೪೦. ರಾಣಿಯು ಹೀಗೆ ಹೇಳಲು ನರವಾಹನದತ್ತನ ಪ್ರೀತಿವ್ಯವಹಾರದ ಗೆಳೆಯನೂ ವಸಂತಕನ ಮಗನೂ ಆದ ತಪಂತಕನು ನುಡಿದನು:

೪೧. "ನಿಜ. ನಮ್ಮ ಈ ಪ್ರಭುವು ಪೂರ್ವಾರ್ಜಿತ (ಪುಣ್ಯದಿಂದಲೇ ದೊರಕಿದ್ದಾನೆ). ಎಲ್ಲವೂ ಇರುವುದು ಪೂರ್ವಕರ್ಮದ ವಶದಿಂದಲೇ. ಇದರ ಬಗ್ಗೆ ಈ ಕಥೆಯನ್ನು ಕೇಳಿ.

೪೨. ಶಿವನ ಆವಾಸಸ್ಥಾನವಾದ ವಿಲಾಸಪುರವೆಂಬ ಪಟ್ಟಣದಲ್ಲಿ ಹಿಂದೆ ವಿನಯಶೀಲನೆಂಬ ಸಾರ್ಥಕವಾದ ಹೆಸರುಳ್ಳ ರಾಜನು ಇದ್ದನು.

೪೩. ಅವನಿಗೆ ಅವನ ಪ್ರಾಣಕ್ಕೆ ಸಮಳಾದ ಕಮಲಪ್ರಭೆಯೆಂಬ ರಾಣಿಯಿದ್ದಳು. ಅವನು ಅವಳೊಂದಿಗೆ ಬಹಳ ಕಾಲ ಕೇವಲ ಭೋಗಾಸಕ್ತನಾಗಿ ಇದ್ದನು.

---

ತ್ವಮಾರ್ಯಪುತ್ರ ಸುಕೃತೀ ಯಸ್ಯ ತೇ ಸಚಿವಾ ಇಮೇ ।
ಆಬಾಲ್ಯಸ್ನೇಹನಿಗಡನಿಬದ್ಧಾಃ ಶುದ್ಧಚೇತಸಃ ॥ ೩೮

ಏತೇ ಚ ಧನ್ಯಾ ಯೇಷಾಂ ತ್ವಮೀದೃಕ್ ಸ್ನೇಹಪರಃ ಪ್ರಭುಃ ।
ಪ್ರಾಕ್ಕರ್ಮೋಪಾರ್ಜಿತಾ ಯೂಯಮನ್ಯೋನ್ಯಸ್ಯ ನ ಸಂಶಯಃ ॥ ೩೯

ಏವಮುಕ್ತೇ ತಯಾ ರಾಜ್ಞ್ಯಾ ವಸಂತಕಸುತೋಽಬ್ರವೀತ್ ।
ನರವಾಹನದತ್ತಸ್ಯ ನರ್ಮಮಿತ್ರಂ ತಪಂತಕಃ ॥ ೪೦

ಸತ್ಯಂ ಪೂರ್ವಾರ್ಜಿತೋಽಯಂ ನಃ ಸ್ವಾಮೀ ಸರ್ವಂ ಹಿ ತಿಷ್ಠತಿ ।
ಪೂರ್ವಕರ್ಮವಶಾದೇವ ತಥಾ ಚ ಶ್ರೂಯತಾಂ ಕಥಾ ॥ ೪೧

ಅಭೂತ ಶ್ರೀಕಂಠನಿಲಯೇ ವಿಲಾಸಪುರನಾಮನಿ ।
ಪುರೇ ವಿನಯಶೀಲಾಖ್ಯೋ ನಾಮ್ನಾನ್ವರ್ಥೇನ ಭೂಪತಿಃ ॥ ೪೨

ತಸ್ಯ ಪ್ರಾಣಸಮಾ ದೇವೀ ಬಭೂವ ಕಮಲಪ್ರಭಾ ।
ತಯಾ ಸಾಕಂ ಚ ಭೋಗೈಕಸಕ್ತಸ್ತಸ್ಥೌ ಚಿರಾಯ ಸಃ ॥ ೪೩

೪೪. ಕಾಲಕ್ರಮದಲ್ಲಿ ಆ ರಾಜನಿಗೆ ಸೌಂದರ್ಯವನ್ನು ನಾಶಗೊಳಿಸುವ ವೃದ್ಧಾಪ್ಯವು ಉಂಟಾಯಿತು. ಅದನ್ನು ನೋಡಿ ಅವನು ಬಹಳ ದುಃಖಿತನಾದನು.

೪೫. ಹಿಮದ ಹೊಡೆತಕ್ಕೆ ಸಿಲುಕಿದ ಕಮಲದಂತೆ ಬಿಳಿಚಿಕೊಂಡು ಬಾಡಿದ (ನನ್ನ ಈ) ಮುಖವನ್ನು ರಾಣಿಗೆ ಹೇಗೆ ತೋರಿಸಲಿ ? ಅಯ್ಯೋ, ನನಗೆ ಸಾಯುವುದೇ ಮೇಲು.

೪೬. ಮುಂತಾಗಿ ಚಿಂತಿಸುತ್ತಾ ಆ ರಾಜನು ಸಭೆಗೆ ತರುಣಚಂದ್ರನೆಂಬ ವೈದ್ಯನನ್ನು ಕರೆಸಿ ಆದರಿಸಿ ಹೇಳಿದನು:

೪೭. "ಭದ್ರನೇ, ನೀನು ನಮ್ಮ ಭಕ್ತ ಮತ್ತು ಬುದ್ಧಿವಂತ ಎಂದು ಕೇಳಿದ್ದೇನೆ. ಈ ವೃದ್ಧಾಪ್ಯವನ್ನು ನಿವಾರಣೆ ಮಾಡಲು ಏನಾದರೂ ಯುಕ್ತಿಯು ಇದೆಯೇ (ಹೇಳು).'

೪೮. ಅದನ್ನು ಕೇಳುತ್ತಲೇ ಒಳಗಡೆ ವಕ್ರನಾಗಿದ್ದು ಅನ್ವರ್ಥನಾದ ಹೆಸರಿನ ತರುಣಚಂದ್ರನು ಕೇವಲ ಒಂದು ಕಲೆಯಷ್ಟಿದ್ದವನು ಪೂರ್ಣ ಚಂದ್ರನಾಗಲು ಬಯಸಿ ಆಲೋಚಿಸಿದನು.

೪೯. "ಈ ರಾಜನು ಮೂರ್ಖ. ಇವನಿಗೆ ನಾನು ಕ್ರಮವಾಗಿ (ಔಷಧ) ತಿನ್ನಿಸಬೇಕು' ಎಂದು ಯೋಚಿಸಿ ಆ ವೈದ್ಯನು ರಾಜನಿಗೆ ಹೀಗೆ ಹೇಳಿದನು.

೫೦. "ಎಲೈ ರಾಜನೇ, ಎಂಟು ತಿಂಗಳವರೆಗೆ ಒಂಟಿಯಾಗಿ ನೆಲಮಾಳಿಗೆಯಲ್ಲಿದ್ದು ಈ ಔಷಧವನ್ನು ಸ್ವೀಕರಿಸಿದರೆ ಆಗ ನಿನ್ನ ಮುದಿತನವು ಹೋಗುತ್ತದೆ.'

---

ಅಥ ಕಾಲೇನ ಭೂಪಸ್ಯ ಜರಾ ಸೌಂದರ್ಯಹಾರಿಣೀ ।
ತಸ್ಯಾವಿರಾಸೀತ್ತಾಂ ದೃಷ್ಟ್ವಾ ಸ ಚಾಸೀದತಿದುಃಖಿತಃ ॥ ೪೪

ಹಿಮಾಹತಮಿವಾಂಭೋಜಂ ಪಲಿತಮ್ಲಾನಮಾನನಮ್ ।
ದರ್ಶಯಾಮಿ ಕಥಂ ದೇವ್ಯೈ ಹಾ ಧಿಙ್ಮೇ ಮರಣಂ ವರಮ್ ॥ ೪೫

ಇತ್ಯಾದಿ ಚಿಂತಯನ್ ಸೋಽಥ ಸದಸ್ಯಾಹೂಯ ಭೂಪತಿಃ ।
ವೈದ್ಯಂ ತರುಣಚಂದ್ರಾಖ್ಯಂ ನಿಜಗಾದ ಕೃತಾದರಃ ॥ ೪೬

ಭದ್ರ ಭಕ್ತಸ್ತ್ವಮಸ್ಮಾಸು ಕುಶಲಶ್ಚೇತಿ ಪೃಚ್ಛ್ಯಸೇ ।
ಅಪ್ಯಸ್ತಿ ಕಾಚಿದ್ಯುಕ್ತಿಃ ಸಾ ಯಯೇಯಂ ವಾರ್ಯತೇ ಜರಾ ॥ ೪೭

ತಚ್ಛ್ರುತ್ವೈವ ಕಲಾಮಾತ್ರಸಾರೋ ವಾಂಛನ್ ಸ ಪೂರ್ಣತಾಮ್ ।
ವಕ್ರಸ್ತರುಣಚಂದ್ರೋಽಂತಃ ಸತ್ಯನಾಮಾ ವ್ಯಚಿಂತಯತ್ ॥ ೪೮

ಮೂರ್ಖೋಽಯಂ ನೃಪತಿರ್ಭೋಜ್ಯೋ ಮಯಾ ವೇತ್ಸ್ಯಾಮಿ ಚ ಕ್ರಮಾತ್ ।
ಇತಿ ಸಂಚಿಂತ್ಯ ಸ ಭಿಷಕ್ ತಮೇವಮವದನ್ನೃಪಮ್ ॥ ೪೯

ಏಕಸ್ತ್ವಂ ಭೂಗೃಹೇ ಮಾಸಾನಷ್ಟೌ ಯದಿದಮೌಷಧಮ್ ।
ಉಪಯುಂಕ್ಷೇ ತತೋ ದೇವ ಜರಾಮಪನಯಾಮಿ ತೇ ॥ ೫೦

೫೧. ಇದನ್ನು ಕೇಳಿದ ಕೂಡಲೇ ಆ ರಾಜನು ಭೂಮಿಗೃಹವೊಂದನ್ನು ನಿರ್ಮಾಣ ಮಾಡಿಸಿದನು. ಇಂದ್ರಿಯಲೋಲುಪರಾದ ಮೂರ್ಖರು ವಿಚಾರವನ್ನು (ಮಾಡಲು) ಸಮರ್ಥರಲ್ಲವಷ್ಟೆ!

೫೨–೫೩. "ರಾಜನೇ, ಸತ್ತ್ವದಿಂದಲೂ ಹಿಂದಿನವರ ತಪಸ್ಸು ಹಾಗೂ ಮನೋನಿಗ್ರಹ ಗಳಿಂದಲೂ ರಸಾಯನಗಳು ಸಿದ್ಧಗೊಳಿಸಲ್ಪಟ್ಟವೆ. ರಾಜನೇ, ಕಾಲದ ಪ್ರಭಾವದಿಂದ ಇವು ಇಂದೂ ಕೇಳಿಬಂದರೂ (ಶುದ್ಧ) ಸಾಮಗ್ರಿಗಳ ಅಭಾವದಿಂದ ವಿರುದ್ಧವಾದ ಪರಿಣಾಮವನ್ನು ಬೀರುತ್ತವೆ.

೫೪. ಆದ್ದರಿಂದ ಇದು ಸರಿಯಲ್ಲ. ಧೂರ್ತರು ಮಕ್ಕಳಂತಹವರೊಂದಿಗೆ ಆಟವಾಡುತ್ತಾರೆ, ಒಡೆಯನೇ, ಕಳೆದು ಹೋದ ಆಯುಷ್ಯವೆಂದಾದರೂ ತಿರುಗಿ ಬರುವುದುಂಟೇ.'

೫೫. ಮುಂತಾಗಿ ಮಂತ್ರಿಗಳು ಹೇಳಿದ ಮಾತು ಗಾಢವಾದ ಭೋಗ ಲಾಲಸೆಯಿಂದ ಮುಚ್ಚಿ ಹೋಗಿದ್ದ ಅವನ ಹೃದಯವನ್ನು ಪ್ರವೇಶಿಸಲೇ ಇಲ್ಲ.

೫೬. ಆ ವೈದ್ಯನ ಮಾತಿನಂತೆ ಅವನು ರಾಜ ಪರಿವಾರವನ್ನೆಲ್ಲ ತಡೆದು ಒಂಟಿಯಾಗಿ ಭೂಗೃಹವನ್ನು ಪ್ರವೇಶಿಸಿದನು.

೫೭. ವೈದ್ಯನು ತನ್ನ ಒಬ್ಬನೇ ಸೇವಕನ ಜೊತೆಗೆ ಒಬ್ಬನೇ ಅಲ್ಲಿ ಔಷಧಿ ನೀಡುವುದು ಮುಂತಾದ ಸೇವೆಯನ್ನು ಮಾಡುವ ಪರಿಚಾರಕನಾದನು.

---

ಏತತ್ಶ್ರುತ್ವೈವ ಸ ನೃಪಸ್ತದ್ಭೂಗೃಹಮಕಾರಯತ್ ।
ಕ್ಷಮಂತೇ ನ ವಿಚಾರಂ ಹಿ ಮೂರ್ಖಾ ವಿಷಯಲೋಲುಪಾಃ ॥ ೫೧

ರಾಜನ್ ಸತ್ತ್ವೇನ ಪೂರ್ವೇಷಾಂ ತಪಸಾ ಚ ದಮೇನ ಚ ।
ರಸಾಯನಾನಿ ಸಿದ್ಧಾನಿ ಪ್ರಭಾವೇಣ ಯುಗಸ್ಯ ಚ ॥ ೫೨

ಅದ್ಯತ್ವೇ ಚ ಶ್ರುತಾನ್ಯೇವ ರಸಾನ್ಯೇತಾನಿ ಭೂಪತೇ ।
ಸಾಮಗ್ರ್ಯಭಾವಾತ್ ಕುರ್ವಂತಿ ಯತ್ ಪ್ರತ್ಯುತ ವಿಪರ್ಯಯಮ್ ॥ ೫೩

ತನ್ನ ಯುಕ್ತಮಿದಂ ಧೂರ್ತಾಃ ಕ್ರೀಡಂತ್ಯೇವ ಹಿ ಬಾಲಿಶೈಃ ।
ಕಿಂ ದೇವ ಸಮತಿಕ್ರಾಂತಮಾಗಚ್ಛತಿ ಪುನರ್ವಯಃ ॥ ೫೪

ಇತ್ಯಾದಿ ಮಂತ್ರಿಣಾಂ ವಾಕ್ಯಂ ನ ಲೇಭೇ ತಸ್ಯ ಚಾಂತರಮ್ ।
ಆವೃತ್ತೇ ಹೃದಯೇ ರಾಜ್ಞೋ ಗಾಢಯಾ ಭೋಗತೃಷ್ಣಯಾ ॥ ೫೫

ವಿವೇಶ ಚ ಗಿರಾ ತಸ್ಯ ಭಿಷಜಸ್ತತ್ಸ ಭೂಗೃಹಮ್ ।
ಏಕಾಕೀ ವಾರಿತಾಶೇಷರಾಜೋಚಿತಪರಿಚ್ಛದಃ ॥ ೫೬

ಏಕೋ ವೈದ್ಯಃ ಸ್ವಭೃತ್ಯೇನ ಸಹೈಕೇನೈವ ತಸ್ಯ ಸಃ ।
ತತ್ರೌಷಧಾದಿಚರ್ಯಾಯಾಂ ಬಭೂವ ಪರಿಚಾರಕಃ ॥ ೫೭

೫೮. ಬಹಳ ಹೆಚ್ಚಾಗಿದ್ದ ಅಜ್ಞಾನವು ಹೃದಯದಿಂದ ಹೊರಗೆಬಂದು ಪ್ರಸರಿಸಿ ಕೊಂಡಿದೆಯೋ ಎಂಬಂತಿದ್ದ ಕತ್ತಲೆಯು ತುಂಬಿಕೊಂಡಿದ್ದ ಆ ಭೂಗೃಹದಲ್ಲಿ ರಾಜನು ತಂಗಿದನು.

೫೯–೬೦. ಹೀಗೆ ಆತನು ಆರು ತಿಂಗಳ ಕಾಲವನ್ನು ಕಳೆಯಲಾಗಿ ರಾಜನ ಮುದಿತನವು ಇನ್ನೂ ಹೆಚ್ಚಿರುವುದನ್ನು ನೋಡಿ ವಂಚಕನಾದ ಆ ವೈದ್ಯನು ರಾಜನನ್ನು ಹೋಲುವ ಯುವಕನನ್ನು "ನಿನ್ನನ್ನು ರಾಜನನ್ನಾಗಿ ಮಾಡುತ್ತೇನೆ' ಎಂದು ಸಂಚು ಮಾಡಿ ಕರೆತಂದನು.

೬೧. ಆಮೇಲೆ ಭೂಗೃಹದಲ್ಲಿ ದೂರದಿಂದಲೇ ಸುರಂಗವನ್ನು ತೋಡಿಸಿ ಮಲಗಿದ್ದ ರಾಜನನ್ನು ಅಲ್ಲಿಯೇ ಕೊಂದು ಶವವನ್ನು ಅಲ್ಲಿಂದ ಸಾಗಿಸಿ, ರಾತ್ರಿಯಲ್ಲಿ ಪಾಳು ಬಾವಿಯೊಂದರಲ್ಲಿ ಎಸೆದನು.

೬೨. ಆ ಸುರಂಗದ ಮೂಲಕವೇ ಯುವಕನನ್ನು ನೆಲಮಾಳಿಗೆ ಪ್ರವೇಶ ಮಾಡಿಸಿ ಅಲ್ಲಿಯೇ ಇಟ್ಟು ಸುರಂಗವನ್ನು ಮುಚ್ಚಿಬಿಟ್ಟನು.

೬೩. ಮೂಢ ಬುದ್ಧಿಯವರ ಬಳಿ ಅಡೆತಡೆಯಿಲ್ಲದ ಪ್ರವೇಶವನ್ನು ಪಡೆದ ಸ್ವತಂತ್ರ ಪ್ರವೃತ್ತಿಯ ದುಷ್ಟನು ಯಾವ ಸಾಹಸವನ್ನು ತಾನೇ ಮಾಡಲಾರ ?

೬೪. ಅನಂತರ ಆ ವೈದ್ಯನು ಒಂದು ದಿನ ಎಲ್ಲ ಪ್ರಜೆಗಳಿಗೂ ಹೇಳಿದನು: "ಆರು ತಿಂಗಳುಗಳಲ್ಲಿ ಈ ರಾಜನನ್ನು ನಾನು ಮುಪ್ಪೇ ಇಲ್ಲದವನನ್ನಾಗಿ ಮಾಡಿದ್ದೇನೆ.

---

ತಸ್ಥೌ ಚ ತತ್ರ ಸ ನೃಪೋ ಭೂಮಿಗರ್ಭೇ ತಮೋಮಯೇ ।
ಅಜ್ಞಾನ ಇವ ಭೂಯಸ್ತ್ವಾತ್ ಪ್ರಸೃತೇ ಹೃದಯಾದ್ಬಹಿಃ ॥ ೫೮
ಗತೇಷು ಚಾತ್ರ ಮಾಸೇಷು ಷಣ್ಮಾತ್ರೇಷ್ವಸ್ಯ ಭೂಪತೇಃ ।
ವಿಲೋಕ್ಯಾಭ್ಯಧಿಕೀಭೂತಾಂ ತಾಂ ಜರಾಂ ಸ ಶಠೋ ಭಿಷಕ್ ॥ ೫೯
ಆಜಹಾರ ಕಮಪ್ಯೇಕಂ ಪುರುಷಂ ತಾದೃಶಾಕೃತಿಮ್ ।
ರಾಜಾನಂ ತ್ವಾಂ ಕರೋಮೀತಿ ಯುವಾನಂ ಕೃತಸಂವಿದಮ್ ॥ ೬೦
ತತಃ ಸುರಂಗಾಂ ಭೂಗೇಹೇ ದೂರಾದ್ದತ್ವಾತ್ರ ತಂ ನೃಪಮ್ ।
ಸುಪ್ತಂ ಹತ್ವಾ ತಯಾನೀತ್ವಾ ಸೋಽಂಧಕೂಪೇಽಕ್ಷಿಪನ್ನಿಶಿ ॥ ೬೧
ತಯೈವ ಪುರುಷಂ ತಂ ಚ ತರುಣಂ ತತ್ರ ಭೂಗೃಹೇ ।
ಪ್ರವೇಶ್ಯ ಸ್ಥಾಪಯಾಮಾಸ ಸುರಂಗಾಂ ಪಿದಧೇ ಚ ತಾಮ್ ॥ ೬೨
ಸಂಪ್ರಾಪ್ಯ ಮೂಢಬುದ್ಧೀನಾಮವಕಾಶಂ ನಿರ್ಗಲಮ್ ।
ಉಚ್ಛೃಂಖಲಮತಿಃ ಕುರ್ಯಾತ್ ಪ್ರಾಕೃತಃ ಕಿಂ ನ ಸಾಹಸಮ್ ॥ ೬೩
ತತಃ ಸ ಸರ್ವಾಃ ಪ್ರಕೃತೀರ್ವೈದ್ಯೋಽನ್ಯೇದ್ಯುರಭಾಷತ ।
ಅಜರೋಽಯಂ ಕೃತಸ್ತಾವತ್ ಷಡ್ಭಿರ್ಮಾಸೈರ್ಮಯಾ ನೃಪಃ ॥ ೬೪

೬೫. ಇನ್ನೆರಡು ತಿಂಗಳುಗಳಲ್ಲಿ ಇವನ ಆಕಾರವು ಬೇರೆಯೇ ಆಗಲಿದೆ. ಆದ್ದರಿಂದ ಈಗ ಸ್ವಲ್ಪ ದೂರದಿಂದಲೇ ಇವನಿಗೆ ಕಾಣಿಸಿಕೊಳ್ಳಿ.'

೬೬. ಹೀಗೆ ಹೇಳಿ ನೆಲಮಾಳಿಗೆಯ ಬಾಗಿಲಿಗೆ ಎಲ್ಲರನ್ನೂ ಕರೆತಂದು ತೋರಿಸುತ್ತಾ ಆ ಯುವಕನಿಗೆ ವೈದ್ಯನು ಎಲ್ಲರ ಹೆಸರು, ಕೆಲಸಗಳನ್ನು ನಿವೇದಿಸಿದನು.

೬೭. ಹೀಗೆ ಎರಡು ತಿಂಗಳಲ್ಲಿ ಪ್ರತಿದಿನ ಅಂತಃಪುರದ ಸ್ತ್ರೀಯರವರೆಗೆ ಎಲ್ಲರನ್ನೂ ನೆಲಮಾಳಿಗೆಗೆ ಒಯ್ದು ಉಪಾಯದಿಂದ ಆ ಯುವಕನಿಗೆ ಪರಿಚಯ ಮಾಡಿಸಿದನು.

೬೮. ಅವಧಿಯು ಸಮೀಪಿಸಲು ಆ ವೈದ್ಯನು "ಈ ರಾಜನು ಅಜರನಾಗಿ ಬಿಟ್ಟನು' ಎಂದು ಹೇಳುತ್ತಾ ಸುಖದಿಂದ ಮೈ ಕೈ ತುಂಬಿದ್ದ ಅವನನ್ನು ಭೂಮಿ ಗೃಹದಿಂದ ಮೇಲಕ್ಕೆ ಕರೆತಂದನು.

೬೯. ಅದೇ ರಾಜನು ಔಷಧಿಯಿಂದ ಹೀಗಾಗಿದ್ದಾನೆ ಎಂದು ಸಂತುಷ್ಟರಾದ ಪ್ರಜೆಗಳು ಅವನ ಸುತ್ತ ಸೇರಿಕೊಂಡರು.

೭೦. ಒಂದು ದಿನ ಸ್ನಾನ ಮಾಡಿ ಶುಚಿರ್ಭೂತನಾಗಿ ರಾಜ್ಯವನ್ನು ಪಡೆದ ಯುವ ಪುರುಷನು ಮಂತ್ರಿಗಳೊಂದಿಗೆ ಸಂಭ್ರಮದಿಂದ ರಾಜಯೋಗ್ಯವಾದ ಕಾರ್ಯಗಳನ್ನು ನಡೆಸಿದನು.

೭೧. ಅಂದಿನಿಂದ ಅವನು ಅಜರನೆಂಬ ಹೆಸರು ಪಡೆದು ರಾಜ್ಯಭಾರ ಮಾಡುತ್ತಾ ಅಂತಃಪುರದವರೊಂದಿಗೆ ಆಡುತ್ತಾ ಸುಖವಾಗಿ ಇದ್ದನು.

---

ಮಾಸದ್ವಯೇನ ಚೈತಸ್ಯ ರೂಪಮನ್ಯದ್ಭವಿಷ್ಯತಿ ।
ತದ್ದೂರಾತ್ ಕಿಂಚಿದಾತ್ಮಾನಮಸ್ಮೈ ದರ್ಶಯತಾಧುನಾ ॥ ೬೫

ಇತ್ಯುಕ್ತ್ವಾ ಭೂಗೃಹದ್ವಾರಿ ಸರ್ವಾನಾನೀಯ ದರ್ಶಯನ್ ।
ತಸ್ಮೈ ನ್ಯವೇದಯದ್ಯೂನೇ ಸ ತೇಷಾಂ ನಾಮಕರ್ಮಣೀ ॥ ೬೬

ಇತ್ಯಂತಃಪುರಪರ್ಯಂತಂ ಮಾಸದ್ವಿತಯಮನ್ವಹಮ್ ।
ಭೂಗೃಹೇಽಬೋಧಯದ್ಯುಕ್ತ್ಯಾ ಯುವಾನಂ ಪುರುಷಂ ಸ ತಮ್ ॥ ೬೭

ಪ್ರಾಪ್ತೇ ಚ ಸಮಯೇ ತಂ ಸ ಭೋಗಪುಷ್ಟಂ ಧರಾಗೃಹಾತ್ ।
ಉಜ್ಜಹಾರಾಜರಃ ಸೋಽಯಂ ಜಾತೋ ರಾಜೇತ್ಯುದಾಹರನ್ ॥ ೬೮

ತತಶ್ಚೌಷಧಿಸಂಸಿದ್ಧಃ ಸೈಷ ರಾಜೇತಿ ತತ್ರ ಸಃ ।
ಪರ್ಯವಾರ್ಯತ ಹೃಷ್ಟಾಭಿಃ ಪುಮಾನ್ ಪ್ರಕೃತಿಭಿರ್ಯುವಾ ॥ ೬೯

ಅಥಸ್ನಾತಸ್ತಥಾ ಲಬ್ಧರಾಜ್ಯೋ ರಾಜೋಚಿತಾಃ ಕ್ರಿಯಾಃ ।
ಚಕಾರ ಸ ಸಹಾಮಾತ್ಯೈಃ ಸೋತ್ಸವಸ್ತರುಣಃ ಪುಮಾನ್ ॥ ೭೦

ತದಾಪ್ರಭೃತಿ ತಸ್ಥೌ ಚ ಕುರ್ವನ್‌ರಾಜ್ಯಂ ಸುಖೇನ ಸಃ ।
ನಾಮಾಜರ ಇತಿ ಪ್ರಾಪ್ಯ ಕ್ರೀಡನ್ನಂತಃಪುರೈಸ್ಸಹ ॥ ೭೧

೭೨. ಎಲ್ಲರೂ ಅಸಂಭವವಾದ, ವೈದ್ಯನ ಈ ಚಮತ್ಕಾರವನ್ನು ನಂಬಿ, ರಸಾಯನದಿಂದ ತಮ್ಮ ಒಡೆಯನಿಗೆ ಯೌವನವು ತಿರುಗಿ ಬಂದಿದೆ ಎಂದು ಭಾವಿಸಿದರು.

೭೩. ಪ್ರಜೆಗಳನ್ನು ಮತ್ತು ರಾಣಿ ಕಮಲಪ್ರಭೆಯನ್ನು ಪ್ರೀತಿಯಿಂದ ಸಂತೋಷಪಡಿಸುತ್ತಾ ಆ ಅಜರ ಮಹಾರಾಜನು ತನ್ನ ಗೆಳೆಯರೊಂದಿಗೆ ಐಶ್ವರ್ಯವನ್ನು ಅನುಭವಿಸಿದನು.

೭೪. ಗೆಳೆಯರಾದ ಭೇಷಜ ಚಂದ್ರನನ್ನು ಮತ್ತು ಇನ್ನೊಬ್ಬನಾದ ಪದ್ಮದರ್ಶನನ್ನು ಆನೆ, ಕುದುರೆ ಗ್ರಾಮಗಳನ್ನು ನೀಡಿ ತನಗೆ ಸಮಾನರನ್ನಾಗಿ ಮಾಡಿದನು.

೭೫. ವೈದ್ಯನಾದ ತರುಣಚಂದ್ರನನ್ನು ಔಷಧಿಯ ಸಲುವಾಗಿ ಗೌರವಿಸಿದನು.  ಆದರೆ ಅವನು ಸತ್ಯ–ಧರ್ಮಗಳಿಂದ ಭ್ರಷ್ಟನಾಗಿದ್ದ ಆ ವೈದ್ಯನಲ್ಲಿ ನಂಬಿಕೆಯನ್ನಿಡಲಿಲ್ಲ.

೭೬. ಒಮ್ಮೆ ಆ ವೈದ್ಯನು ಸ್ವಾತಂತ್ರ್ಯದಿಂದ ರಾಜನಿಗೆ ಹೇಳಿದನು. "ನನ್ನನ್ನು ಲೆಕ್ಕಕ್ಕೆ ಇಟ್ಟುಕೊಳ್ಳದೆ ಸ್ವತಂತ್ರವಾಗಿ ವ್ಯವಹರಿಸಲು ತೊಡಗಿದ್ದೀ ಏಕೆ ?

೭೭. ನಾನು ನಿನ್ನನ್ನು ಇಲ್ಲಿ ರಾಜನನ್ನಾಗಿ ಯಾವಾಗ ಮಾಡಿದೆನು ಎಂಬುದನ್ನು ಮರೆತು ಬಿಟ್ಟೆಯಾ ?' ಅದನ್ನು ಕೇಳುತ್ತಲೇ ಅಜರ ಮಹಾರಾಜನು ಆ ವೈದ್ಯನಿಗೆ ಹೇಳಿದನು:

---

ಸರ್ವೇ ಚೈತಮಸಂಭಾವ್ಯವೈದ್ಯವೃತ್ತಾವಿಶಂಕಿನಃ ।
ರಸಾಯನಪರಾವೃತ್ತರೂಪಂ ಸ್ವಂ ಮೇನಿರೇ ಪ್ರಭುಮ್ ॥ ೭೨

ಪ್ರೀತ್ಯಾನುರಂಜ್ಯ ಪ್ರಕೃತೀರ್ದೇವೀಂ ಚ ಕಮಲಪ್ರಭಾಮ್ ।
ಸೋಽಥ ಸ್ವಮಿತ್ರೈರಜರೋ ರಾಜಾಭುಂಕ್ತ ಸಹ ಶ್ರಿಯಮ್ ॥ ೭೩

ಮಿತ್ರಂ ಭೇಷಜಚಂದ್ರಾಖ್ಯಂ ತಥಾನ್ಯಂ ಪದ್ಮದರ್ಶನಮ್ ।
ಉಭೇ ಆತ್ಮಸಮೇ ಚಕ್ರೇ ಹಸ್ತ್ಯಶ್ವಗ್ರಾಮಪೂರಿತೇ ॥ ೭೪

ವೈದ್ಯಂ ತರುಣಚಂದ್ರಂ ತು ಪ್ರಕ್ರಿಯಾರ್ಥಮಮಾನಯತ್ ।
ನ ತು ತಸ್ಮಿನ್ ವಿಶಶ್ವಾಸ ಸತ್ಯಧರ್ಮಚ್ಯುತಾತ್ಮನಿ ॥ ೭೫

ಏಕದಾ ಚ ಸ ವೈದ್ಯಸ್ತಂ ಸ್ವೈರಂ ರಾಜಾನಮಬ್ರವೀತ್ ।
ಕಿಂ ಮಾಮಗಣಯಿತ್ವೈವ ಸ್ವಾತಂತ್ರ್ಯೇಣ ವಿಚೇಷ್ಟಸೇ ॥ ೭೬

ತದ್ವಿಸ್ಮೃತಂ ಯದಾ ರಾಜಾ ಭವಾನಿಹ ಮಯಾ ಕೃತಃ ।
ತತ್ಶ್ರುತ್ವೈವ ಸ ರಾಜಾ ತಮಜರೋ ವೈದ್ಯಮಭ್ಯಧಾತ್ ॥ ೭೭

ಅಹೋ ಮೂರ್ಖೋಽಸಿ ಕಃ ಕಸ್ಯ ಕರ್ತಾ ದಾತಾಪಿ ವಾ ಪುಮಾನ್ ।
ಪ್ರಾಕ್ತನಂ ಕರ್ಮ ಹಿ ಸಖೇ ಕರೋತಿ ಚ ದದಾತಿ ಚ ॥ ೭೮

೭೮. "ಅಯ್ಯೋ ನೀನೆಂತಹ ಮೂರ್ಖನಾಗಿದ್ದೀಯೆ! ಯಾರು ಯಾರನ್ನು ಏನು ಮಾಡು ತ್ತಾರೆ ? ಅಥವಾ ಯಾರು ಯಾರಿಗೆ ಏನು ಕೊಡಬಲ್ಲರು? ಎಲೈ, ಗೆಳೆಯನೇ ಪೂರ್ವಜನ್ಮದ ಕರ್ಮವೇ ಎಲ್ಲವನ್ನೂ ಮಾಡುತ್ತದೆ ಮತ್ತು ನೀಡುತ್ತದೆ.

೭೯. ಆದ್ದರಿಂದ ನೀನು ಗರ್ವ ಪಡಬೇಡ. ಇದು ನನಗೆ ತಪಸ್ಸಿನಿಂದ ಸಿದ್ಧವಾದದ್ದು. ಇದನ್ನು ಸದ್ಯದಲ್ಲಿಯೇ ನಿನಗೆ ಪ್ರತ್ಯಕ್ಷವಾಗಿ ತೋರಿಸಿ ಕೊಡಲಿದ್ದೇನೆ.'

೮೦. ಅವನು ಹೀಗೆ ಹೇಳಿದಾಗ ವೈದ್ಯನು ಹೆದರಿದವನಂತೆ ವಿಚಾರಮಾಡಿದನು : "ಏನಿದು ? ಧೈರ್ಯದಿಂದ ಜ್ಞಾನಿಯಂತೆ ಮಾತನಾಡುತ್ತಾನೆ.

೮೧. ರಹಸ್ಯವಾಗಿ ಅಂತರಂಗವನ್ನು ಕಾಪಾಡಿಕೊಳ್ಳುವುದಾಗಲಿ, ಒಡೆಯನನ್ನು ತೃಪ್ತಿಪಡಿಸುವ ಉಪಾಯಗಳಾಗಲಿ ಅವನಲ್ಲಿ ಯಾವುದೂ ನಡೆಯದಿದ್ದು ಆದ್ದರಿಂದ ನಾನೀಗ ಇವನಿಗೆ ಹೊಂದಿಕೊಂಡೇ ನಡೆದುಕೊಳ್ಳಬೇಕು.

೮೨. ನನಗೆ ಇವನು ಸಾಕ್ಷಾತ್ತಾಗಿ ಏನನ್ನು ತೋರಿಸಲಿರುವನೋ ಅದನ್ನು ನೋಡುತ್ತೇನೆ' ಎಂದು ಆಲೋಚಿಸಿ ಆ ವೈದ್ಯನು ಸುಮ್ಮನಿದ್ದನು.

೮೩. ಮಾರನೆಯ ದಿನ ಅಜರರಾಜನು ಗೆಳೆಯರಿಂದ ಸೇವಿತನಾಗಿ ತರುಣ ಚಂದ್ರನೇ ಮುಂತಾದವರ ಜೊತೆ ಅಡ್ಡಾಡಲು ಹೊರಹೊರಟನು.

೮೪. ಹೀಗೆಯೇ ಸುತ್ತುತ್ತಾ ನದಿಯ ದಡವನ್ನು ತಲುಪಿದ ಅವನು ನೀರಿನ ಮಧ್ಯೆ ಪ್ರವಾಹದಲ್ಲಿ ತೇಲಿಕೊಂಡು ಬರುತ್ತಿದ್ದ ಚಿನ್ನದ ಐದು ಕಮಲಗಳನ್ನು ಕಂಡನು.

---

ಅತಸ್ತ್ವಂ ಮಾ ಕೃಥಾ ದರ್ಪಂ ತಪಸ್ಸಿದ್ಧಮಿದಂ ಹಿ ಮೇ ।
ಏತಚ್ಚ ದರ್ಶಯಿಷ್ಯಾಮಿ ಪ್ರತ್ಯಕ್ಷಮಚಿರೇಣ ತೇ ॥ ೭೯
ಇತ್ಯುಕ್ತಸ್ತೇನ ಸ ತ್ರಸ್ತ ಇವ ವೈದ್ಯೋ ವ್ಯಚಿಂತಯತ್ ।
ಅಹೋ ಕಿಮಪ್ಯಧೃಷ್ಟೋಽಯಂ ಧೀರೋ ಜ್ಞಾನೀವ ಭಾಷತೇ ॥ ೮೦
ಯದ್ರಹಸ್ಯಾಂತರಂಗತ್ವಂ ಸ್ವಾಮಿಸಂವನನಂ ಪರಮ್ ।
ತದಪಿ ಕ್ಷಮತೇ ನಾಸ್ಮಿನ್ನನುವರ್ತ್ಯಸ್ತದೇಷ ಮೇ ॥ ೮೧
ಪಶ್ಯಾಮಿ ತಾವತ್ಕಿಮಯಂ ಸಾಕ್ಷಾನ್ಮೇ ದರ್ಶಯಿಷ್ಯತಿ ।
ಇತ್ಯಾಲೋಚ್ಯ ತಥೇತ್ಯೇವಂ ಭಿಷಕ್‌ತೂಷ್ಣೀಂ ಬಭೂವ ಸಃ ॥ ೮೨
ಅನ್ಯೇದ್ಯುಶ್ಚಾಜರೋ ರಾಜಾ ಪರಿಭ್ರಾಂತುಂ ಸ ನಿರ್ಯಯೌ ।
ಕ್ರೀಡಂಸ್ತರುಣಚಂದ್ರಾದ್ಯೈಃ ಸೇವ್ಯಮಾನಃ ಸುಹೃತ್ಸುಖಃ ॥ ೮೩
ಭ್ರಾಮ್ಯನ್ ಪ್ರಾಪ್ತೋ ನದೀತೀರಂ ಯಸ್ಯಾ ಮಧ್ಯೇ ದದರ್ಶ ಸಃ ।
ಪ್ರವಾಹೇ ವಹದಾಯಾತಂ ಸೌವರ್ಣಂ ಪದ್ಮಪಂಚಕಮ್ ॥ ೮೪

೮೫. ಸೇವಕರ ಮೂಲಕ ಅದನ್ನು ತರಿಸಿ ಹಿಡಿದು ನೋಡಿ ಹತ್ತಿರದಲ್ಲೇ ಇದ್ದ ವೈದ್ಯ ತರುಣಚಂದ್ರನಿಗೆ ಹೇಳಿದನು.

೮೬. "ನೀನು ಇಲ್ಲಿಂದ ಇದೇ ನದಿಯ ದಡದ ಮೇಲೆ ಹೋಗು. ಈ ಕಮಲಗಳು ಹುಟ್ಟುವ ಜಾಗವನ್ನು ಹುಡುಕು.

೮೭. ಅದನ್ನು ನೋಡಿ ಬಾ. ನನಗೆ ಈ ಅದ್ಭುತ ಕಮಲಗಳ ಬಗ್ಗೆ ತುಂಬ ಕುತೂಹಲ ಉಂಟಾಗಿದೆ. ನೀನು ನನ್ನ ಸಮರ್ಥನಾದ ಸ್ನೇಹಿತನಾಗಿದ್ದೀಯೆ.'

೮೮. ಹೀಗೆ ಹೇಳಿ ಆ ರಾಜನು ಅವನ್ನು ಕಳಿಸಲು, ಗತ್ಯಂತರವಿಲ್ಲದೆ ವೈದ್ಯನು "ಆಗಲಿ' ಎಂದು, ಅಪ್ಪಣೆ ಮಾಡಿದ ಮಾರ್ಗವನ್ನು ಹಿಡಿದು ಅಲ್ಲಿಂದ ಹೊರಟನು.

೮೯. ರಾಜನು ತನ್ನ ಊರಿಗೆ ಹಿಂತಿರುಗಿದನು. ಆ ವೈದ್ಯನು ಹಾಗೆಯೇ ಹೋಗಿ ನದಿಯ ದಡದಲ್ಲಿದ್ದ ಶಿವದೇವಾಲಯವನ್ನು ತಲುಪಿದನು.

೯೦. ಅದರ ಮುಂದೆ ಆ ನದಿಯ ತೀರ್ಥದ ದಡದಲ್ಲಿ ಒಂದು ದೊಡ್ಡ ಆಲದ ಮರವಿದ್ದು ಅದರಲ್ಲಿ ಮನುಷ್ಯನ ಅಸ್ಥಿಪಂಜರವೊಂದು ನೇತಾಡುತ್ತಿತ್ತು.

೯೧. ಬಳಲಿದ್ದ ಆತನು ಸ್ನಾನಮಾಡಿ ಅಲ್ಲಿಯೇ ದೇವರನ್ನು ಪೂಜಿಸಿ ನಿಂತಾಗ ಮೋಡವು ಬಂದು ಜೋರಾಗಿ ಮಳೆಗರೆಯಿತು.

---

ಆನಾಯಯಚ್ಚ ಭೃತ್ಯೈಸ್ತದ್ ಗೃಹೀತ್ವಾ ಪ್ರವಿಲೋಕ್ಯ ಚ ।
ವೈದ್ಯಂ ತರುಣಚಂದ್ರಂ ಚ ಜಗಾದ ನಿಕಟಸ್ಥಿತಮ್ ॥ ೮೫

ನದೀತೀರೇಣ ಗಚ್ಛತ್ವಮುಪರಿಷ್ಟಾದಿತೋಽಮುನಾ ।
ಉತ್ಪತ್ತಿಸ್ಥಾನಮೇತೇಷಾಂ ಪಂಕಜಾನಾಂ ಗವೇಷಯ ॥ ೮೬

ತಚ್ಚ ದೃಷ್ಟ್ವಾ ತ್ವಮಾಗಚ್ಛೇಃ ಸುಮಹತ್ಕೌತುಕಂ ಹಿ ಮೇ ।
ಅದ್ಭುತೇಷ್ವೇಷು ಪದ್ಮೇಷು ತ್ವಂ ಚ ದಕ್ಷಃ ಸುಹೃನ್ಮಮ ॥ ೮೭

ಇತ್ಯುಕ್ತ್ವಾ ಪ್ರೇಷಿತಸ್ತೇನ ರಾಜ್ಞಾ ಸ ವಿವಶೋ ಭಿಷಕ್ ।
ಯಥಾದಿಷ್ಟೇನ ಮಾರ್ಗೇಣ ತಥೇತಿ ಪ್ರಯಯೌ ತತಃ ॥ ೮೮

ರಾಜಾಪ್ಯಯಾಸೀತ್ ಸ್ವಪುರಂ ಸ ಚ ಗಚ್ಛನ್‌ಭಿಷಕ್‌ಕ್ರಮಾತ್ ।
ಪ್ರಾಪದಾಯತನಂ ಶೈವಂ ನದ್ಯಾಸ್ತಸ್ಯಾಸ್ತಟಸ್ಥಿತಮ್ ॥ ೮೯

ತದಗ್ರೇ ತತ್ಸರಿತ್ತೀರ್ಥತಟೇ ವಟಮಹಾತರುಮ್ ।
ಅಪಶ್ಯಲ್ಲಂಬಮಾನಂ ಚ ತಸ್ಮಿನ್ನರಕರಂಕಕಮ್ ॥ ೯೦

ತತಃ ಶ್ರಾಂತಃ ಕೃತಸ್ನಾನೋ ದೇವಮಭ್ಯರ್ಚ್ಯ ತತ್ರ ಸಃ ।
ಯಾವತ್ತಿಷ್ಠತಿ ಮೇಘೋಽತ್ರ ತಾವದಾಗತ್ಯ ವೃಷ್ಟವಾನ್ ॥ ೯೧

೯೨–೯೩. ಮೋಡವು ಮಳೆ ಸುರಿಸಿದ್ದರಿಂದ ಆ ವಟವೃಕ್ಷದ ಕೊಂಬೆಯಲ್ಲಿ ನೇತಾಡುತ್ತಿದ್ದ ಮನುಷ್ಯನ ಅಸ್ಥಿಪಂಜರದಿಂದ ನೀರಿನ ಹನಿಗಳು ನದಿಯ ಪುಣ್ಯಜಲದಲ್ಲಿ ಬಿದ್ದು ಆ ಹನಿಗಳಿಂದ ಚಿನ್ನದ ಕಮಲಗಳು ಹುಟ್ಟುತ್ತಿರುವುದನ್ನು ವೈದ್ಯನು ಆ ಕ್ಷಣದಲ್ಲಿ ಕಂಡನು.

೯೪. ಅಬ್ಬಾ ಏನಿದು ಆಶ್ಚರ್ಯ ? ಜನರೇ ಇಲ್ಲದ ಈ ಕಾಡಿನಲ್ಲಿ ಯಾರನ್ನು ಕೇಳಲಿ ? ಯಾರಾದರೂ ಸಿಕ್ಕಿದರೂ ಬ್ರಹ್ಮನ ಅತ್ಯಂತ ಆಶ್ಚರ್ಯಜನಕವಾದ ಈ ಸೃಷ್ಟಿಯನ್ನು ಯಾರು ಬಲ್ಲರು ?

೯೫. ಚಿನ್ನದ ಕಮಲದ ಮೂಲವನ್ನು ನಾನು ಕಂಡದ್ದಾಯಿತು. ಆದ್ದರಿಂದ ಮನುಷ್ಯನ ಈ ಹೆಣವನ್ನು ನೀರಿನಲ್ಲಿ ಎಸೆಯುತ್ತೇನೆ.

೯೬. ಧರ್ಮವಾದರೂ ಆಗಲಿ ಅಥವಾ ಇದರ ಹಿಂದೆ ಕಮಲಗಳು ಬೇಕಾದರೂ ಹುಟ್ಟಲಿ ಎಂದು ವಿಚಾರಮಾಡಿ ಆ ಮರದ ಮೇಲಿಂದ ಅಸ್ಥಿ ಪಂಜರವನ್ನು ಕೆಳಕ್ಕೆಸೆದನು.

೯೭. ಆ ದಿನವನ್ನು ಅಲ್ಲಿಯೇ ಕಳೆದು ಕೃತಕೃತ್ಯನಾಗಿ ಮಾರನೆಯ ದಿನ ಅಲ್ಲಿಂದ ಹೊರಟ ವೈದ್ಯನು ತನ್ನ ಊರನ್ನು ಕುರಿತು ಹಿಂದಿರುಗಿದನು.

---

ಮೇಘಾಭಿವೃಷ್ಟಾತ್ತಸ್ಮಾಚ್ಚ ವಟಶಾಖಾವಲಂಬಿತಃ ।
ಮಾನುಷಾಸ್ಥಿಕರಂಕಾದ್ಯೇ ನ್ಯಪತಂಸ್ತೋಯಬಿಂದವಃ ॥ ೯೨
ನದ್ಯಾಸ್ತೀರ್ಥಜಲೇ ತಸ್ಯಾಸ್ತೇಭ್ಯಸ್ತಾನಿ ದದರ್ಶ ಸಃ ।
ಜಾಯಮಾನಾನಿ ಪದ್ಮಾನಿ ಸೌವರ್ಣಾನಿ ಕ್ಷಣಾದ್ಭಿಷಕ್ ॥ ೯೩
ಅಹೋ ಕಿಮಿದಮಾಶ್ಚರ್ಯಂ ಕಂ ಪೃಚ್ಛಾಮ್ಯಜನೇ ವನೇ ।
ಯದಿ ವಾ ವೇದ ಕಃ ಸರ್ಗಂ ಬಹ್ವಾಶ್ಚರ್ಯಮಯಂ ವಿಧೇಃ ॥ ೯೪
ದೃಷ್ಟಸ್ತಾವನ್ಮಯಾ ಸೋಽಯಂ ಕನಕಾಂಭೋರುಹಾಕರಃ ।
ತದೇತತ್ ಪ್ರಕ್ಷಿಪಾಮ್ಯತ್ರ ತೀರ್ಥೇ ನರಕಲೇವರಮ್ ॥ ೯೫
ಧರ್ಮೋಽಸ್ತು ವೈ ತತ್ ಪೃಷ್ಠೇ ಚ ಜಾಯಂತಾಮಂಬುಜಾನಿ ವಾ ।
ಇತ್ಯಾಲೋಚ್ಯ ಸ ವೃಕ್ಷಾಗ್ರಾತ್ತತಃ ಕಂಕಾಲಮಕ್ಷಿಪತ್ ॥ ೯೬
ನೀತ್ವಾ ಚ ತದ್ದಿನಂ ತತ್ರ ಸಿದ್ಧಕಾರ್ಯೋಽಪರೇಽಹನಿ ।
ಪ್ರತ್ಯಾವರ್ತಿಷ್ಟ ಸ ತತೋ ಭಿಷಗ್ದೇಶಂ ನಿಜಂ ಪ್ರತಿ ॥ ೯೭

೯೮–೯೯. ಕೆಲವೇ ದಿನಗಳಲ್ಲಿ ಆ ವೈದ್ಯನು ವಿಲಾಸಪುರವನ್ನು ತಲುಪಿದನು. ಪ್ರಯಾಣದಿಂದ ಕೃಶನಾಗಿ ಬಣ್ಣಗೆಟ್ಟಿದ್ದ ಆತನು ಆ ಅಜರ ರಾಜನ ಎಡೆಗೆ, ಬಾಗಿಲುಕಾಯುವವನಿಂದ ನಿವೇದಿತನಾಗಿ ಹೋಗಿ ಕಾಲಿಗೆ ಬೀಳಲು ರಾಜನು ಕುಶಲವೃತ್ತಾಂತವನ್ನು ಕೇಳಿದನು. ವೈದ್ಯನು ತನ್ನ ಕಥೆಯನ್ನು ಅವನಿಗೆ ಹೇಳಿದನು.

೧೦೦. ಆ ವೇಳೆಗೆ ಉಳಿದ ಜನರನ್ನೆಲ್ಲ ಕಳಿಸಿ ರಾಜನು ಹೇಳಿದನು. "ಹಾಗಾದರೆ ಗೆಳೆಯನೇ, ಚಿನ್ನದ ಕಮಲವು ಹುಟ್ಟುವ ಜಾಗವನ್ನು ನೀನು ನೋಡಿದೆ.

೧೦೧. ಆ ಸ್ಥಾನವು ಉತ್ತಮವಾದದ್ದು. ಅಲ್ಲಿ ವಟವೃಕ್ಷದಲ್ಲಿ ನೇತಾಡುತ್ತಿದ್ದ ಮನುಷ್ಯನ ಅಸ್ಥಿ ಪಂಜರವನ್ನೂ ನೋಡಿದೆಯಲ್ಲವೇ ? ಅದನ್ನು ನನ್ನ ಹಿಂದಿನ ಶರೀರ ಎಂಬುದಾಗಿ ತಿಳಿ.

೧೦೨. ಕಾಲನ್ನು ಮೇಲೆ ಮಾಡಿಕೊಂಡು ನೇತಾಡುತ್ತಾ ತಪಗೈಯುತ್ತಾ ಹಿಂದೆ ನನ್ನ ಶರೀರವನ್ನು ಬಾಡಿಸಿ ಅಲ್ಲಿ ತ್ಯಜಿಸಿದೆನು.

೧೦೩. ಆ ತಪಸ್ಸಿನ ಮಹಿಮೆಯಿಂದ ನನ್ನ ಅಸ್ಥಿ ಪಂಜರದ ಮೂಲಕ ಬೀಳುವ ಮೋಡದ ಹನಿಗಳಿಂದ ಅಲ್ಲಿ ಚಿನ್ನದ ಕಮಲಗಳ ಹುಟ್ಟುತ್ತವೆ.

೧೦೪. ಆ ನನ್ನ ಅಸ್ಥಿ ಪಂಜರವನ್ನು ನೀನು ನದೀ ಜಲದಲ್ಲಿ ಎಸೆದದ್ದು ಒಳಿತೇ ಆಯಿತು. ಏಕೆಂದರೆ ಹಿಂದಿನ ಜನ್ಮದಲ್ಲಿ ನೀನು ನನ್ನ ಗೆಳೆಯನಾಗಿದ್ದೆ.

---

ದಿನೈಃ ಕತಿಪಯೈಃ ಪ್ರಾಪ ತದ್ವಿಲಾಸಪುರಂ ಚ ಸಃ ।
ತಸ್ಯಾಜರಸ್ಯ ನಿಕಟಂ ರಾಜ್ಞೋಽಧ್ವಕೃಶಧೂಸರಃ ॥ ೯೮

ದ್ವಾಃಸ್ಥೇನಾವೇದಿತೋ ಯಾವತ್ಪ್ರವಿಶ್ಯ ಚರಣಾನತಃ ।
ಸ ಪೃಷ್ಟಕುಶಲೋ ರಾಜ್ಞಾ ವೃತ್ತಾಂತಂ ವಕ್ತಿ ತಂ ಭಿಷಕ್ ॥ ೯೯

ತಾವತ್ಸ ವಿಜನಂ ಕೃತ್ವಾ ರಾಜಾ ತಂ ಸ್ವಯಮಭ್ಯಧಾತ್ ।
ದೃಷ್ಟಂ ಹೇಮಾಂಬುಜೋತ್ಪತ್ತಿಸ್ಥಾನಂ ತದ್ಭವತಾ ಸಖೇ ॥ ೧೦೦

ತತ್ಕ್ಷೇತ್ರಮುತ್ತಮಂ ಚೈವಂ ತತ್ರ ದೃಷ್ಟಸ್ತ್ವಯಾ ಚ ಸಃ ।
ಕರಂಕೋ ವಟವೃಕ್ಷೇ ತಾಂ ಪ್ರಾಕ್ತನೀಂ ವಿದ್ಧಿ ಮೇ ತನುಮ್ ॥ ೧೦೧

ತದೂರ್ಧ್ವಪಾದೇನ ಮಯಾ ಲಂಬಮಾನೇನ ಕುರ್ವತಾ ।
ತಪಸ್ತತ್ರ ಪುರಾತ್ಯಕ್ತಮುಪಶೋಷ್ಯ ಕಲೇವರಮ್ ॥ ೧೦೨

ತಪಸಸ್ತಸ್ಯ ಮಾಹಾತ್ಮ್ಯಾತ್ ಕರಂಕಾತ್ ಪ್ರಚ್ಯುತೈಸ್ತತಃ ।
ಮೇಘಾಂಬುಭಿಸ್ತೇ ಜಾಯಂತೇ ಪದ್ಮಾಸ್ತತ್ರ ಹಿರಣ್ಮಯಾಃ ॥ ೧೦೩

ಸ ಕರಂ ಕಶ್ಚ ಯತ್ಕ್ಷಿಪ್ತಸ್ತೀರ್ಥೇ ತತ್ರ ಮಮ ತ್ವಯಾ ।
ಯುಕ್ತಂ ತದ್ವಿಹಿತಂ ತ್ವಂ ಹಿ ಮಿತ್ರಂ ಮೇ ಪೂರ್ವಜನ್ಮನಿ ॥ ೧೦೪

೧೦೫. ಈ ಭೇಷಜಚಂದ್ರನೂ ಮತ್ತು ಪದ್ಮದರ್ಶನನೂ ಆ ಜನ್ಮಕ್ಕೆ ಸಂಬಂಧಪಟ್ಟ ನನ್ನ ಇಬ್ಬರು ಗೆಳೆಯರು.

೧೦೬. ಆದ್ದರಿಂದ ಎಲೈ ಗೆಳೆಯನೇ, ಆ ತಪಸ್ಸಿನ ಪ್ರಭಾವದಿಂದ ಪೂರ್ವಜನ್ಮ ಸ್ಮರಣೆಯೂ ಜ್ಞಾನವೂ ಮತ್ತು ರಾಜ್ಯವೂ ನನಗೆ ಲಭಿಸಿದವು.

೧೦೭. ಇದನ್ನೇ ನಾನು ನಿನಗೆ ಉಪಾಯದಿಂದ ಪ್ರತ್ಯಕ್ಷವಾಗಿ ತೋರಿಸಿದೆನು. ನೀನು ಎಸೆದ ಮೂಳೆಗಳ ಪಂಜರವನ್ನು ಗುರುತಿನ ಸಹಿತ ಬಣ್ಣಿಸಿದ್ದೇನೆ.

೧೦೮. ಆದ್ದರಿಂದ ನೀನು ನನಗೆ ರಾಜ್ಯವನ್ನು ಕೊಡಿಸಿದೆ ಎಂದು ಅಹಂಕಾರಪಡಬೇಡ. ಮನಸ್ಸನ್ನು ಕೆಡಿಸಿಕೊಳ್ಳಬೇಡ.

೧೦೯. ಪ್ರಾಚೀನ ಕರ್ಮವನ್ನು ಬಿಟ್ಟರೆ ಯಾರೂ ಯಾರಿಗೂ ಏನನ್ನೂ ಕೊಡಲಾರರು. ಹುಟ್ಟಿದ ದಿನದಿಂದಲೂ ಜೀವಿಗಳು ಹಿಂದಿನ ಜನ್ಮದ ಕರ್ಮದ ಫಲವನ್ನು ಅನುಭವಿಸುತ್ತವೆ.’

೧೧೦. ರಾಜನು ಹಾಗೆ ಹೇಳಲು ಅದನ್ನು ಸರಿಯಾಗಿ ಅರಿತ ವೈದ್ಯನು ಮತ್ತೆಂದೂ ಅಸಂತೋಷವನ್ನು ಹೊಂದದೆ ಅವನ ಸೇವೆಯಲ್ಲಿ ಸುಖ ಕಾಣತೊಡಗಿದನು.

೧೧೧. ಜಾತಿಸ್ಮರನಾದ ಆ ಅಜರ ಮಹಾರಾಜನು ಆಮೇಲೆ ವೈದ್ಯನಿಗೆ ಹಣ ನೀಡುವುದರ ಮೂಲಕ ಅವನನ್ನು ಉದಾರಮನಸ್ಸಿನಿಂದ ಯಥೋಚಿತವಾಗಿ ಗೌರವಿಸಿದನು.

---

ಏಷ ಭೇಷಜಚಂದ್ರಶ್ಚ ತಥಾಸೌ ಪದ್ಮದರ್ಶನಃ ।
ಏತಾವಪಿ ಚ ತಜ್ಜನ್ಮಸಂಗತೌ ಸುಹೃದೌ ಮಮ ॥ ೧೦೫

ತತ್ತಸ್ಯ ತಪಸೋ ಮಿತ್ರ ಪ್ರಾಕ್ತನಸ್ಯ ಪ್ರಭಾವತಃ ।
ಜಾತಿಸ್ಮರತ್ವಂ ಜ್ಞಾನಂ ಚ ರಾಜ್ಯಂ ಚೋಪನತಂ ಮಮ ॥ ೧೦೬

ತದೇತದ್ದರ್ಶಿತಂ ತುಭ್ಯಂ ಯುಕ್ತ್ಯಾ ಪ್ರತ್ಯಕ್ಷತೋ ಮಯಾ ।
ಭವತ್ಕ್ಷಿಪ್ತಾಸ್ಥಿಸಂಘಾತಂ ಸಾಭಿಜ್ಞಾನಂ ಚ ವರ್ಣಿತಮ್ ॥ ೧೦೭

ತಸ್ಮಾತ್ತುಭ್ಯಂ ಮಯಾ ರಾಜ್ಯಮದಾಯೀತಿ ಮಮ ತ್ವಯಾ ।
ಅಹಂಕಾರೋ ನ ಕರ್ತವ್ಯಃ ಸ್ವಾಸ್ಥ್ಯಂ ಚೇತೇ ನ ದುಃಸ್ಥಿತಮ್ ॥ ೧೦೮

ವಿನಾ ಹಿ ಪ್ರಾಕ್ತನಂ ಕರ್ಮ ನ ದಾತಾ ಕೋಽಪಿ ಕಸ್ಯಚಿತ್ ।
ಆಗರ್ಭಾಜ್ಜಂತುರಶ್ನಾತಿ ಪೂರ್ವಕರ್ಮತರೋಃ ಫಲಮ್ ॥ ೧೦೯

ಇತ್ಯುಕ್ತೇ ಸ ಭಿಷಕ್ ತೇನ ರಾಜ್ಞಾ ದೃಷ್ಟ್ವಾ ತಥೈವ ತತ್ ।
ಅಸಂತೋಷಂ ಪುನರ್ನೈವ ತತ್ಸೇವಾಸುಖಿತೋಽಭ್ಯಗಾತ್ ॥ ೧೧೦

ಸೋಽಪಿ ರಾಜಾಜರೋ ಜಾತಿಸ್ಮರಸ್ತಂ ಭಿಷಜಂ ತತಃ ।
ಸಂಮಾನ್ಯಾರ್ಥಪ್ರದಾನೇನ ಯಥೋಚಿತಮುದಾರಧೀಃ ॥ ೧೧೧

೧೧೨. ಮತ್ತು ನೀತಿಯಿಂದ ಗೆದ್ದ ಪೂರ್ವಪುಣ್ಯದಿಂದ ದೊರಕಿದ ಭೂಮಿಯನ್ನು ನಿರಾತಂಕವಾಗಿ, ಅಂತಃಪುರಸ್ತ್ರೀಯರು ಹಾಗೂ ಗೆಳೆಯರೊಂದಿಗೆ ಅನುಭವಿಸುತ್ತಾ ಸುಖವಾಗಿದ್ದನು.

೧೧೩. ಪ್ರಭುವೇ ! ಹೀಗೆ ಈ ಲೋಕದಲ್ಲಿ ಎಲ್ಲ ಜೀವಿಗಳಿಗೂ ಯಾವಾಗಲೂ ಹೀಗೆಯೇ ಆಗುವುದು. ಎಲ್ಲ ಜೀವಿಗಳ ಶುಭಾಶುಭಗಳೂ ಹಿಂದಿನ ಜನ್ಮದಲ್ಲಿ ಗಳಿಸಿದ ಕರ್ಮಗಳ ಫಲವೇ.

೧೧೪. ಅಂತೆಯೇ ನೀನೂ ಸಹ ನಮ್ಮ ಪೂರ್ವಜನ್ಮಾರ್ಜಿತ ರಾಜನೆಂದೇ ಭಾವಿಸಿದ್ದೇನೆ. ಇಲ್ಲದಿದ್ದರೆ ಇಷ್ಟೆಲ್ಲ ಜನರಿರುವಾಗ ನೀನು ನನ್ನಲ್ಲೇ ಪ್ರಸನ್ನನಾಗಿರುವುದು ಹೇಗೆ ?

೧೧೫ ಹೀಗೆ ಅಪೂರ್ವವೂ ರಮಣೀಯವೂ ವಿಚಿತ್ರವೂ ಆದ ಕಥೆಯನ್ನು ತಪಂತಕನ ಬಾಯಿಂದ ಪತ್ನೀ ಸಮೇತನಾಗಿ ಚೆನ್ನಾಗಿ ಕೇಳಿದ ನರವಾಹನದತ್ತನು ಸ್ನಾನಮಾಡಲು ಅಲ್ಲಿಂದ ಎದ್ದನು.

---

ಅಂತಃಪುರೈಃ ಸುಹೃದ್ಭಿಶ್ಚ ಸಾಕಂ ನಯಜಿತಾಂ ಮಹೀಮ್ ।
ಭುಂಜಾನಃ ಸುಕೃತಪ್ರಾಪ್ತಾಂ ಸುಖಮಾಸ್ತಾಪಕಂಟಕಾಮ್ ॥ ೧೧೨

ಏವಂ ಭವತಿ ಲೋಕೇಽಸ್ಮಿನ್ ದೇವ ಸರ್ವಸ್ಯ ಸರ್ವದಾ ।
ಪ್ರಾಕ್ಕರ್ಮೋಪಾರ್ಜಿತಂ ಜಂತೋಃ ಸರ್ವಮೇವ ಶುಭಾಶುಭಮ್ ॥ ೧೧೩

ತಸ್ಮಾತ್ತ್ವಮಪಿ ನಃ ಸ್ವಾಮೀ ಮನ್ಯೇ ಜನ್ಮಾಂತರಾರ್ಜಿತಃ ।
ಸತ್ಸ್ವನ್ಯೇಷ್ವೇವಮಸ್ಮಾಕಂ ಪ್ರಸನ್ನೋಽಸ್ಯನ್ಯಥಾ ಕಥಮ್ ॥ ೧೧೪

ಇತ್ಯಪೂರ್ವರಮಣೀಯವಿಚಿತ್ರಾಂ
ಕಾಂತಯಾ ಸಹ ತಪಂತಕವಕ್ತ್ರಾತ್ ।
ಸಂನಿಶಮ್ಯ ಸ ಕಥಾಮುದತಿಷ್ಠತ್
ಸ್ನಾತುಮತ್ರ ನರವಾಹನದತ್ತಃ ॥ ೧೧೫

೧೧೬ ಸ್ನಾನ ಮಾಡಿ ತಂದೆಯಾದ ವತ್ಸರಾಜನ ಬಳಿಗೆ ಹೋಗಿ, ತಾಯಿಯ ಕಣ್ಣುಗಳಿಂದ ಮತ್ತೆ ಮತ್ತೆ (ಆನಂದ ಬಾಷ್ಪವೆಂಬ) ಅಮೃತದ ಮಳೆಯನ್ನು ಹರಿಸಿ, ಅವರಿಬ್ಬರ ಜೊತೆ ತನ್ನ ಮಡದಿಯೊಂದಿಗೆ ಊಟಮಾಡಿ, ಮಂತ್ರಿಗಳೊಂದಿಗೆ ಮಧುಪಾನ ಇತ್ಯಾದಿಗಳಿಂದ ಹಗಲನ್ನೂ ಅನಂತರ ರಾತ್ರಿಯನ್ನೂ ಸುಖವಾಗಿ ಕಳೆದನು.

ಮಹಾಕವಿ ಸೋಮದೇವಭಟ್ಟನು ವಿರಚಿಸಿದ
ಕಥಾಸರಿತ್ಸಾಗರದ ರತ್ನಪ್ರಭಾಲಂಬಕದಲ್ಲಿ
ಆರನೆಯ ತರಂಗವು ಮುಗಿಯಿತು.

---

ಕೃತಸ್ನಾನೋ ಗತ್ವಾ ನಿಕಟಮಥ ವತ್ಸೇಶನೃಪತೇಃ
ಪಿತುರ್ಮುಂಚನ್ಮಾತುರ್ಮುಹುರಮೃತವರ್ಷಂ ನಯನಯೋಃ ।
ಕೃತಾಹಾರಸ್ತಾಭ್ಯಾಂ ಸಹ ಸದಯಿತೋ ಮಂತ್ರಿಸಹಿತಃ
ಸುಖೈರಾಪಾನಾದ್ಯೈರ್ದಿನಮನಯದೇತಾಂ ಚ ರಜನೀಮ್ ॥
೧೧೬

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ
ಕಥಾಸರಿತ್ಸಾಗರೇ
ರತ್ನಪ್ರಭಾಲಂಬಕೇ ಷಷ್ಠಸ್ತರಂಗಃ ।

---

## ಏಳನೆಯ ತರಂಗ

೧–೨. ಒಂದು ದಿನ ನರವಾಹನದತ್ತನು ರತ್ನಪ್ರಭೆಯೊಂದಿಗೆ ಆಕೆಯ ವಾಸಗೃಹದಲ್ಲಿ ಮಂತ್ರಿಗಳ ಜೊತೆ ಲೋಕಾಭಿರಾಮವಾಗಿ ಮಾತನಾಡುತ್ತಾ ಇದ್ದನು. ಆಗ ಆ ಮನೆಯ ಹೊರಗಡೆ ಅಂಗಳದಲ್ಲಿ ಇದ್ದಕ್ಕಿದ್ದಂತೆ ಯಾರೋ ಮನುಷ್ಯ ಅಳುತ್ತಿರುವಂತೆ ಧ್ವನಿ ಕೇಳಿಸಿತು.

೩. ಇದೇನು ಹೀಗೆ ಎಂದು ಯಾರೋ ಕೇಳಿದಾಗ ಚೇಟಿಯರು ಬಂದು "ಪ್ರಭುವೇ, ಕಂಚುಕಿಯಾದ ಧರ್ಮಗಿರಿಯು ಅಳುತ್ತಿದ್ದಾನೆ' ಎಂದು ಹೇಳಿದರು.

೪. "ತೀರ್ಥಯಾತ್ರೆಗೆ ಹೋಗಿದ್ದ ಇವನ ಸೋದರನು ಬೇರಾವುದೋ ಊರಿನಲ್ಲಿ ದಿವಂಗತನಾದನು' ಎಂದು ಇಲ್ಲಿಗೆ ಬಂದ ಮೂರ್ಖ ಮಿತ್ರನೊಬ್ಬನು ಹೇಳಿದನು.

೫. ಅದರಿಂದ ತಾನು ಅರಮನೆಯಲ್ಲಿ ಇದ್ದೇನೆ ಎಂಬುದನ್ನೂ ಮರೆತು ಶೋಕದಿಂದ ಮೂಢನಾಗಿ ಅಳುತ್ತಿದ್ದ ಇವನನ್ನು ಹೊರಗಡೆಗೆ ಒಯ್ದ ಜನಗಳು, ಇದೀಗ ಮನೆಗೆ ತಲುಪಿಸಿದ್ದಾರೆ.

---

## ಸಪ್ತಮಸ್ತರಂಗಃ

ತತಃ ಸ ರತ್ನಪ್ರಭಯಾ ಸಮಂ ತದ್ವಾಸವೇಶ್ಮನಿ ।
ಸ್ಥಿತೋಽನ್ಯೇದ್ಯುಃ ಕಥಾಃ ಕುರ್ವಂಸ್ತಾಸ್ತಾಃ ಸ ಸಚಿವೈಃ ಸಹ ॥ ೧
ನರವಾಹನದತ್ತೋಽತ್ರ ಮಂದಿರಪ್ರಾಂಗಣೇ ಬಹಿಃ ।
ಅಕಸ್ಮಾತ್ ಪುರುಷಸ್ಯೇಹ ಶುಶ್ರಾವಾಕ್ರಂದಿತಧ್ವನಿಮ್ ॥ ೨
ಕಿಮೇವಮಿತಿ ಕಸ್ಮಿಂಶ್ಚಿತ್ ಪೃಚ್ಛತ್ಯಾಗತ್ಯ ಚೇಟಿಕಾಃ ।
ಅಬ್ರುವನ್ ಕಂಚುಕೀ ಕ್ರಂದತ್ಯೇಷ ಧರ್ಮಗಿರಿಃ ಪ್ರಭೋ ॥ ೩
ಇಹಾಗತ್ಯ ಹಿ ಮೂರ್ಖೇಣ ಮಿತ್ರೇಣ ಕಥಿತೋಽಧುನಾ ।
ತೀರ್ಥಯಾತ್ರಾಗತೋಽಮುಷ್ಯ ಭ್ರಾತಾ ದೇಶಾಂತರೇ ಮೃತಃ ॥ ೪
ತೇನ ರಾಜಕುಲಸ್ಥೋಽಸ್ಮೀತ್ಯಸ್ಮರನ್ ಶೋಕಮೋಹಿತಃ ।
ಸಾಕ್ರಂದಃ ಸನ್ ಗೃಹಂ ನೀತಃ ಸಂಪ್ರತ್ಯೇಷ ಬಹಿರ್ಜನೈಃ ॥ ೫

೬ ಅದನ್ನು ಕೇಳಿ ಅನುಕಂಪದಿಂದ ಯುವರಾಜನು ದುಃಖಿತನಾಗಿರಲು ರಾಣಿ ರತ್ನಪ್ರಭೆಯು ವಿಷಾದಗೊಂಡವಳಂತೆ ಹೇಳಿದಳು:

೭ "ಪ್ರೀತಿಯ ಬಂಧುಗಳ ವಿಯೋಗದಿಂದ ಉಂಟಾಗುವ ದುಃಖವು ಸಹಿಸಲು ಕಷ್ಟವಾದುದು ಹಾಗೂ ಕಷ್ಟಕರ. ಬ್ರಹ್ಮನು ಜನರನ್ನು ಮುಪ್ಪು ಸಾವುಗಳಿಲ್ಲದವರನ್ನಾಗಿ ಏಕೆ ಮಾಡಲಿಲ್ಲವೋ?'

೮ ರಾಣಿಯ ಈ ಮಾತನ್ನು ಕೇಳಿ ಅವಳಿಗೆ ಮರುಭೂತಿಯು ಹೇಳಿದನು : 'ರಾಣಿಯೇ, ಮನುಷ್ಯರಲ್ಲಿ ಇದು ಹೇಗೆ ಸಾಧ್ಯ ? ಆದರೂ ಈ ಕಥೆಯನ್ನು ಕೇಳು :

೯–೧೦. ಹಿಂದೆ ಚಿರಾಯುವೆಂಬ ನಗರದಲ್ಲಿ, ಸಕಲ ಸಂಪತ್ತುಗಳಿಗೆ ಧ್ವಜಪ್ರಾಯನಾಗಿದ್ದ ಚಿರಾಯುವೆಂಬ ರಾಜನು ಚಿರಾಯುವಾಗಿಯೇ ಇದ್ದನು. ಅವನಿಗೆ ಬೋಧಿಸತ್ತ್ವನ ಅಂಶದಿಂದ ಹುಟ್ಟಿದ್ದ ನಾಗಾರ್ಜುನನೆಂಬ ಮಂತ್ರಿಯಿದ್ದನು. ಅವನು ದಯಾಳುವೂ ದಾನಶೀಲನೂ ವಿಜ್ಞಾನವನ್ನು ಬಲ್ಲವನೂ ಆಗಿದ್ದನು.

೧೧. ಸಕಲ ಔಷಧಿಗಳ ಉಪಾಯವನ್ನು ಬಲ್ಲ ಅವನು ರಸಾಯನಗಳ ತಯಾರಿಕೆಯಲ್ಲಿ ಯಶಸ್ಸು ಗಳಿಸಿ ತನ್ನನ್ನೂ ಮತ್ತು ರಾಜನನ್ನೂ ಮುಪ್ಪಿಲ್ಲದ ಚಿರಂಜೀವಿಗಳನ್ನಾಗಿ ಮಾಡಿದ್ದನು.

೧೨. ಒಮ್ಮೆ ನಾಗಾರ್ಜುನ ಮಂತ್ರಿಯ ಮಕ್ಕಳಲ್ಲೆಲ್ಲ ತುಂಬ ಪ್ರೀತಿಪಾತ್ರನಾದ ಒಬ್ಬ ಮಗನು, ವಯಸ್ಸಿನಲ್ಲಿ ಚಿಕ್ಕವನಾಗಿದ್ದರೂ ತೀರಿಕೊಂಡನು.

---

ತತ್ಶ್ರುತ್ವಾ ಯುವರಾಜೇಽಸ್ಮಿನ್ ಜಾತದುಃಖೇಽ ನುಕಂಪಯಾ ।
ರಾಜ್ಞೀ ರತ್ನಪ್ರಭಾ ತತ್ರ ವಿಷಣ್ಣೇವ ಜಗಾದ ಸಾ ॥ ೬

ಪ್ರಿಯಬಂಧುವಿಯೋಗೋತ್ಥಮಹೋ ದುಃಖಂ ದುರುತ್ಸಹಮ್ ।
ಕಷ್ಟಂ ಕಿಂ ನ ಕೃತೋ ಧಾತ್ರಾ ಜನೋಽಯಮಜರಾಮರಃ ॥ ೭

ಇತಿ ರಾಜ್ಞೀವಚಃ ಶ್ರುತ್ವಾ ಮರುಭೂತಿರುವಾಚ ತಾಮ್ ।
ಮರ್ತ್ಯೇಷ್ವೇತತ್ ಕುತೋ ದೇವಿ ತಥಾಹೀಮಂ ಕಥಾಂ ಶೃಣು ॥ ೮

ಚಿರಾಯುರ್ನಾಮ್ನಿ ನಗರೇ ಚಿರಾಯುರ್ನಾಮ ಭೂಪತಿಃ ।
ಪೂರ್ವಂ ಚಿರಾಯುರೇವಾಸೀತ್ ಕೇತನಂ ಸರ್ವಸಂಪದಾಮ್ ॥ ೯

ತಸ್ಯ ನಾಗಾರ್ಜುನೋ ನಾಮ ಬೋಧಿಸತ್ತ್ವಾಂಶಸಂಭವಃ ।
ದಯಾಲುರ್ದಾನಶೀಲಶ್ಚ ಮಂತ್ರೀ ವಿಜ್ಞಾನವಾನಭೂತ್ ॥ ೧೦

ಯಃ ಸರ್ವೌಷಧಿಯುಕ್ತಿಜ್ಞಶ್ಚಕ್ರೇ ಸಿದ್ಧರಸಾಯನಃ ।
ಆತ್ಮಾನಂ ತಂ ಚ ರಾಜಾನಂ ವಿಜರಂ ಚಿರಜೀವಿತಮ್ ॥ ೧೧

ಕದಾಚಿನ್ಮಂತ್ರಿಣಸ್ತಸ್ಯ ಬಾಲಃ ಪಂಚತ್ವಮಾಯಯೌ ।
ನಾಗಾರ್ಜುನಸ್ಯ ಪುತ್ರೇಷು ಸರ್ವೇಷು ದಯಿತಃ ಸುತಃ ॥ ೧೨

೧೩. ಅದರಿಂದ ಪುತ್ರಸಂತಾಪವನ್ನು ಅನುಭವಿಸಿದ ಅವನು ತನ್ನ ತಪಸ್ಸು ಹಾಗೂ ದಾನಗಳ ಪ್ರಭಾವದಿಂದ ವಸ್ತುಗಳನ್ನು ಸೇರಿಸಿ, ಮನುಷ್ಯರ ಮೃತ್ಯುವನ್ನು ಶಮನಗೊಳಿಸಲು, ಅಮೃತವನ್ನು ಸಿದ್ಧಪಡಿಸಿದನು.

೧೪. ಉಳಿದ ಒಂದೇ ಒಂದು ಔಷಧಿಯನ್ನು ಮಿಶ್ರಣಮಾಡಲು ತಕ್ಕ ಕಾಲಕ್ಕಾಗಿ ಕಾಯುತ್ತಿದ್ದಾಗ ಅದನ್ನು ಇಂದ್ರನು ಹೇಗೋ ತಿಳಿದುಕೊಂಡನು.

೧೫. ಇಂದ್ರನು ಇತರ ದೇವತೆಗಳೊಂದಿಗೆ ವಿಚಾರಮಾಡಿ ಅಶ್ವಿನೀದೇವತೆಗಳಿಗೆ ಹೀಗೆ ಅಪ್ಪಣೆ ಮಾಡಿದನು : "ನೀವು ಭೂಮಿಗೆ ಹೋಗಿ ನನ್ನ ಮಾತಿನಂತೆ ನಾಗಾರ್ಜುನನಿಗೆ ಹೇಳಿರಿ.

೧೬. ಮಂತ್ರಿಯೇ ಆಗಿದ್ದರೂ ನೀನು ನೀತಿ ವಿರುದ್ಧವಾಗಿ ಇದೇನು ಮಾಡಲು ಆರಂಭಿಸಿರುವೆ. ನೀನೇನಾದರೂ ಈಗ ಪ್ರಜಾಪತಿಯನ್ನು ಗೆಲ್ಲಲು ಹೊರಟಿರುವೆಯಾ ?

೧೭. ಸಾಯುವುದು ಮನುಷ್ಯರ ಧರ್ಮ. ಹಾಗೆ ನಿರ್ಮಿತರಾಗಿರುವ ಅವರನ್ನು ಅಮೃತವನ್ನು ಸಿದ್ಧಗೊಳಿಸಿ ಸಾವಿಲ್ಲದವರನ್ನಾಗಿ ಮಾಡಲು ಹವಣಿಸಿದ್ದೀಯೆ.

೧೮. ಹೀಗೆ ಮಾಡಿಬಿಟ್ಟರೆ ದೇವತೆಗಳಿಗೂ ಮನುಷ್ಯರಿಗೂ ವಿಶೇಷವೇನು ಉಳಿದೀತು ? ಯಜ್ಞದಿಂದ ಪೂಜಿಸಲ್ಪಡಬೇಕಾದವರು ಯಜ್ಞಮಾಡುವವರು ಇಬ್ಬರೂ ಇಲ್ಲದೆ ಜಗತ್ತಿನ ಅಸ್ತಿತ್ವಕ್ಕೇ ಧಕ್ಕೆ ಆದೀತು.

---

ಸ ತೇನ ದೃಷ್ಟಸಂತಾಪೋ ಮರ್ತ್ಯಾನಾಂ ಮೃತ್ಯುಶಾಂತಯೇ ।
ಅಮೃತಂ ಸಂದಧೇ ದ್ರವ್ಯೈಸ್ತಪೋದಾನಪ್ರಭಾವತಃ ॥ ೧೩

ಶೇಷೌಷಧಸ್ಯತ್ವೇಕಸ್ಯ ಕಾಲಯೋಗಂ ಸ ಮೇಲನೇ ।
ಯಾವತ್ ಪ್ರತೀಕ್ಷತೇ ತಾವದಿಂದ್ರೇಣ ತದಬುಧ್ಯತ ॥ ೧೪

ಇಂದ್ರಃ ಸಮಾಮಂತ್ರ್ಯ ಸುರೈರಶ್ವಿನಾವೇವಮಾದಿಶತ್ ।
ಗತ್ವಾ ನಾಗಾರ್ಜುನಂ ಬ್ರೂತಮಿದಂ ಮದ್ವಚನಾದ್ಭುವಿ ॥ ೧೫

ಕೋಽಯಂ ಕರ್ತುಮಿಹಾರಬ್ಧೋ ಮಂತ್ರಿಣಾಪ್ಯನಯಸ್ತ್ವಯಾ ।
ಕಿಂ ತ್ವಂ ಪ್ರಜಾಪತಿಂ ಜೇತುಮುದ್ಯತೋ ಬತ ಸಾಂಪ್ರತಮ್ ॥ ೧೬

ಮರ್ತ್ಯಾ ಮರಣಧರ್ಮಾಣಸ್ತೇನ ಯೇ ಕಿಲ ನಿರ್ಮಿತಾಃ ।
ಸಾಧಯಿತ್ವಾಮೃತಂ ಯತ್ತಾನಮರಾನ್ ಕರ್ತುಮಿಚ್ಛಸಿ ॥ ೧೭

ಏವಂ ಕೃತೇ ವಿಶೇಷೋ ಹಿ ಕಃ ಸ್ಯಾದ್ದೇವಮನುಷ್ಯಯೋಃ ।
ಯಷ್ಟವ್ಯಯಾಜಕಾಭಾವಾದ್ಭಜ್ಯತೇ ಚ ಜಗತ್‌ಸ್ಥಿತಿಃ ॥ ೧೮

೧೯. ಆದ್ದರಿಂದ ನಮ್ಮ ಮಾತಿನಂತೆ ಈ ಅಮೃತ ತಯಾರಿಕೆಯನ್ನು ಬಿಟ್ಟುಬಿಡು. ಇಲ್ಲದಿದ್ದರೆ ದೇವತೆಗಳು ಕೋಪಗೊಂಡು ನಿನಗೆ ಶಾಪನೀಡುವುದು ನಿಶ್ಚಿತ.

೨೦. ಯಾರ ಶೋಕದಿಂದ ನಿನ್ನ ಈ ಪ್ರಯತ್ನವೋ ಆ ನಿನ್ನ ಮಗನು ಸ್ವರ್ಗದಲ್ಲಿ ಇದ್ದಾನೆ' ಹೀಗೆ ಸಂದೇಶ ನೀಡಿ ಇಂದ್ರನು ಅಶ್ವಿನೀ ದೇವತೆಗಳಿಬ್ಬರನ್ನೂ ಕಳಿಸಿಕೊಟ್ಟನು.

೨೧. ಅವರು ಬಂದದ್ದರಿಂದ ಸಂತುಷ್ಟನಾದ ನಾಗಾರ್ಜುನನು ಸಮುಚಿತ ಗೌರವವನ್ನು ನೀಡಿದನು. ಅವರು ಆತನಿಗೆ ಇಂದ್ರನ ಸಂದೇಶವನ್ನು ಹೇಳಿದರು.

೨೨. ಅವನ ಮಗನು ಸ್ವರ್ಗದಲ್ಲಿ ದೇವತೆಗಳಿಗೆ ಸಮವಾಗಿ ಇರುವುದನ್ನೂ ತಿಳಿಸಿದರು. ಆಗ ನಾಗಾರ್ಜುನನು ದುಃಖಗೊಂಡು ಹೀಗೆ ಆಲೋಚನೆ ಮಾಡಿದನು.

೨೩. ಇಂದ್ರನ ಮಾತನ್ನು ನಡೆಸಿಕೊಡದೇ ಇದ್ದರೆ ದೇವತೆಗಳ ವಿಷಯ ಒತ್ತಟ್ಟಿಗಿರಲಿ, ಈ ಅಶ್ವಿನಿಗಳೇ ನನಗೆ ಶಾಪವನ್ನು ಕೊಟ್ಟಾರು.

೨೪. ಆದ್ದರಿಂದ ಈ ಅಮೃತವು ಅಂತಿರಲಿ. ನನ್ನ ಆಸೆಯಂತೂ ನೆರವೇರಿದೆ. ಪೂರ್ವಪುಣ್ಯದಿಂದ ನನ್ನ ಮಗನು ಸದ್ಗತಿಯನ್ನು ಪಡೆದನು. ಆದ್ದರಿಂದ ಶೋಕಿಸಬೇಕಾಗಿಲ್ಲ

೨೫. ಹೀಗೆ ಆಲೋಚಿಸಿ ನಾಗಾರ್ಜುನನು ಅಶ್ವಿನೀ ದೇವತೆಗಳಿಗೆ ಹೇಳಿದನು. "ನಾನು ಇಂದ್ರನ ಅಪ್ಪಣೆಯನ್ನು ಪಾಲಿಸಿದ್ದೇನೆ. ಅಮೃತ ತಯಾರಿಸುವುದನ್ನು ನಿಲ್ಲಿಸುತ್ತೇನೆ.

---

ತದಸ್ಮದ್ವಚನಾದೇತತ್ ಸಂಹರಾಮೃತಸಾಧನಮ್ ।
ಅನ್ಯಥಾ ಕುಪಿತಾ ದೇವಾಃ ಶಾಪಂ ದಾಸ್ಯಂತಿ ತೇ ಧ್ರುವಮ್ ॥ ೧೯
ಯಚ್ಛೋಕಾದೇಷ ಯತ್ನಸ್ತೇ ಸ ಸ್ವರ್ಗೇ ತ್ವತ್ಸುತಃ ಸ್ಥಿತಃ ।
ಇತಿ ಸಂದಿಶ್ಯ ಶಕ್ರಸ್ತೌ ಪ್ರಜಿಘಾಯಾಶ್ವಿನಾವುಭೌ ॥ ೨೦
ತೌ ಚಾಗತ್ಯ ಗೃಹೀತಾರ್ಘೌ ತದಾಗಮನತೋಷಿಣೇ ।
ಊಚತುಃ ಶಕ್ರಸಂದೇಶಂ ತಸ್ಮೈ ನಾಗಾರ್ಜುನಾಯ ತಮ್ ॥ ೨೧
ಪುತ್ರಂ ಜಗದತುಶ್ಚಾಸ್ಯ ದಿವಿ ದೇವೈಃ ಸಮಂ ಸ್ಥಿತಿಮ್ ।
ತತೋ ನಾಗಾರ್ಜುನಃ ಸೋಽತ್ರ ವಿಷಣ್ಣಃ ಸನ್ನಚಿಂತಯತ್ ॥ ೨೨
ನ ಕರೋಮೀಂದ್ರವಾಕ್ಯಂ ಚೇತ್ ದೇವಾಸ್ತಾವದಾಸತಾಮ್ ।
ಇಮಾವೇವ ನ ಕಿಂ ಶಾಪಮಶ್ವಿನೌ ಮೇ ಪ್ರಯಚ್ಛತಃ ॥ ೨೩
ತದೇತದಾಸ್ತಾಮಮೃತಂ ನ ಸಿದ್ಧೋ ಮೇ ಮನೋರಥಃ ।
ಪುತ್ರಶ್ಚ ಮೇ ಪ್ರಾಕ್ ಸುಕೃತೈರಶೋಚ್ಯಾಂ ಸ ಗತೋ ಗತಿಮ್ ॥ ೨೪
ಇತ್ಯಾಲೋಚ್ಯಾಶ್ವಿನೌ ದೇವೌ ಸೋಽತ್ರ ನಾಗಾರ್ಜುನೋಽಬ್ರವೀತ್ ।
ಅನುಷ್ಠಿತಾ ಮಯೇಂದ್ರಾಜ್ಞಾ ಸಂಹರಾಮ್ಯಮೃತಕ್ರಿಯಾಮ್ ॥ ೨೫

೨೬–೨೮. ಐದು ದಿನಗಳಲ್ಲಿ ಅಮೃತವು ಸಿದ್ಧವಾಗಿದ್ದರೆ ನೀವೂ ಬರದೇ ಇದ್ದರೆ, ನಾನು ಭೂಮಿಯನ್ನು ಅಜರಾಮರವನ್ನಾಗಿ ಮಾಡಿಬಿಡುತ್ತಿದ್ದೆ'. ಹೀಗೆ ಹೇಳಿ ಅವರ ಸಮಕ್ಷಮದಲ್ಲಿ ನೆಲವನ್ನು ಅಗೆದು ಹೆಚ್ಚು ಕಡಮೆ ಸಿದ್ಧವಾಗಿಬಿಟ್ಟಿದ್ದ ಅಮೃತವನ್ನು ನಾಗಾರ್ಜುನನು ಅದರಲ್ಲಿ ಹಾಕಿದನು. ಅನಂತರ ಅಶ್ವಿನಿಗಳು ನಾಗಾರ್ಜುನನಿಂದ ಬೀಳ್ಕೊಂಡು ಸ್ವರ್ಗಕ್ಕೆ ಹೋಗಿ ಇಂದ್ರನಿಗೆ ಕೆಲಸವು ಮುಗಿಯಿತೆಂದು ಹೇಳಿದರು. ಇಂದ್ರನು ಸಂತುಷ್ಟನಾದನು.

೨೯. ಆ ವೇಳೆಗೆ ನಾಗಾರ್ಜುನನ ಒಡೆಯನಾದ ರಾಜ ಚಿರಾಯುವು ತನ್ನ ಮಗನಾದ ಜೀವಹರನೆಂಬುವನಿಗೆ ಯುವರಾಜನಾಗಿ ಪಟ್ಟಕಟ್ಟಿದನು.

೩೦. ಪಟ್ಟಾಭಿಷಿಕ್ತನಾದ ಅವನು ತಾಯಿಗೆ ನಮಸ್ಕರಿಸಲು ಬಂದಾಗ, ರಾಣಿ ಧನಪರೆ ಎಂಬುವಳು ಮಗನು ಹರ್ಷದಿಂದ ಇರುವುದನ್ನು ನೋಡಿ ಹೇಳಿದಳು:

೩೧. "ಎಲೈ ಮಗನೇ, ಈ ಯೌವರಾಜ್ಯವನ್ನು ಪಡೆದು ನೀನೇಕೆ ವ್ಯರ್ಥವಾಗಿ ಹರ್ಷ ಪಡುವೆ ? ರಾಜ್ಯಪ್ರಾಪ್ತಿಗೆ ಇದೇ ಕ್ರಮ. ಇದು ತಪಸ್ಸಿನಿಂದ ಬಂದದ್ದಲ್ಲ.

೩೨. ನಿನ್ನ ತಂದೆಯ ಅನೇಕ ಮಕ್ಕಳು ಯುವರಾಜರು ಆಗಿಹೋದರು. ರಾಜ್ಯವೂ ಯಾರಿಗೂ ದಕ್ಕಲಿಲ್ಲ. ಸಿಕ್ಕಿದ್ದು ಬರೀ ವಿಡಂಬನೆ ಅಷ್ಟೇ.

---

ಪಂಚಾಹೇನಾಮೃತೇ ಸಿದ್ಧೇ ಕೃತೈವೈಷಾಜರಾಮರಾ ।
ಮಯಾಭವಿಷ್ಯತ್ ಪೃಥಿವೀ ಯುವಾಂ ಚೇನ್ನಾಗಮಿಷ್ಯತಮ್ ॥ ೨೬

ಇತ್ಯುಕ್ತ್ವಾ ತತ್ಸಮಕ್ಷಂ ತತ್ತದ್ವಾಕ್ಯಾನ್ನಿಚಖಾನ ಸಃ ।
ಧರಣ್ಯಾಮಮೃತಂ ಸಿದ್ಧಪ್ರಾಯಂ ನಾಗಾರ್ಜುನಸ್ತದಾ ॥ ೨೭

ತತೋಽಶ್ವಿನೌ ತಮಾಪೃಚ್ಛ್ಯ ಗತ್ವಾ ಶಕ್ರಾಯ ತದ್ದಿವಿ ।
ಆಚಖ್ಯತುಃ ಕೃತಂ ಕಾರ್ಯಂ ನನಂದಾಥ ಚ ದೇವರಾಟ್ ॥ ೨೮

ತಾವಚ್ಚಾತ್ರ ಚಿರಾಯುಃ ಸ ರಾಜಾ ನಾಗಾರ್ಜುನಪ್ರಭುಃ ।
ಪುತ್ರಂ ಜೀವಹರಂ ನಾಮ ಯೌವರಾಜ್ಯೇಽಭಿಷಿಕ್ತವಾನ್ ॥ ೨೯

ಅಭಿಷಿಕ್ತಂ ಚ ತಂ ಮಾತಾ ಪ್ರಣಾಮಾರ್ಥಮುಪಾಗತಮ್ ।
ರಾಜ್ಞೀ ಧನಪರಾ ನಾಮ ಹೃಷ್ಟಂ ದೃಷ್ಟ್ವಾಬ್ರವೀತ್ ಸುತಮ್ ॥ ೩೦

ಯೌವರಾಜ್ಯಮಿದಂ ಪ್ರಾಪ್ಯ ಪುತ್ರ ಹೃಷ್ಯಸಿ ಕಿಂ ಮೃಷಾ ।
ರಾಜ್ಯಪ್ರಾಪ್ತ್ಯೈ ಕ್ರಮೋಹ್ಯೇಷ ತಪಸಾ ಚ ನ ವಿದ್ಯತೇ ॥ ೩೧

ಯುವರಾಜಾ ಹಿ ಬಹವೋ ಗತಾಃ ಪುತ್ರ ಪಿತುಸ್ತವ ।
ನ ರಾಜ್ಯಂ ಕೇನಚಿತ್ ಪ್ರಾಪ್ತಂ ಪ್ರಾಪ್ತಂ ಸರ್ವೈರ್ವಿಡಂಬನಮ್ ॥ ೩೨

೩೩. ನಾಗಾರ್ಜುನನು ಈ ರಾಜನಿಗೆ ರಸಾಯನವನ್ನು ಕೊಟ್ಟಿದ್ದಾನೆ. ಅದರಿಂದ ಈತನು ಶತಮಾನದ ಆಯಸ್ಸನ್ನು ಪಡೆದಿದ್ದಾನೆ. ಇದು ಎಂಟನೆಯದು.

೩೪. ಯಾರಿಗೆ ಗೊತ್ತು ? ಇನ್ನು ಮುಂದೆ ಎಷ್ಟನ್ನು ಹೀಗೆಯೇ ಪಡೆಯುವನೋ ? ಅಲ್ಪಾಯುಗಳುಳ್ಳ ಇವನ ಮಕ್ಕಳನ್ನೆಲ್ಲ ಕೇವಲ ಯುವ ರಾಜನನ್ನಾಗಿ ಮಾಡಿದನಷ್ಟೆ'

೩೫. ಇದನ್ನು ಕೇಳಿ ಖಿನ್ನನಾದ ಮಗನಿಗೆ ಅವಳು ಮತ್ತೆ ಹೇಳಿದಳು. "ನಿನಗೆ ರಾಜ್ಯವು ಬೇಕೇ ಬೇಕಿದ್ದರೆ ಆಗ ಈ ಉಪಾಯವನ್ನು ಮಾಡು.

೩೬. ಈ ಮಂತ್ರಿ ನಾಗಾರ್ಜುನನು ಪ್ರತಿದಿನ ಆಹ್ನಿಕವನ್ನು ಮುಗಿಸಿ ಊಟಮಾಡುವ ವೇಳೆಯಲ್ಲಿ ದಾನ ಮಾಡಲು ಹೀಗೆ ಘೋಷಣೆ ಮಾಡುತ್ತಾನೆ.

೩೭. "ಯಾರಿಗಾದರೂ ಏನಾದರೂ ಬೇಕಾಗಿದೆಯೇ ? ಅಂತಹ ಬೇಡುವವರಿಗೆ ಏನನ್ನು ನೀಡಲಿ ?' ನೀನು ಆಗ ಅಲ್ಲಿಗೆ ಹೋಗಿ "ನಿನ್ನ ತಲೆಯನ್ನು ನನಗೆ ನೀಡು' ಎಂದು ಬೇಗನೆ ಹೇಳು.

೩೮. ಆಡಿದ ಮಾತಿನಂತೆ ನಡೆಯುವ ಆತನು ಆಗ ತಲೆ ಕತ್ತರಿಸಿಕೊಂಡು ಸಾಯುತ್ತಾನೆ. ಈ ರಾಜನು ಆಗ ಶೋಕದಿಂದ ಸತ್ತುಹೋಗಬಹುದು ಅಥವಾ ವನವಾಸಕ್ಕೆ ಬೇಕಾದರೂ ಹೋಗಬಹುದು.

---

ನಾಗಾರ್ಜುನೇನ ದತ್ತಂ ಹಿ ತದ್ರಾಜ್ಞೋಽಸ್ಮೈ ರಸಾಯನಮ್ ।
ವಯೋ ವರ್ಷಶತಂ ಯೇನ ಪ್ರಾಪ್ತಮಸ್ಯೇದಮಷ್ಟಮಮ್ ॥ ೩೩

ಕೋ ಜಾನಾತಿ ಕಿಯಂತ್ಯನ್ಯಾನ್ಯಪಿ ಪ್ರಾಪ್ಸ್ಯಂತಿ ಚ ಕ್ರಮಾತ್ ।
ಯುವರಾಜಾನ್ ನೃಪಸ್ಯಾಸ್ಯ ಕುರ್ವತೋಽಲ್ಪಾಯುಷಃ ಸುತಾನ್ ॥ ೩೪

ಏತತ್ ಶ್ರುತ್ವಾ ವಿಷಣ್ಣಂ ತಂ ಪುತ್ರಂ ಸಾ ಪುನರಬ್ರವೀತ್ ।
ಯದಿ ರಾಜ್ಯೇನ ತೇ ಕೃತ್ಯಂ ತದುಪಾಯಮಿಮಂ ಕುರು ॥ ೩೫

ಏಷ ನಾಗಾರ್ಜುನೋ ಮಂತ್ರೀ ಪ್ರತ್ಯಹಂ ವಿಹಿತಾಹ್ನಿಕಃ ।
ಆಹಾರಸಮಯೇ ದಾತಾ ಕರೋತ್ಯುದ್ಘೋಷಣಾಮಿಮಾಮ್ ॥ ೩೬

ಕೋಽರ್ಥೀ ಪ್ರಾರ್ಥಯತೇ ಕಃ ಕಿಂ ತಸ್ಮೈ ಕಿಂ ದೀಯತಾಮಿತಿ ।
ಸ್ವಶಿರೋ ಮೇ ಪ್ರಯಚ್ಛೇತಿ ತತ್ಕಾಲಂ ಬ್ರೂಹಿ ಗಚ್ಛ ತಮ್ ॥ ೩೭

ಸತ್ಯವಾಚಿ ತತಸ್ತಸ್ಮಿಂಶ್ಛಿನ್ನಮೂರ್ಧ್ನಿ ಮೃತೇ ನೃಪಃ ।
ತಚ್ಛೋಕಾತ್ ಪಂಚತಾಂ ಯಾಯಾದ್ವನಂ ವೈಷ ಸಮಾಶ್ರಯೇತ್ ॥ ೩೮

೩೯. ಆಮೇಲೆ ನಿನಗೆ ರಾಜ್ಯವು ಸಿಕ್ಕುತ್ತದೆ. ಇದಕ್ಕೆ ಬೇರೆ ಯಾವ ಉಪಾಯವೂ ನನಗೆ ತೋಚುತ್ತಿಲ್ಲ' ಎಂಬುದಾಗಿ ತಾಯಿಯ ಹೇಳಿದ ಮಾತನ್ನು ಕೇಳಿದ ರಾಜಪುತ್ರನು ಸಂತೋಷಗೊಂಡನು.

೪೦. ಆಗಲಿ ಎಂದು ಹಾಗೆಯೇ ಮಾಡಲು ನಿಶ್ಚಯಿಸಿದನು. ಅಯ್ಯೋ ! ರಾಜ್ಯದ ಮೇಲಣಪ್ರೀತಿಯು ಬಂಧುಗಳ ಮೇಲಣ ಪ್ರೀತಿಯನ್ನು ಮೀರಿರುತ್ತದೆಯಲ್ಲವೇ !

೪೧. ಆಮೇಲೆ ಒಂದು ದಿನ ರಾಜಕುಮಾರ ಜೀವಹರನು ನಾಗಾರ್ಜುನನ ಊಟದ ವೇಳೆಗೆ ಅವನ ಮನೆಗೆ ಸುಮ್ಮನೆ ಹೋದನು.

೪೨. "ಯಾರು ಏನನ್ನು ಬೇಡುವಿರಿ ?' ಎಂದು ಮುಂತಾಗಿ ಮಂತ್ರಿಯು ಹೇಳುತ್ತಿದ್ದಾಗ ಒಳಗೆ ಪ್ರವೇಶಿಸಿ ಅವನ ತಲೆಯನ್ನು ಬೇಡಿದನು.

೪೩. "ಏನಿದು ಆಶ್ಚರ್ಯ ! ಮಗನೇ, ತನ್ನ ತಲೆಯಿಂದ ನೀನೇನು ಮಾಡುವೆ ? ಇದು ಬರಿಯ ಮಾಂಸ ಮೂಳೆ ಕೂದಲುಗಳ ಗಂಟು. ಇದು ನಿನಗೆ ಯಾವ ಉಪಯೋಗಕ್ಕೆ ಬರುತ್ತದೆ ?

೪೪. ಆದರೂ ಇದರಿಂದ ನಿನಗೆ ಏನಾದರೂ ಆಗಬೇಕಿದ್ದರೆ ಕತ್ತರಿಸಿ ತೆಗೆದುಕೋ' ಎನ್ನುತ್ತಾ ನಾಗಾರ್ಜುನನು ಜೀವಹರನಿಗೆ ತನ್ನ ತಲೆಯನ್ನು ಹತ್ತಿರ ತಂದನು.

೪೫. ರಸಾಯನದ ಪ್ರಭಾವದಿಂದ ಅದು ಗಟ್ಟಿಯಾದ ಕಾರಣ ಬಹಳ ಹೊತ್ತು ಅದನ್ನು ಕತ್ತರಿಸುವಲ್ಲಿ ರಾಜಕುಮಾರನ ಅನೇಕ ಖಡ್ಗಗಳು ತುಂಡಾದವು.

---

ತತಃ ಪ್ರಾಪ್ಸ್ಯಸಿ ರಾಜ್ಯಂ ತ್ವಮುಪಾಯೋಽನ್ಯೋಽತ್ರ ನಾಸ್ತಿ ಮೇ ।
ಇತಿ ಮಾತುರ್ವಚಃ ಶ್ರುತ್ವಾ ರಾಜಪುತ್ರಸ್ತುತೋಷ ಸಃ ॥ ೩೯
ತಥೇತಿ ತದ್ವಿಧಾತುಂ ಚ ಚಕಾರೈವ ಸ ನಿಶ್ಚಯಮ್ ।
ಕಷ್ಟೋ ಹಿ ಬಾಂಧವಸ್ನೇಹಂ ರಾಜ್ಯಲೋಭೋಽತಿವರ್ತತೇ ॥ ೪೦
ಅಥ ರಾಜಸುತೋಽನ್ಯೇದ್ಯುಃ ಸ್ವೈರಂ ಜೀವಹರೋ ಯಯೌ ।
ತಸ್ಯ ಭೋಜನವೇಲಾಯಾಂ ಗೃಹಂ ನಾಗಾರ್ಜುನಸ್ಯ ಸಃ ॥ ೪೧
ಕಃ ಕಿಂ ಯಾಚತ ಇತ್ಯಾದಿ ತದಾ ತತ್ರ ಚ ಮಂತ್ರಿಣಮ್ ।
ವದಂತಂ ತಂ ಪ್ರವಿಶ್ಯೈವ ಸ ಮೂರ್ಧಾನಮಯಾಚತ ॥ ೪೨
ಆಶ್ಚರ್ಯಂ ವತ್ಸ ಶಿರಸಾ ಕಿಂ ಕರೋಷಿ ಮಮಾಮುನಾ ।
ಮಾಂಸಾಸ್ಥಿಕೇಶಸಂಘೋ ಹಿ ಕ್ವೋಪಯುಜ್ಯತ ಏಷ ತೇ ॥ ೪೩
ತಥಾಪ್ಯರ್ಥಸ್ತವಾನೇನ ಯದಿ ಛಿತ್ವಾ ಗೃಹಾಣ ತತ್ ।
ಇತ್ಯುಕ್ತ್ವೋಪಾನಯತ್ತಸ್ಮೈ ಸ ಚ ಮಂತ್ರೀ ಶಿರೋಧರಾಮ್ ॥ ೪೪
ರಸಾಯನದೃಢಾಯಾಂ ಚ ತಸ್ಯಾಂ ಪ್ರಹರತಶ್ಚಿರಮ್ ।
ರಾಜಸೂನೋರ್ಯಯುಃ ಖಡ್ಗಾ ಬಹವಸ್ತಸ್ಯ ಖಂಡಶಃ ॥ ೪೫

೪೬. ಅಷ್ಟು ಹೊತ್ತಿಗೆ ಇದನ್ನು ತಿಳಿದು ಚಿರಾಯುರಾಜನು ಬೇಡವೆಂದು ತಡೆಯಲು ಬಂದುದನ್ನು ನೋಡಿದ ನಾಗಾರ್ಜುನನು ಹೇಳಿದನು.

೪೭. "ಎಲೈ ರಾಜನೇ, ನನಗೆ ಪೂರ್ವಜನ್ಮದ ನೆನಪುಂಟು. ನಾನು ನನ್ನ ಹಿಂದಿನ ಜನ್ಮಗಳಲ್ಲಿ ತೊಂಬತ್ತೊಂಬತ್ತು ಬಾರಿ ತಲೆಯನ್ನು ನೀಡಿದ್ದೇನೆ.

೪೮. ತಲೆಯನ್ನು ದಾನಮಾಡಲು ನನಗೆ ಇದು ನೂರನೆಯ ಜನ್ಮ. ಆದ್ದರಿಂದ ನೀನು ಏನೂ ಹೇಳಬೇಡ. ನನ್ನ ಯಾವ ಯಾಚಕನೂ ಬೇಕಾದ್ದನ್ನು ಪಡೆಯದೇ ಹಿಂದಿರುಗುವುದಿಲ್ಲ.

೪೯. ಆದ್ದರಿಂದ ಈ ನಿನ್ನ ಮಗನಿಗೆ ನನ್ನ ತಲೆಯನ್ನು ನೀಡುತ್ತೇನೆ. ನಿನ್ನ ಮುಖವನ್ನು ಕಾಣಲೋಸುಗ ನಾನು ಹೀಗೆ ತಡಮಾಡಿದೆ.'

೫೦. ಹೀಗೆ ಹೇಳಿ ಆ ರಾಜನನ್ನು ಆಲಿಂಗಿಸಿಕೊಂಡು ಭಂಡಾರದಿಂದ ಚೂರ್ಣವನ್ನು ತರಿಸಿ ರಾಜಪುತ್ರನ ಖಡ್ಗಕ್ಕೆ ಅದನ್ನು ಸವರಿದನು.

೫೧. ಆ ಖಡ್ಗದ ಹೊಡೆತದಿಂದ ರಾಜಕುಮಾರನು, ನಾಳದಿಂದ ಕಮಲವನ್ನು ಕತ್ತರಿಸುವಂತೆ ನಾಗಾರ್ಜುನನ ತಲೆಯನ್ನು ಕತ್ತರಿಸಿದನು.

೫೨. ಆದ ಎಲ್ಲರೂ ಗಟ್ಟಿಯಾಗಿ ಗೋಳಿಡುತ್ತಿರಲು ಮತ್ತು ಚಿರಾಯು ರಾಜನು ಪ್ರಾಣ ಬಿಡಲು ಸಿದ್ಧನಾಗಲು ಆಕಾಶದಿಂದ ಅಶರೀರವಾಣಿಯು ಹೀಗೆಂದಿತು.

---

ತಾವದ್‌ಬುದ್ಧ್ವೈತದಾಯಾಂತಂ ರಾಜಾನಂ ತಂ ಚಿರಾಯುಷಮ್ ।
ವಾರಯಂತಂ ಶಿರೋದಾನಾತ್ ಸೋಽತ್ರ ನಾಗಾರ್ಜುನೋಽಬ್ರವೀತ್ ॥ ೪೬

ಜಾತಿಸ್ಮರೋಽಹಂ ನೃಪತೇ ನವತಿಂ ಚ ನವಾಧಿಕಾಮ್ ।
ಜನ್ಮಾನಿ ಸ್ವಶಿರೋ ದತ್ತಂ ಮಯಾ ಜನ್ಮನಿ ಜನ್ಮನಿ ॥ ೪೭
ಇದಂ ಶತತಮಂ ಜನ್ಮ ಶಿರೋದಾನಾಯ ಮೇ ಪ್ರಭೋ ।
ತಸ್ಮಾ ಸ್ಮ ವೋಚಃ ಕಿಂಚಿತ್ ತ್ವಂ ವಿಮುಖೋಽರ್ಥೀ ನ ಯಾತಿ ಮೇ ॥ ೪೮
ತದಿದಾನೀಂ ದದಾಮ್ಯಸ್ಮೈ ತ್ವತ್ಪುತ್ರಾಯ ನಿಜಂ ಶಿರಃ ।
ತ್ವನ್ಮುಖಾಲೋಕನಾಯೈಷ ವಿಲಂಬೋ ಹಿ ಕೃತೋ ಮಯಾ ॥ ೪೯
ಇತ್ಯುಕ್ತ್ವಾಶ್ಲಿಷ್ಯ ತಂ ಭೂಪಂ ಚೂರ್ಣಮಾನಾಯ್ಯ ಕೋಷತಃ ।
ಅಲಿಪದ್ರಾಜಪುತ್ರಸ್ಯ ಕೃಪಾಣಂ ತೇನ ತಸ್ಯ ಸಃ ॥ ೫೦
ತತ್‌ಕೃಪಾಣಪ್ರಹಾರೇಣ ಸೋಽಥ ತಸ್ಯ ನೃಪಾತ್ಮಜಃ ।
ನಾಗಾರ್ಜುನಸ್ಯ ಚಿಚ್ಛೇದ ಶಿರೋ ನಾಲಾದಿವಾಂಬುಜಮ್ ॥ ೫೧
ಅಥೋತ್ಥಿತೇ ಮಹಾಕ್ರಂದೇ ಪ್ರಾಣತ್ಯಾಗೋನ್ಮುಖೇ ನೃಪೇ ।
ಇತ್ಯುಚ್ಚಚಾರ ಗಗನಾದಶರೀರಾತ್ರ ಭಾರತೀ ॥ ೫೨

೨೩೩. "ರಾಜನ್ನೇ, ಅಕಾರ್ಯವನ್ನು ಮಾಡಬೇಡ. ನಿನ್ನ ಈ ಗೆಳೆಯನ ಬಗ್ಗೆ ಶೋಕಪಡಬೇಕಾಗಿಲ್ಲ. ನಾಗಾರ್ಜುನನು ಪುನರ್ಜನ್ಮವನ್ನು ನೀಗಿಕೊಂಡು ಬುದ್ಧನಿಗೆ ಸಮಾನವಾದ ಸದ್ಗತಿಯನ್ನು ಹೊಂದಿದ್ದಾನೆ.'

೨೩೪. ಇದನ್ನು ಕೇಳಿದ ಮಹಾರಾಜನು ಸಾಯುವ ಪ್ರಯತ್ನವನ್ನು ಕೈಬಿಟ್ಟನು. ದಾನಗಳನ್ನು ನೀಡಿ ಶೋಕದ ಕಾರಣ ರಾಜ್ಯವನ್ನು ಬಿಟ್ಟು ಕಾಡನ್ನು ಆಶ್ರಯಿಸಿದನು.

೨೩೫. ಅಲ್ಲಿ ಅವನು ತಪಗೈಯುತ್ತಾ ಕಾಲಕ್ರಮದಲ್ಲಿ ಪರಮಪದವನ್ನು ಪಡೆದನು. ಅವನ ಮಗನಾದ ಜೀವಹರನು ಆ ರಾಜ್ಯದಲ್ಲಿ ನೆಲೆನಿಂತನು.

೨೩೬. ರಾಜ್ಯವನ್ನು ಪಡೆದ ಅಲ್ಪಕಾಲದಲ್ಲಿಯೇ ನಾಗಾರ್ಜುನನ ಮಕ್ಕಳು ಅವನಿಂದ ತಮ್ಮ ತಂದೆಯು ಸತ್ತುದನ್ನು ನೆನೆಸಿಕೊಂಡು ರಾಜ್ಯವನ್ನು ಭೇದಿಸಿ ಜೀವಹರನನ್ನು ಕೊಂದುಹಾಕಿದರು.

೨೩೭. ಆ ಶೋಕಕ್ಕೆ ಜೀವಹರನ ತಾಯಿಯ ಹೃದಯವು ಒಡೆದುಹೋಯಿತು. ಸರಿಯಲ್ಲದ ಮಾರ್ಗದಲ್ಲಿ ಮುಂದುವರೆದವರಿಗೆ ಒಳಿತಾಗುವುದುಂಟೆ ?

೨೩೮. ಆಮೇಲೆ ಮಂತ್ರಿಗಳೂ ಪ್ರಧಾನರೂ ಬೇರೊಬ್ಬ ರಾಣಿಯಲ್ಲಿ ಹುಟ್ಟಿದ್ದ ಚಿರಾಯುವಿನ ಮಗ ಶತಾಯು ಎಂಬುವವನಿಗೆ ರಾಜ್ಯಭಾರವನ್ನು ಒಪ್ಪಿಸಿದರು.

೨೩೯. ಹೀಗೆ ನಾಗಾರ್ಜುನನು ಆರಂಭಿಸಿದ್ದ ಮನುಷ್ಯರ ಅಮರತ್ವದ ಪ್ರಯತ್ನವನ್ನು ದೇವತೆಗಳು ಸಹಿಸಲಿಲ್ಲ. ಆತನೂ ಮೃತ್ಯುವಶನೇ ಆದನು.

---

ಅಕಾರ್ಯಂ ಮಾ ಕೃಥಾ ರಾಜನ್ನಶೋಚ್ಯೋ ಹ್ಯೇಷ ತೇ ಸಖಾ ।
ನಾಗಾರ್ಜುನೋಽ ಪುನರ್ಜನ್ಮಾ ಗತೋ ಬುದ್ಧಸಮಾಂ ಗತಿಮ್ ॥ ೨೩೩

ಏತಚ್ಛ್ರುತ್ವಾ ಸವಿರತಶ್ಚಿರಾಯುರ್ಮರಣಾನ್ ನೃಪಃ ।
ದತ್ತದಾನಃ ಶುಚಾ ತ್ಯಕ್ತರಾಜ್ಯೋ ವನಮಶಿಶ್ರಿಯತ್ ॥ ೨೩೪

ತತ್ರಕಾಲೇನ ತಪಸಾ ಸ ಪ್ರಾಪ ಪರಮಾಂ ಗತಿಮ್ ।
ತತ್ಪುತ್ರೋಽಪ್ಯಧಿತಸ್ಥೌ ತದ್ರಾಜ್ಯಂ ಜೀವಹರೋಽತ್ರ ಸಃ ॥ ೨೩೫

ಪ್ರಾಪ್ತರಾಜ್ಯಶ್ಚ ನ ಚಿರಾತ್ ರಾಷ್ಟ್ರಭೇದಂ ವಿಧಾಯ ಸಃ ।
ಹತೋ ನಾಗಾರ್ಜುನಸುತೈಃ ಸ್ಮರದ್ಭಿಸ್ತದ್ವಧಂ ಪಿತುಃ ॥ ೨೩೬

ತಚ್ಛೋಕಾದಥ ತನ್ಮಾತುಸ್ತಸ್ಯಾ ಹೃದಯಮಸ್ಫುಟತ್ ।
ಅನಾರ್ಯಜುಷ್ಟೇನ ಪಥಾ ಪ್ರವೃತ್ತಾನಾಂ ಶಿವಂ ಕುತಃ ॥ ೨೩೭

ರಾಜ್ಯೇ ಚ ರಾಜ್ಞ್ಯಾಮನ್ಯಸ್ಯಾಂ ಜಾತಸ್ತಸ್ಯ ಚಿರಾಯುಷಃ ।
ಶತಾಯುರ್ನಾಮ ಪುತ್ರಸ್ತೈಃ ಮಂತ್ರಿಮುಖ್ಯೈರ್ನ್ಯವೇಶ್ಯತ ॥ ೨೩೮

ಏವಂ ನಾಗಾರ್ಜುನಾರಬ್ಧಂ ಮರ್ತ್ಯಾನಾಂ ಮೃತ್ಯುನಾಶನಮ್ ।
ನ ಸೋಢುಂ ದೈವತೈರ್ಯಾವತ್ಸೋಽಪಿ ಮೃತ್ಯುವಶಂ ಗತಃ ॥ ೨೩೯

೬೦. ಆದ್ದರಿಂದ ಈ ಜೀವಲೋಕವೆಲ್ಲವೂ ನಿವಾರಿಸಲಾಗದ ದುಃಖಾತಿಶಯದಿಂದ ಕೂಡಿರುವಂತೆ ಬ್ರಹ್ಮನು ಸೃಷ್ಟಿಮಾಡಿದ್ದಾನೆ. ಇದು ಅನಿತ್ಯವೂ ಆಗಿದೆ. ಹಾಗಾಗಿ ನೂರಾರು ಪ್ರಯತ್ನಗಳನ್ನು ಯಾರೇ ಮಾಡಿದರೂ ಯಾವುದು ಬ್ರಹ್ಮನಿಗೆ ಇಷ್ಟವಿಲ್ಲವೋ ಅದನ್ನು ಇಲ್ಲಿ ಸಾಧಿಸಲು ಸಾಧ್ಯವಾಗುವುದಿಲ್ಲ.

೬೧. ಈ ರೀತಿ ಮರುಭೂತಿಯು ಕಥೆಯನ್ನು ಹೇಳಿ ಮುಗಿಸಲು ಮಂತ್ರಿಗಳೊಂದಿಗೆ ಎದ್ದ ನರವಾಹನದತ್ತನು ತನ್ನ ದೈನಂದಿನ ಕರ್ತವ್ಯಗಳನ್ನು ಮಾಡಿದನು.

**ಮಹಾಕವಿ ಸೋಮದೇವಭಟ್ಟನು ವಿರಚಿಸಿದ**

**ಕಥಾಸರಿತ್ಸಾಗರದ ರತ್ನಪ್ರಭಾಲಂಬಕದಲ್ಲಿ**

**ಏಳನೆಯ ತರಂಗ ಮುಗಿಯಿತು.**

---

ತಸ್ಮಾದ್ವಿಧಾತೃವಿಹಿತೋಽಯಮನಿತ್ಯ ಏವ
ದುರ್ವಾರದುಃಖಬಹುಲೋ ನನು ಜೀವಲೋಕಃ ।
ಶಕ್ಯಂ ನ ಕರ್ತುಮಪಿ ಯತ್ನಶತೈಸ್ತದತ್ರ
ಕೇನಾಪಿ ಕಿಂಚಿದಪಿ ನೇಚ್ಛತಿ ಯದ್ವಿಧಾತಾ ॥ ೬೦

ಇತ್ಯಾಖ್ಯಾಯ ಕಥಾಂ ಕಿಲ ವಿರತೇ ಮರುಭೂತಿಕೇ ಸಮಂ ಸಚಿವೈಃ ।
ನರವಾಹನದತ್ತೋ ನಿಜಮುತ್ಥಾಯ ಚಕಾರ ದಿವಸಕರ್ತವ್ಯಮ್ ॥ ೬೧

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ ರತ್ನಪ್ರಭಾಲಂಬಕೇ**

**ಸಪ್ತಮಸ್ತರಂಗಃ ।**

---

## ಎಂಟನೆಯ ತರಂಗ

೧-೨. ಮತ್ತೊಂದು ದಿನ ಬೆಳಿಗ್ಗೆ ನರವಾಹನದತ್ತನು ತವಕದಿಂದ ತುಂಬಿದ್ದ ತನ್ನ ಪ್ರಿಯ ರತ್ನಪ್ರಭೆಗೆ ಬೇಗನೆ ಹಿಂತಿರುಗಿ ಬಂದು ಬಿಡುತ್ತೇನೆಂದು ಸಂತೈಸಿ, ತಂದೆ ವತ್ಸರಾಜ ಹಾಗೂ ಮಿತ್ರರೊಂದಿಗೆ ಆನೆ ಕುದುರೆಗಳ ಪರಿವಾರದೊಡನೆ ಬೇಟೆಯಾಡಲು ಕಾಡಿಗೆ ಹೋದನು.

---

## ಅಷ್ಟಮಸ್ತರಂಗಃ

ತತೋಽಹನಿ ಪರೇ ಪ್ರಾತಃ ಸೋತ್ಕಾಂ ರತ್ನಪ್ರಭಾಂ ಪ್ರಿಯಾಮ್ ।
ಶೀಘ್ರಂ ಪ್ರತ್ಯಾಗಮಿಷ್ಯಾಮೀತ್ಯಾಶ್ವಾಸ್ಯಾಖೇಟಕಾಯ ಸಃ ॥ ೧
ವತ್ಸೇಶೇನ ಸಮಂ ಪಿತ್ರಾ ವಯಸ್ಯೈಶ್ಚಾಟವೀಂ ಯಯೌ ।
ನರವಾಹನದತ್ತೋಽಶ್ವೈರ್ಗಜೈಶ್ಚ ಪರಿವಾರಿತಃ ॥ ೨

೩-೬ ಅಲ್ಲಿ ಆನೆಗಳ ಕುಂಭಸ್ಥಳಗಳನ್ನು ಸೀಳಿದ ಸಿಂಹಗಳು ಸತ್ತುಬಿದ್ದಿದ್ದು ಅವುಗಳ ಉಗುರುಗಳ ಸಂದಿನಿಂದ ಹೊರಬಿದ್ದ ಮುತ್ತುಗಳಿಂದ ಕಾಡಿನಲ್ಲಿ ಬೀಜವನ್ನು ಬಿತ್ತಿದಂತಾಗಿತ್ತು. ಭರ್ಜಿಗಳಿಂದ ಕತ್ತರಿಸಿದ್ದ ಹುಲಿಗಳ ಕೋರೆಹಲ್ಲುಗಳು ಹರಡಿಕೊಂಡಿದ್ದು ಮೊಳಕೆಯೊಡೆದು ಹೊರಬಂದಂತೆ ಕಾಣುತ್ತಿತ್ತು. ಬಾಣಗಳ ಗುರುತಿನಿಂದ ತುಂಬಿಹೋಗಿದ್ದ ವರಾಹಗಳಿಂದ ಗುಚ್ಛಗಳಿಂದ ಕೂಡಿದಂತೆಯೂ ನೆಲಕ್ಕೆ ಬಿದ್ದ ಶರಭಗಳ ಶರೀರದಿಂದ, ಹಣ್ಣುಗಳಿಂದ ಕೂಡಿರುವಂತೆಯೂ, ಗುಡುಗಿನಂತೆ ಸದ್ದುಮಾಡುತ್ತ ಬೀಳುತ್ತಿದ್ದ ಬಾಣಗಳಿಂದಲೂ (ದುಂಬಿಗಳಿಂದಲೂ) ಆ ಬೇಟೆಯೆಂಬ ಆಟದ ಬಳ್ಳಿಯಿಂದ ಶೋಭಿತವಾದ ಆ ಕಾಡು ರಾಜನಿಗೆ ತೃಪ್ತಿಕೊಟ್ಟಿತು.

೭ ಆಯಾಸಗೊಂಡಿದ್ದ ನರವಾಹನದತ್ತನು ನಿಧಾನವಾಗಿ ವಿಶ್ರಾಂತಿ ಪಡೆದು ನಂತರ ಕುದುರೆಯೇರಿ ಗೋಮುಖ ಮತ್ತು ಒಬ್ಬ ಕುದುರೆ ಸವಾರನೊಂದಿಗೆ ಮತ್ತಷ್ಟು ಕಾಡಿನೊಳಗೆ ಹೋದನು.

೮ ಅಲ್ಲಿ ಚಂಡಿನ ಯಾವುದೋ ಆಟವನ್ನು ಕೂಡಲೇ ಆರಂಭಿಸಿದನು. ಆ ವೇಳೆಗೆ ಅದೇ ದಾರಿಯಲ್ಲಿ ತಾಪಸಿಯೊಬ್ಬಳು ಬಂದಳು.

೯. ಆತನ ಕೈಯಿಂದ ಜಾರಿದ ಗುಂಡೊಂದು ಅವಳ ತಲೆಯಮೇಲೆ ಬಿದ್ದಿತು. ಆಗ ಆ ತಾಪಸಿಯು ಸ್ವಲ್ಪ ನಕ್ಕು ಮಾತನಾಡಿದಳು.

---

ತತ್ರ ಭಿನ್ನೇಭಕುಂಭಾನಾಂ ನಖೋದರಪರಿಚ್ಯುತೈಃ ।
ಸಿಂಹಾನಾಂ ಹತಸುಪ್ತಾನಾಮುಪ್ತಬೀಜೇವ ಮೌಕ್ತಿಕೈಃ ॥ ೩

ವ್ಯಾಘ್ರಾಣಾಂ ಭಲ್ಲಲೂನಾನಾಂ ದಂಷ್ಟ್ರಾಭಿಃ ಸಾಂಕುರೇವ ಚ ।
ಸಪಲ್ಲವೇವ ಕ್ಷತಚ್ಛೈರ್ಹರಿಣಾನಾಂ ಪರಿಸ್ರುತೈಃ ॥ ೪

ನಿಮಗ್ನಕಂಕಪತ್ರಾಂಕೈಃ ಕ್ರೋಡೈಃ ಸ್ತಬಕಿತೇವ ಚ ।
ಶರೀರೈಃ ಶರಭಾಣಾಂ ಚ ಪತಿತೈಃ ಫಲಿತೇವ ಚ ॥ ೫

ಬಭೂವ ತಸ್ಯ ನಿಪತದ್ಘನಶಬ್ದಶಿಲೀಮುಖಾ ।
ಪ್ರೀತಯೇ ಮೃಗಯಾಲೀಲಾಲತಾಶೋಭಿತಕಾನನಾ ॥ ೬

ಶನೈಃ ಶ್ರಾಂತಃ ಸ ವಿಶ್ರಮ್ಯ ಪ್ರವಿವೇಶ ವನಾಂತರಮ್ ।
ಹಯಾರೂಢಃ ಸಹೈಕೇನ ಗೋಮುಖೇನಾಶ್ವಸಾದಿನಾ ॥ ೭

ತತ್ರಾರೇಭೇ ಚ ಗುಲಿಕಾಕ್ರೀಡಾಂ ಕಿಮಪಿ ತತ್‌ಕ್ಷಣಮ್ ।
ತಾವಚ್ಚ ತಾಪಸೀ ಕಾಪಿ ಪಥಾ ತೇನ ಕಿಲಾಯಯೌ ॥ ೮

ತಸ್ಯಾಸ್ತಸ್ಯ ಕರಾದ್ ಭ್ರಷ್ಟಾ ಗುಲಿಕಾ ಮೂರ್ಧ್ನಿ ಚಾಪತತ್ ।
ತತೋ ವಿಹಸ್ಯ ಕಿಂಚಿತ್ಸಾ ತಾಪಸೀ ತಮಭಾಷತ ॥ ೯

೧೦. ಇಷ್ಟಕ್ಕೇ ನಿನಗೆ ಇಷ್ಟೊಂದು ಮದವಾದರೆ ಆ ಕರ್ಪೂರಿಕೆಯನ್ನೇನಾದರೂ ಪತ್ನಿಯನಾಗಿ ಪಡೆದರೆ ಆಗ ನಿನ್ನ ಪೊಗರು ಎಷ್ಟಾದೀತು ?

೧೧. ಇದನ್ನು ಕೇಳುತ್ತಲೇ ಕುದುರೆಯಿಂದ ಕೆಳಗಿಳಿದ ಅವನು ತಾಪಸಿಯ ಕಾಲುಗಳಿಗೆ ಬಿದ್ದು ಹೀಗೆಂದನು.

೧೨. 'ನಾನು ನಿನ್ನನ್ನು ನೋಡಲಿಲ್ಲ. ದುರದೃಷ್ಟವಶಾತ್ ನನ್ನ ಗುಂಡು ಇಲ್ಲಿಗೆ ಹೋಯಿತು. ಆದ್ದರಿಂದ ಪೂಜ್ಯಳೇ ! ಪ್ರಸನ್ನಳಾಗು. ನನ್ನ ತಪ್ಪನ್ನು ಮನ್ನಿಸು.'

೧೩. ಅದನ್ನು ಕೇಳಿ ಕೋಪವನ್ನು ಗೆದ್ದಿದ್ದ ಆ ತಾಪಸಿಯು ನನಗೆ ಕೋಪವೇನೂ ಇಲ್ಲ ಎಂದು ಹೇಳಿ ಅವನನ್ನು ಆಶೀರ್ವಾದಗಳಿಂದ ಸಮಾಧಾನಪಡಿಸಿದಳು.

೧೪. ತಾಪಸಿಯು ಸತ್ಯವಂತಳೂ ಇಂದ್ರಿಯ ನಿಗ್ರಹಮಾಡಿದವಳೂ ವಿವೇಕಿಯೂ ಆಗಿರುವಂತಹವಳು ಎಂದು ಭಾವಿಸಿದ ನರವಾಹನದತ್ತನು ವಿನಯದಿಂದ ಅವಳನ್ನು ಕೇಳಿದನು :

೧೫. 'ಪೂಜ್ಯೆಯಾದ ನೀನು ಹೇಳಿದ ಈ ಕರ್ಪೂರಿಕೆ ಎಂಬುವವಳು ಯಾರು ? ನನ್ನ ಬಗ್ಗೆ ಸಂತುಷ್ಟಳಾಗಿದ್ದರೆ ಇದನ್ನು ಅಪ್ಪಣೆಮಾಡು. ನನಗೆ ತುಂಬ ಕುತೂಹಲ ಉಂಟಾಗಿದೆ'

೧೬. ಇಷ್ಟು ಹೇಳಿದ ಆ ವಿನಯಶಾಲಿಗೆ ತಾಪಸಿಯೆಂದಳು. 'ಸಮುದ್ರದ ದಡದಲ್ಲಿ ಕರ್ಪೂರಸಂಭವವೆಂಬ ಪಟ್ಟಣವೊಂದಿದೆ.

---

ಏವಮೇವ ಮದೋಽಯಂ ಚೇತ್ತವ ತದ್ಯದ್ಯವಾಪ್ಸಸಿ ।
ಜಾತು ಕರ್ಪೂರಿಕಾಂ ಭಾರ್ಯಾಂ ತತಃ ಕೀದೃಗ್ಭವಿಷ್ಯತಿ ॥ ೧೦

ಏತತ್ ಶ್ರುತ್ವಾವರುಹ್ಯೈವ ತುರಗಾಚ್ಚರಣಾನತಃ ।
ನರವಾಹನದತ್ತಸ್ತಾಂ ತಾಪಸೀಂ ನಿಜಗಾದ ಸಃ ॥ ೧೧

ತ್ವಂ ನ ದೃಷ್ಟಾ ಮಯಾ ದೈವಾತ್ ಗುಲಿಕಾ ಚಾತ್ರ ಮೇ ಗತಾ ।
ಪ್ರಸೀದ ತದ್ಭಗವತಿ ಕ್ಷಮಸ್ವ ಸ್ಖಲಿತಂ ಮಮ ॥ ೧೨

ತತ್ಶ್ರುತ್ವಾ ನಾಸ್ತಿ ಮೇ ಪುತ್ರ ಕೋಪ ಇತ್ಯಭಿಧಾಯ ಚ ।
ತಾಪಸೀ ಸಾ ಜಿತಕ್ರೋಧಾ ತಮಾಶೀರ್ಭಿರಸಾಂತ್ವಯತ್ ॥ ೧೩

ತತಶ್ಚ ವಶಿನೀಂ ಮತ್ವಾ ಪ್ರಬುದ್ಧಾಂ ಸತ್ಯತಾಪಸೀಮ್ ।
ನರವಾಹನದತ್ತಸ್ತಾಂ ಪಪ್ರಚ್ಛ ವಿನಯೇನ ಸಃ ॥ ೧೪

ಕೈಷಾ ಕರ್ಪೂರಿಕಾ ನಾಮ ಭಗವತ್ಯುದಿತಾ ತ್ವಯಾ ।
ಏತದಾದಿಶ ತುಷ್ಟಾಸಿ ಮಯಿ ಚೇತ್ಕೌತುಕಂ ಹಿ ಮೇ ॥ ೧೫

ಇತ್ಯುಕ್ತವಂತಂ ಪ್ರಣತಂ ತಾಪಸೀ ತಂ ಜಗಾದ ಸಾ ।
ಅಸ್ತಿ ಪಾರೇಂಬುಧಿ ಪುರಂ ನಾಮ್ನಾ ಕರ್ಪೂರಸಂಭವಮ್ ॥ ೧೬

೧೭. ಅಲ್ಲಿ ಕರ್ಪೂರಕನೆಂಬ ಅನ್ವರ್ಥವಾದ ಹೆಸರಿನ ಪ್ರಸಿದ್ಧನಾದ ರಾಜನಿದ್ದಾನೆ. ಅವನಿಗೆ ಕರ್ಪೂರಿಕೆಯೆಂಬ ಸುಂದರ ಕನ್ಯೆಯೊಬ್ಬಳಿದ್ದಾಳೆ.

೧೮. ಆಕೆಯು (ಸಮುದ್ರಮಂಥನ ಸಮಯದಲ್ಲಿ) ಕಡೆದಾಗ (ಹೊರಬಂದ) ಒಬ್ಬ ಲಕ್ಷ್ಮಿಯನ್ನು ದೇವತೆಗಳು ಕದ್ದೊಯ್ದದ್ದನ್ನು ನೋಡಿ ಸಮುದ್ರವು ಎರಡನೆಯ ಲಕ್ಷ್ಮಿಯನ್ನು ಅಲ್ಲಿಟ್ಟು ಗುಟ್ಟಾಗಿ ಕಾಪಾಡುತ್ತಿರುವಂತೆ ಕಾಣುತ್ತಾಳೆ.

೧೯. ಗಂಡಸರನ್ನು ದ್ವೇಷಿಸುವ ಅವಳು ಮದುವೆಯಾಗಲು ಇಷ್ಟಪಡುವುದಿಲ್ಲ. ನೀನೇನಾದರೂ ಅವಳ ಬಳಿ ಹೋದರೆ ಅವಳು ಮದುವೆಯಾಗಬಯಸುತ್ತಾಳೆ.

೨೦. ಆದ್ದರಿಂದ ಮಗನೇ, ನೀನು ಅಲ್ಲಿಗೆ ಹೋಗು. ಆ ಸುಂದರಿಯನ್ನು ಪಡೆಯುತ್ತೀಯೆ. ಅಲ್ಲಿಗೆ ಹೋಗುವಾಗ ನಿನಗೆ ಕಾಡಿನಲ್ಲಿ ತುಂಬ ತೊಂದರೆಗಳು ಉಂಟಾಗುತ್ತವೆ.

೨೧. ಅದಕ್ಕೆಲ್ಲ ಕಂಗೆಡಬೇಡ. ಕೊನೆಯಲ್ಲಿ ಎಲ್ಲವೂ ಸುಖಾಂತವೇ ಆಗುತ್ತದೆ.' ಇಷ್ಟು ಹೇಳಿದ ತಾಪಸಿಯು ಆಕಾಶಕ್ಕೆ ಕಣ್ಮರೆಯಾದಳು.

೨೨. ಆಕೆಯ ಮಾತೆಂಬ ಮನ್ಮಥನ ಆಜ್ಞೆಯ ಸೆಳೆತಕ್ಕೊಳಗಾದ ನರವಾಹನದತ್ತನು ಪಕ್ಕದಲ್ಲಿಯೇ ಇದ್ದ ಗೋಮುಖನಿಗೆ ಹೀಗೆ ಹೇಳಿದನು.

೨೩. "ಬಾ, ಕರ್ಪೂರಸಂಭವಪುರದಲ್ಲಿ ಕರ್ಪೂರಿಕೆಯ ಬಳಿಗೆ ಹೋಗೋಣ. ಅವಳನ್ನು ಕಾಣದೆ ನಾನು ಸ್ವಲ್ಪಹೊತ್ತೂ ಇರಲಾರೆ.

---

ಅನ್ವರ್ಥಸ್ತತ್ರ ರಾಜಾಸ್ತಿ ಕರ್ಪೂರಕ ಇತಿ ಶ್ರುತಃ ।
ತಸ್ಯ ಕರ್ಪೂರಿಕಾ ನಾಮ ಸುತಾಸ್ತಿ ವರಕನ್ಯಕಾ ॥ ೧೭

ಏಕಾಂ ವಿಲೋಕ್ಯ ಕಮಲಾಂ ನಿರ್ಮಥ್ಯಾಪಹೃತಾಂ ಸುರೈಃ ।
ಯಾ ದ್ವಿತೀಯೇವ ನಿಕ್ಷಿಪ್ಯ ತತ್ರ ಗೋಪಾಯಿತಾಬ್ಧಿನಾ ॥ ೧೮

ಪುರುಷದ್ವೇಷಿಣೀ ಸಾ ಚ ವಿವಾಹಂ ನಾಭಿವಾಂಛತಿ ।
ತ್ವಯ್ಯುಪೇತೇ ಯದಿ ಪರಂ ಭವಿಷ್ಯತಿ ತದರ್ಥಿನೀ ॥ ೧೯

ತತ್ತತ್ರ ಗಚ್ಛ ಪುತ್ರ ತ್ವಂ ತಾಂ ಚ ಪ್ರಾಪ್ಸ್ಯಸಿ ಸುಂದರೀಮ್ ।
ಗಚ್ಛತಶ್ಚಾತ್ರ ತೇಽಟವ್ಯಾಂ ಮಹಾಕ್ಲೇಶೋ ಭವಿಷ್ಯತಿ ॥ ೨೦

ಮೋಹಸ್ತತ್ರ ನ ಕಾರ್ಯಸ್ತೇ ಸರ್ವಂ ಸ್ವಂತಂ ಹಿ ಭಾವಿ ತತ್ ।
ಇತ್ಯುಕ್ತ್ವೈವ ಖಮುತ್ಪತ್ಯ ತಾಪಸೀ ಸಾ ತಿರೋದಧೇ ॥ ೨೧

ನರವಾಹನದತ್ತೋಽಥ ತದ್ವಾಣೀಮದನಾಜ್ಞಯಾ ।
ಆಕೃಷ್ಟಃ ಸ ತಮಾಹ ಸ್ಮ ಗೋಮುಖಂ ಪಾರ್ಶ್ವವರ್ತಿನಮ್ ॥ ೨೨

ಏಹಿ ಕರ್ಪೂರಿಕಾಪಾರ್ಶ್ವಂ ಪುರಂ ಕರ್ಪೂರಸಂಭವಮ್ ।
ಗಚ್ಛಾವಸ್ತಾಮದೃಷ್ಟ್ವಾ ಹಿ ನ ಕ್ಷಣಂ ಸ್ಥಾತುಮುತ್ಸಹೇ ॥ ೨೩

೨೪. ಅದನ್ನು ಕೇಳಿ ಗೋಮುಖನೆಂದನು. "ಒಡೆಯನೇ, ಈ ಸಾಹಸ ಸಾಕು. ನೀನು ಎಲ್ಲಿ, ಸಮುದ್ರವೆಲ್ಲಿ, ಆ ಊರು ಎಲ್ಲಿ, ಆ ಹಾದಿಯೆಲ್ಲಿ, ಆ ಹುಡುಗಿಯೆಲ್ಲಿ ?

೨೫. ಹೆಸರನ್ನು ಕೇಳಿದ ಕೂಡಲೇ ದಿವ್ಯಾಂಗನೆಯಾದ (ಹೆಂಡತಿಯನ್ನು) ಬಿಟ್ಟು ಒಂಟಿಯಾಗಿ ಅವಳ ಮನಸ್ಸು ತಿಳಿಯದಿರುವುದರಿಂದ ಸಂದಿಗ್ಧಳಾದ ಆ ಮನುಷ್ಯ ಸ್ತ್ರೀಯನ್ನು ಕುರಿತು ಓಡುತ್ತಿದ್ದೀಯೆ ?'

೨೬. ಗೋಮುಖನು ಹೀಗೆ ಹೇಳಿದಾಗ ವತ್ಸರಾಜನ ಮಗನು ನುಡಿದನು. "ಆ ಸಿದ್ಧತಾಪಸಿಯು ಹೇಳಿದ ಮಾತು ಸುಳ್ಳಲ್ಲ.

೨೭. ಆದ್ದರಿಂದ ನಾನು ಆ ರಾಜಕುಮಾರಿಯನ್ನು ಪಡೆದುಕೊಳ್ಳಲು ಅವಶ್ಯವಾಗಿ ಹೋಗಲೇಬೇಕು.' ಹೀಗೆ ಹೇಳಿ ಆ ಕೂಡಲೇ ಅವನು ಕುದುರೆಯನ್ನೇರಿ ಅಲ್ಲಿಂದ ಹೊರಟೇಬಿಟ್ಟನು.

೨೮. ಇಷ್ಟವಿಲ್ಲದಿದ್ದರೂ ಮೌನವಾಗಿ ಗೋಮುಖನು ಅವನನ್ನು ಹಿಂಬಾಲಿಸಿದನು. ಏಕೆಂದರೆ ಸೇವಕರು ಒಡೆಯನಿಗೆ ಎದುರು ಮಾತಾಡದೆ ಅವನನ್ನು ಅನುಸರಿಸಲೇ ಬೇಕು.

೨೯. ಆ ವೇಳೆಗೆ ವತ್ಸರಾಜನು ಬೇಟೆ ಮುಗಿಸಿ ತನ್ನೂರಿಗೆ ಹಿಂತಿರುಗಿದನು. ತನ್ನ ಮಗನು ಸೈನ್ಯದೊಂದಿಗೆ ಬರುತ್ತಿರುವನೆಂದು ಅವನು ಭಾವಿಸಿದನು.

---

ತತ್ ಶ್ರುತ್ವಾ ಗೋಮುಖೋಽವಾದೀದ್ದೇವಾಲಂ ಸಾಹಸೇನ ತೇ ।
ಕ್ವ ತ್ವಂ ಕಾಬ್ಧಿಃ ಪುರಂ ತತ್ ಕ್ವ ಕ್ವ ಸೋಽಧ್ವಾ ಕನ್ಯಕಾ ಕ್ವ ಸಾ ॥ ೨೪

ನಾಮ್ನಿ ಶ್ರುತೇ ಕಿಮೇಕಾಕೀ ತ್ಯಕ್ತದಿವ್ಯಾಂಗನಾಜನಃ ।
ನಿರಭಿಪ್ರಾಯಸಂದಿಗ್ಧಾಮಭಿಧಾವಸಿ ಮಾನುಷೀಮ್ ॥ ೨೫

ಏವಂ ಸ ಗೋಮುಖೇನೋಕ್ತೋ ವತ್ಸರಾಜಸುತಸ್ತದಾ ।
ಅಬ್ರವೀತ್ ಸಿದ್ಧತಾಪಸ್ಯಾ ನ ತಸ್ಯಾ ವಚನಂ ಮೃಷಾ ॥ ೨೬

ತನ್ಮಯಾವಶ್ಯಗಂತವ್ಯಂ ಪ್ರಾಪ್ತುಂ ತಾಂ ರಾಜಕನ್ಯಕಾಮ್ ।
ಇತ್ಯುಕ್ತ್ವಾ ಸ ಹಯಾರೂಢಃ ಪ್ರತಸ್ಥೇ ತತ್ಕ್ಷಣಂ ತತಃ ॥ ೨೭

ಅನ್ವಗಾತ್ಸ ಚ ತಂ ತೂಷ್ಣೀಮನಿಚ್ಛನ್ನಪಿ ಗೋಮುಖಃ ।
ಅಕುರ್ವನ್ ವಚನಂ ಭೃತ್ಯೈರನುಗಮ್ಯಃ ಪರಂ ಪ್ರಭುಃ ॥ ೨೮

ತಾವದ್ವತ್ಸೇಶ್ವರೋಽಪ್ಯಾಗಾತ್ ಕೃತಾಖೇಟೋ ನಿಜಾಂ ಪುರೀಮ್ ।
ಮನ್ವಾನಃ ಸ ತಮಾಯಾಂತಂ ಸುತಂ ಸ್ವಬಲಮಧ್ಯಗಮ್ ॥ ೨೯

೩೦. ಆತನ ಸೈನ್ಯವು ರಾಜಕುಮಾರನು ಸೇನೆಯ ಮಧ್ಯೆ ಎಲ್ಲೋ ಇರುವನೆಂದು ಭಾವಿಸಿ ಮರುಭೂತಿ ಮುಂತಾದವರ ಜೊತೆ ತನ್ನೂರಿಗೆ ಹಿಂದಿರುಗಿತು.

೩೧. ಅಲ್ಲಿಗೆ ಬಂದು ಅವನು ಬಂದಿಲ್ಲದಿರುವುದನ್ನು ತಿಳಿದು ಹುಡುಕುತ್ತಾ ವತ್ಸೇಶ್ವರ ಮುಂತಾದವರೆಲ್ಲ ರತ್ನಪ್ರಭೆಯು ಬಳಿಗೆ ಹೋದರು.

೩೨. ಅವಳು ಮೊದಲಿಗೆ ಆ ಸಂಗತಿಯನ್ನು ಕೇಳಿ ಆತಂಕಗೊಂಡರೂ ಆಮೇಲೆ ತನ್ನ ವಿದ್ಯೆಯಿಂದ ಧ್ಯಾನಗೈದು ಪ್ರಿಯತಮನ ಕಥೆಯನ್ನು ತಿಳಿದು ದುಗುಡದಿಂದಿದ್ದ ಮಾವನಿಗೆ ಹೇಳಿದಳು :

೩೩. "ಕಾಡಿನಲ್ಲಿ ತಾಪಸಿಯು ಹೇಳಿದ ರಾಜಕುಮಾರಿ ಕರ್ಪೂರಿಕೆಯನ್ನು ಪಡೆಯಲು ಆರ್ಯಪುತ್ರನು ಕರ್ಪೂರಸಂಭವವೆಂಬ ನಗರಕ್ಕೆ ಹೋಗಿದ್ದಾನೆ.

೩೪. ಆದಷ್ಟು ಬೇಗನೆ ತನ್ನ ಕಾರ್ಯವನ್ನು ಮುಗಿಸಿ ಗೋಮುಖನ ಜೊತೆ ಇಲ್ಲಿಗೇ ಬರಲಿದ್ದಾನೆ ಆದ್ದರಿಂದ ಚಿಂತೆ ಮಾಡುವುದು ಸಾಕು. ಇದೆಲ್ಲವನ್ನೂ ನನ್ನ ವಿದ್ಯೆಯಿಂದ ಅರಿತಿದ್ದೇನೆ'

---

ಸ್ವಬಲಂ ತಚ್ಚ ತಸ್ಯಾಗಾನ್ಮರುಭೂತ್ಯಾದಿಭಿಃ ಸಹ ।
ಪುರೀಂ ತಾಮೇವ ಮತ್ವಾ ತಂ ಸೈನ್ಯಮಧ್ಯಸ್ಥಿತಂ ಪ್ರಭುಮ್ ॥ ೩೦

ತತ್ರ ಪ್ರಾಪ್ತಾ ವಿಚಿನ್ವಂತಸ್ತೇ ಬುದ್ಧ್ವಾ ತಮನಾಗತಮ್ ।
ವತ್ಸೇಶ್ವರಾದಯೋ ಜಗ್ಮುಃ ಸರ್ವೇ ರತ್ನಪ್ರಭಾಂತಿಕಮ್ ॥ ೩೧

ಸಾ ಚಾದೌ ತಚ್ಛ್ರುತೇನಾರ್ತಾ ಧ್ಯಾತಯಾ ನಿಜವಿದ್ಯಯಾ ।
ಆಖ್ಯಾತದಯಿತೋದಂತಾ ವಿಗ್ನಂ ಶ್ವಶುರಮಬ್ರವೀತ್ ॥ ೩೨

ಕರ್ಪೂರಿಕಾಂ ರಾಜಸುತಾಂ ತಾಪಸ್ಯಾ ಕಥಿತಾಂ ವನೇ ।
ಆರ್ಯಪುತ್ರೋ ಗತಃ ಪ್ರಾಪ್ತುಂ ಪುರಂ ಕರ್ಪೂರಸಂಭವಮ್ ॥ ೩೩

ಶೀಘ್ರಂ ಸ ಕೃತಕಾರ್ಯಃ ಸನ್ನಿಹೈಷ್ಯತಿ ಸಗೋಮುಖಃ ।
ತದಲಂ ಚಿಂತಯೈತದ್ಧಿ ವಿದ್ಯಾತೋಽಧಿಗತಂ ಮಯಾ ॥ ೩೪

೩೫–೩೬. ಇಷ್ಟು ಹೇಳಿ ಅವಳು ಪರಿವಾರಸಹಿತನಾದ ವತ್ಸರಾಜನನ್ನು ಸಮಾಧಾನ ಪಡಿಸಿದಳು. ಆಮೇಲೆ ಪತಿಯಾದ ನರವಾಹನದತ್ತನಿಗೆ ಮಾರ್ಗದಲ್ಲಿ ಅಡಚಣೆಗಳೆಲ್ಲ ನಿವಾರಣೆಗೊಳ್ಳಲೆಂದು ರತ್ನಪ್ರಭೆಯು ಬೇರೊಂದು ವಿದ್ಯೆಯನ್ನು ಬಳಸಿದಳು. ಉತ್ತಮ ಸ್ತ್ರೀಯರು ಗಂಡನ ಹಿತವನ್ನು ಬಯಸುವರೇ ಹೊರತು ಅಸೂಯೆಯನ್ನು ಲೆಕ್ಕಿಸುವುದಿಲ್ಲ ಅಲ್ಲವೇ !

೩೭. ಅಷ್ಟರ ವೇಳೆಗೆ ಗೋಮುಖನೊಂದಿಗೆ ನರವಾಹನದತ್ತನು ಕಾಡಿನಲ್ಲಿ ಕುದುರೆಯನ್ನೇರಿ ಇನ್ನಷ್ಟು ದೂರ ಹೋದನು.

೩೮. ಆಗ ತಟಕ್ಕನೆ ಅಲ್ಲಿಗೆ ಬಂದ ಹೆಣ್ಣುಮಗಳೊಬ್ಬಳು ಹಾದಿಯಲ್ಲಿ ಹೀಗೆಂದಳು. 'ನಾನು ರತ್ನಪ್ರಭೆಯಿಂದ ಕಳಿಸಲಾದ ಮಾಯಾವತೀ ಎಂಬ ವಿದ್ಯೆಯಾಗಿದ್ದೇನೆ.

೩೯. ಕಣ್ಣಿಗೆ ಕಾಣಿಸದಂತಿದ್ದು ಮಾರ್ಗದಲ್ಲಿ ನಿನ್ನನ್ನು ಕಾಪಾಡುತ್ತೇನೆ. ಆದ್ದರಿಂದ ಈಗ ನಿಶ್ಚಿಂತನಾಗಿ ಹೋಗು.' ಇಷ್ಟು ಹೇಳಿ ಸ್ತ್ರೀರೂಪದಲ್ಲಿ ಬಂದಿದ್ದ ವಿದ್ಯೆಯು ಇವನು ನೋಡುತ್ತಿರುವಂತೆಯೇ ಅದೃಶ್ಯಳಾದಳು.

೪೦. ಆಕೆಯ ಪ್ರಭಾವದಿಂದ ಮಾರ್ಗದಲ್ಲಿ ಮುಂದೆ ಅವನಿಗೆ ಹಸಿವು ನೀರಡಿಕೆಗಳೇ ಇಲ್ಲವಾದವು. ತನ್ನ ಪ್ರಿಯೆಯಾದ ರತ್ನಪ್ರಭೆಯನ್ನು ಮನಸಾರೆ ಹೊಗಳುತ್ತಾ ಮಾರ್ಗದಲ್ಲಿ ನರವಾಹನದತ್ತನು ಮುಂದುವರೆದನು.

---

ಇತ್ಯುಕ್ತ್ವಾಶ್ವಾಸಯತ್ಸಾ ತಂ ವತ್ಸೇಶಂ ಸಪರಿಚ್ಛದಮ್ ।
ರತ್ನಪ್ರಭಾನ್ಯಾಂ ವಿದ್ಯಾಂ ಚ ಭರ್ತುಃ ಪ್ರಾಯುಂಕ್ತ ತಸ್ಯ ಸಾ ॥ ೩೫

ನರವಾಹನದತ್ತಸ್ಯ ಪಥಿಕ್ಲೇಶಾಪಶಾಂತಯೇ ।
ನೇರ್ಷ್ಯಾಂ ಭರ್ತೃಹಿತೈಷಿಣ್ಯೋ ಗಣಯಂತಿ ಹಿ ಸುಸ್ತ್ರಿಯಃ ॥ ೩೬

ತಾವಚ್ಚ ದೂರಮಧ್ವಾನಂ ಸ ಯಯೌ ವಾಜಿಪೃಷ್ಠಗಃ ।
ನರವಾಹನದತ್ತೋಽಸ್ಯಾಮಟವ್ಯಾಂ ಗೋಮುಖಾನ್ವಿತಃ ॥ ೩೭

ಅಥಾಕಸ್ಮಾದುಪೇಯಾತ್ರ ಕುಮಾರೀ ಪಥ್ಯುವಾಚ ತಮ್ ।
ಅಹಂ ಮಾಯಾವತೀ ನಾಮ ವಿದ್ಯಾ ರತ್ನಪ್ರಭೇರಿತಾ ॥ ೩೮

ರಕ್ಷಾಮ್ಯದೃಶ್ಯಾ ಮಾರ್ಗೇ ತ್ವಾಂ ನಿಶ್ಚಿಂತಃ ತದ್ವ್ರಜಾಧುನಾ ।
ಇತ್ಯುಕ್ತ್ವಾ ರೂಪಿಣೀ ವಿದ್ಯಾ ತಿರೋಽಭೂತ್ತಾಸ್ಯ ಪಶ್ಯತಃ ॥ ೩೯

ತತ್ಪ್ರಭಾವಾತ್ತತಃ ಶಾಂತಕ್ಷುತ್ತೃಷ್ಣ ಪಥಿ ಸ ವ್ರಜನ್ ।
ನರವಾಹನದತ್ತಸ್ತಾಂ ಸ್ತುವನ್ ರತ್ನಪ್ರಭಾಂ ಪ್ರಿಯಾಮ್ ॥ ೪೦

೪೧. ಸಂಜೆ ವೇಳೆಗೆ ಕಾಡಿನಲ್ಲಿ ತಿಳಿನೀರಿನ ಕೊಳವೊಂದನ್ನು ತಲುಪಿ ಸ್ನಾನ ಮಾಡಿ ಗೋಮುಖನ ಜೊತೆ ಸಿಹಿಯಾದ ಹಣ್ಣುಗಳನ್ನು ತಿಂದು ಹಸಿವು ಬಾಯಾರಿಕೆಗಳನ್ನು ನೀಗಿಸಿಕೊಂಡನು.

೪೨. ರಾತ್ರಿಯಲ್ಲಿ ಕುದುರೆಗೆ ಹುಲ್ಲು ನೀಡಿ ಕೆಳಗೆ ಕಟ್ಟಿಹಾಕಿ ಮಂತ್ರಿಯೊಂದಿಗೆ ತಾನು ತಂಗಲೆಂದು ದೊಡ್ಡ ಮರವೊಂದನ್ನು ಏರಿದನು.

೪೩. ಅದರ ಕಾಂಡದ ಕೊಂಬೆಯಲ್ಲಿ ಮಲಗಿದ ಅವನಿಗೆ ಕುದುರೆಯು ಹೆದರಿಕೆಯಿಂದ ಕೆನೆಯುವುದು ಕೇಳಿಸಿತು. ಆಗ ಎಚ್ಚರಗೊಂಡ ಅವನು ಸಿಂಹವೊಂದು ಕೆಳಗಡೆ ಬಂದಿರುವುದನ್ನು ನೋಡಿದನು.

೪೪. ಕುದುರೆಯನ್ನು ರಕ್ಷಿಸಲು ಕೆಳಗೆ ಇಳಿಯಲು ಪ್ರಾರಂಭಿಸಿದ ಅವನಿಗೆ ಗೋಮುಖನು ಹೇಳಿದನು. "ಏನಿದು ? ನಿನ್ನ ರಕ್ಷಣೆಯ ಬಗ್ಗೆ ಅಪೇಕ್ಷೆ ಇಲ್ಲದೆ ವಿಚಾರ ಮಾಡದೆಯೇ ವರ್ತಿಸುತ್ತಿದ್ದೀಯೆ ?

೪೫. ರಾಜರಿಗೆ ಶರೀರವೇ ಮೂಲ. ಪ್ರಭುತ್ವಕ್ಕೆ ಮಂತ್ರಾಲೋಚನೆಯೇ ಮೂಲ. ಹೀಗಿರುವಾಗ ಉಗುರು ಹಲ್ಲುಗಳನ್ನು ಆಯುಧವಾಗುಳ್ಳ ಹೀನ ಪ್ರಾಣಿಗಳೊಂದಿಗೆ ಯುದ್ಧ ಮಾಡಲು ಹೇಗೆ ಇಚ್ಛಿಸುವೆ ?

೪೬. ಇದರಿಂದ ರಕ್ಷಣೆ ಪಡೆಯಲೆಂದೇ ನಾವಿಬ್ಬರೂ ಈಗ ಮರದ ಮೇಲಿರುವುದಲ್ಲವೇ !' ಹೀಗೆ ಗೋಮುಖನ ಮಾತಿನಿಂದ ತಡೆಯಲ್ಪಟ್ಟ ಯುವರಾಜನು ಕೂಡಲೇ,

---

ಸಾಯಂ ಸ್ವಚ್ಛಸರಃ ಪ್ರಾಪ್ಯ ವನಂ ಸ್ವಾದುತರೈಃ ಫಲೈಃ ।
ಜಲೈಶ್ಚಾಹಾರಪಾನಾದಿ ಸ್ನಾತಶ್ಚಕ್ರೇ ಸಗೋಮುಖಃ ॥ ೪೧

ನಕ್ತಂ ಚ ತತ್ರ ಸಂಯಮ್ಯ ದತ್ತಘಾಸೌ ಹಯಾವಧಃ ।
ಮಂತ್ರಿದ್ವಿತೀಯೋ ವಾಸಾರ್ಥಮಾರುರೋಹ ಮಹಾತರುಮ್ ॥ ೪೨

ತಸ್ಯೋರುಶಾಖಾಸಂವಿಷ್ಟೋ ವಿತ್ರಸ್ತಹಯಹೇಷಿತೈಃ ।
ಪ್ರಬುದ್ಧಃ ಸೋಽಂತರಾಧಸ್ತಾತ್ ಅಪಶ್ಯತ್ ಸಿಂಹಮಾಗತಮ್ ॥ ೪೩

ದೃಷ್ಟ್ವಾ ಚಾವತಿತೀರ್ಷುಂ ತಮಶ್ವಾರ್ಥೇ ಗೋಮುಖೋಽಬ್ರವೀತ್ ।
ಅಹೋ ದೇಹಾನಪೇಕ್ಷಃ ಸನ್ನಮಂತ್ರೇಣೇವ ಚೇಷ್ಟಸೇ ॥ ೪೪

ಶರೀರಮೂಲಾ ಹಿ ನೃಪಾ ಮಂತ್ರಮೂಲಾ ಚ ರಾಜತಾ ।
ಯುಯುತ್ಸಸೇ ತತ್ತಿರ್ಯಗ್ಭಿರ್ನಖದಂಷ್ಟ್ರಾಯುಧೈಃ ಕಥಮ್ ॥ ೪೫

ಏತದ್ರಕ್ಷಾರ್ಥಮೇವಾವಾಮಿಹಾರೂಢೌ ಹಿ ಸಂಪ್ರತಿ ।
ಇತಿ ಗೋಮುಖವಾಗ್ರುದ್ಧೋ ಯುವರಾಜಃ ಸ ತತ್ಕ್ಷಣಮ್ ॥ ೪೬

೪೭. ಕುದುರೆಯನ್ನು ಕೊಲ್ಲುತ್ತಿದ್ದ ಆ ಸಿಂಹವನ್ನು ಕಂಡು ಮರದ ಮೇಲಿಂದ ಚಾಕುವನ್ನು ವೇಗವಾಗಿ ಎಸೆದನು. ಅದು ಸಿಂಹಕ್ಕೆ ಚುಚ್ಚಿಕೊಂಡಿತು.

೪೮. ಆದರೂ ಬಲಿಷ್ಠವಾದ ಆ ಸಿಂಹವು ಈ ಕುದುರೆಯನ್ನು ಕೊಂದು ಇನ್ನೊಂದು ಕುದುರೆಯನ್ನೂ ಕೊಂದು ಬಿಟ್ಟಿತು.

೪೯. ಆಗ ವತ್ಸರಾಜನ ಮಗನು ಗೋಮುಖನಿಂದ ಖಡ್ಗವನ್ನು ತೆಗೆದುಕೊಂಡು ಎಸೆದು ಆ ಸಿಂಹವನ್ನು ಎರಡು ಹೋಳಾಗಿ ಕತ್ತರಿಸಿಬಿಟ್ಟನು.

೫೦. ಆಮೇಲೆ ಕೆಳಗಿಳಿದು ಸಿಂಹದ ಶರೀರದಿಂದ ಚಾಕುವನ್ನೂ ಖಡ್ಗವನ್ನೂ ತೆಗೆದುಕೊಂಡು ಮರವನ್ನೇರಿ ಆ ರಾತ್ರಿಯನ್ನು ಅಲ್ಲಿಯೇ ಮರದ ಮೇಲೆ ಕಳೆದನು.

೫೧. ಬೆಳಿಗ್ಗೆ ಅಲ್ಲಿಂದ ಕೆಳಗಿಳಿದ ನರವಾಹನದತ್ತನು ಗೋಮುಖನೊಂದಿಗೆ ಕರ್ಪೂರಿಕೆಯನ್ನು ಅರಸಿಕೊಂಡು ಮುಂದೆ ಹೊರಟನು.

೫೨. ಸಿಂಹವು ವಾಹನವನ್ನು ಕೊಂದಿದ್ದರಿಂದ ಕಾಲುನಡಿಗೆಯಲ್ಲಿ ಹೋಗುತ್ತಿದ್ದ ಅವನನ್ನು ವಿನೋದ ಪಡಿಸಲು ಗೋಮುಖನು ಕಾಡು ಮಾರ್ಗದಲ್ಲಿ ಹೀಗೆಂದನು.

೫೩. ಒಡೆಯನೇ, ಈ ಪ್ರಸಂಗಕ್ಕೆ ತಕ್ಕ ಕಥೆಯೊಂದನ್ನು ಹೇಳುತ್ತೇನೆ ಕೇಳು: ಇಲ್ಲಿ ಅಲಕಾಪುರಿಯನ್ನು ಮೀರಿಸಿದ ಐರಾವತಿಯೆಂಬ ಪಟ್ಟಣವೊಂದಿದೆ.

---

ಸಿಂಹಂ ತಂ ತುರಗಂ ಘ್ನಂತಂ ದೃಷ್ಟ್ವಾ ಛುರಿಕಯಾ ದ್ರುತಮ್ ।
ಆಜಘಾನ ತರೋಃ ಪೃಷ್ಠಾತ್ ಕ್ಷಿಪ್ತಯಾ ಸ ನಿಮಗ್ನಯಾ ॥ ೪೭

ಸ ತಥಾ ತೇನ ವಿದ್ಧೋಽಪಿ ತಂ ಹತ್ವೈವ ಹಯಂ ಬಲೀ ।
ಸಿಂಹೋ ವ್ಯಾಪಾದಯಾಮಾಸ ದ್ವಿತೀಯಮಪಿ ವಾಜಿನಮ್ ॥ ೪೮

ತತೋ ವತ್ಸೇಶ್ವರಸುತಃ ಖಡ್ಗಮಾದಾಯ ಗೋಮುಖಾತ್ ।
ತೇನ ಕ್ಷಿಪ್ತೇನ ಮಧ್ಯೇ ತಂ ಸಿಂಹಂ ದ್ವೇಧಾ ಚಕಾರ ಸಃ ॥ ೪೯

ಅವತೀರ್ಯ ಚ ಸಂಗೃಹ್ಯ ಕೃಪಾಣೀಂ ಸಿಂಹದೇಹತಃ ।
ಖಡ್ಗಂ ಚಾರುಹ್ಯ ಸೋತ್ರೈವ ವೃಕ್ಷೇ ರಾತ್ರಿಮುವಾಸ ತಾಮ್ ॥ ೫೦

ಪ್ರಾತಸ್ತತೋಽವತೀರ್ಣಶ್ಚ ಪ್ರತಸ್ಥೇ ಗೋಮುಖಾನ್ವಿತಃ ।
ನರವಾಹನದತ್ತೋಽತಸ್ತಾಂ ಸ ಕರ್ಪೂರಿಕಾಂ ಪ್ರತಿ ॥ ೫೧

ಅಥ ಪದ್ಭ್ಯಾಂ ಪ್ರಯಾಂತಂ ತಂ ಸಿಂಹೇನ ಹತವಾಹನಮ್ ।
ದೃಷ್ಟ್ವಾ ವಿನೋದಯನ್ನೇವಮುವಾಚ ಪಥಿ ಗೋಮುಖಃ ॥ ೫೨

ದೇವ ಪ್ರಾಸಂಗಿಕೀಮೇತಾಂ ಕಥಾಮಾಖ್ಯಾಮಿ ತೇ ಶೃಣು ।
ಅಸ್ತೀಹೈರಾವತೀ ನಾಮ ನಗರೀ ವಿಜಿತಾಲಕಾ ॥ ೫೩

೫೪. ಅದರಲ್ಲಿ ಪರಿತ್ಯಾಗಸೇನನೆಂಬ ರಾಜನು ಇದ್ದನು. ಅವನಿಗೆ ಪ್ರಾಣಕ್ಕೆ ಸಮರಾದ ಇಬ್ಬರು ಮಡದಿಯರಿದ್ದರು.

೫೫. ಒಬ್ಬಳು ಅವನ ಮಂತ್ರಿಯ ಮಗಳು. ಅವಳ ಹೆಸರು ಅಧಿಕಸಂಗಮೆ. ಮತ್ತೊಬ್ಬಳು ರಾಜಮನೆತನದವಳು. ಇವಳ ಹೆಸರು ಕಾವ್ಯಾಲಂಕಾರೆ.

೫೬. (ಆದರೂ) ಮಕ್ಕಳಿರದಿದ್ದ ರಾಜನು ಮಗನ ಸಲುವಾಗಿ ಅವರಿಬ್ಬರೊಂದಿಗೆ ಉಪವಾಸದಿಂದಿದ್ದು, ದರ್ಭೆಯ ಮೇಲೆ ಮಲಗಿ ಅಂಬಿಕೆಯನ್ನು ಉದ್ದೇಶಿಸಿ ತಪಸ್ಸು ಮಾಡಿದನು.

೫೭. ಆಗ ಭಕ್ತವತ್ಸಲೆಯಾದ ದೇವಿಯು ಅವನ ತಪಸ್ಸಿನಿಂದ ಸಂತುಷ್ಟಳಾಗಿ ಕನಸಿನಲ್ಲಿ ಕಾಣಿಸಿಕೊಂಡು ಎರಡು ದಿವ್ಯ ಫಲಗಳನ್ನು ನೀಡಿ ಅಪ್ಪಣೆ ಮಾಡಿದಳು.

೫೮. "ರಾಜನೇ ಏಳು. ಈ ಹಣ್ಣುಗಳನ್ನು ನಿನ್ನ ಮಡದಿಯರಿಗೆ ನೀಡು. ಮುಂದೆ ನಿನಗೆ ವೀರರಾದ ಇಬ್ಬರು ಗಂಡುಮಕ್ಕಳು ಹುಟ್ಟಲಿದ್ದಾರೆ.'

೫೯. ಹೀಗೆ ಹೇಳಿ ಗೌರಿಯು ಕಣ್ಮರೆಯಾಗಲು ಎಚ್ಚರಗೊಂಡ ರಾಜನು ಬೆಳಿಗ್ಗೆ ತನ್ನ ಕೈಯಲ್ಲಿ ಎರಡು ಫಲಗಳಿರುವುದನ್ನು ಕಂಡು ಆನಂದಿಸಿದನು.

೬೦. ಆ ಸ್ವಪ್ನದಿಂದ ಸಂತುಷ್ಟನಾಗಿದ್ದ ಅವನು ಅವರಿಗೆ ಅದನ್ನು ಹೇಳಿ ಸ್ನಾನಮಾಡಿ ಗೌರಿಯನ್ನು ಪೂಜಿಸಿ, ವ್ರತದ ಪಾರಣೆಯನ್ನು ಮಾಡಿದನು.

---

ತಸ್ಯಾಮಭೂತ್ ಪರಿತ್ಯಾಗಸೇನೋ ನಾಮ ಮಹೀಪತಿಃ ।
ಬಭೂವತುಶ್ಚ ತಸ್ಯ ದ್ವೇ ದೇವ್ಯೌ ಪ್ರಾಣಸಮೇ ಪ್ರಿಯೇ ॥ ೫೪
ಏಕಾ ಸ್ವಮಂತ್ರಿತನಯಾ ನಾಮತೋಽಧಿಕಸಂಗಮಾ ।
ನಾಮ್ನಾ ತು ಕಾವ್ಯಾಲಂಕಾರಾ ದ್ವಿತೀಯಾ ರಾಜವಂಶಜಾ ॥ ೫೫
ತಾಭ್ಯಾಂ ಸಮಂ ಚ ಸೋಽಪುತ್ರೋ ರಾಜಾ ಪುತ್ರಾರ್ಥಮಂಬಿಕಾಮ್ ।
ಆರಾಧಯನ್ನಿರಾಹಾರೋ ದರ್ಭಶಾಯೀ ವ್ಯಧಾತ್ತಪಃ ॥ ೫೬
ತತಃ ಸಾ ತಂ ತಪಸ್ತುಷ್ಟಾ ಸ್ವಪ್ನೇ ದತ್ವಾ ಫಲದ್ವಯಮ್ ।
ದಿವ್ಯಂ ಸಮಾದಿಶತ್ ಸಾಕ್ಷಾದ್ಭವಾನೀ ಭಕ್ತವತ್ಸಲಾ ॥ ೫೭
ಉತ್ತಿಷ್ಠ ದೇಹಿ ದಾರೇಭ್ಯೋ ಭಕ್ಷ್ಯಮೇತತ್ ಫಲದ್ವಯಮ್ ।
ತತೋ ರಾಜನ್ ಪ್ರವೀರೌ ತೇ ಜನಿಷ್ಯೇತೇ ಸುತಾವುಭೌ ॥ ೫೮
ಇತ್ಯುಕ್ತ್ವಾಂತರ್ದಧೇ ಗೌರೀ ಪ್ರಬುದ್ಧಃ ಸ ಚ ಭೂಪತಿಃ ।
ನನಂದ ಪ್ರಾತರುತ್ಥಾಯ ಹಸ್ತೇ ಪಶ್ಯನ್ನುಭೇ ಫಲೇ ॥ ೫೯
ಸ್ವಪ್ನೇನ ತೇನ ಚಾನಂದ್ಯ ವರ್ಣಿತೇನ ಪರಿಗ್ರಹಮ್ ।
ಸ್ನಾತೋ ಮೃಡಾನೀಮಭ್ಯರ್ಚ್ಯ ಚಕಾರ ವ್ರತಪಾರಣಮ್ ॥ ೬೦

೬೧. ರಾತ್ರಿ ತನ್ನ ಮೊದಲ ರಾಣಿಯ ಬಳಿಗೈದು ಆ ಅಧಿಕಸಂಗಮೆಗೆ ಒಂದು ಹಣ್ಣನ್ನು ಕೊಡಲು ಅವಳು ಕೂಡಲೇ ಅದನ್ನು ಭುಂಜಿಸಿದಳು.

೬೨. ಆಮೇಲೆ ಆಕೆಯ ತಂದೆಯಾದ ಮಂತ್ರಿಯ ಮೇಲಣ ಗೌರವದಿಂದಾಗಿ ಅಂದು ರಾತ್ರಿ ಅಲ್ಲಿಯೇ ಇದ್ದನು.

೬೩. ಎರಡನೆಯ ರಾಣಿಗೆಂದು ಮೀಸಲಿಟ್ಟಿದ್ದ ಎರಡನೆಯ ಫಲವನ್ನು ತನ್ನ ಹಾಸಿಗೆಯಲ್ಲಿ ತಲೆಯ ಬಳಿ ಇಟ್ಟುಕೊಂಡನು.

೬೪–೬೫. ರಾಜನು ನಿದ್ರಿಸುತ್ತಿದ್ದಾಗ ಮೊದಲ ರಾಣಿಯಾದ ಅಧಿಕ ಸಂಗಮೆಯು ಎದ್ದು ತನಗೇ ಇಬ್ಬರು ವೀರ ಕುಮಾರರು ಹುಟ್ಟಲೆಂದು ಆಸೆಪಟ್ಟು ಅವನ ತಲೆಯ ಬಳಿಯಲ್ಲಿಟ್ಟುಕೊಂಡಿದ್ದ ಎರಡನೆಯ ಹಣ್ಣನ್ನೂ ತಿಂದುಬಿಟ್ಟಳು. ಹೆಂಗಸರಿಗೆ ಸವತಿಯರ ಮೇಲೆ ಹೊಟ್ಟೆಕಿಚ್ಚು ಅತ್ಯಂತ ಸಹಜವಾದದ್ದಲ್ಲವೇ !

೬೬ ಬೆಳಿಗ್ಗೆ ಎದ್ದ ರಾಜನು ಎರಡನೆಯ ಹಣ್ಣನ್ನು ಹುಡುಕುತ್ತಿರುವಾಗ ಅದನ್ನೂ ನಾನೇ ತಿಂದೆನೆಂದು ಅವಳು ಹೇಳಿದಳು.

೬೭ ಬೇಸರಪಟ್ಟುಕೊಂಡ ರಾಜನು ಹಗಲನ್ನು ಹೇಗೋ ಕಳೆದು ರಾತ್ರಿ ಎರಡನೆಯ ರಾಣಿಯ ಅಂತಃಪುರಕ್ಕೆ ಹೋದನು.

---

ನಕ್ತಂ ಚೋಪೇತ್ಯ ತಾಂ ಪೂರ್ವಾಂ ರಾಜ್ಞೀಮಧಿಕಸಂಗಮಾಮ್ ।
ಫಲಮೇಕಂ ದದೌ ತಸ್ಯೈ ಸಾ ಚ ತದ್ಬುಭುಜೇ ತದಾ ॥ ೬೧

ತತಸ್ತನ್ಮಂದಿರೇ ತಸ್ಯಾಮುವಾಸ ಸ ನೃಪೋ ನಿಶಿ ।
ತತ್ಪಿತುರ್ಮಂತ್ರಿಮುಖ್ಯಸ್ಯ ನಿಜಸ್ಯ ಕಿಲ ಗೌರವಾತ್ ॥ ೬೨

ತಚ್ಚಾತ್ರ ನಿದಧೇ ಸುಪ್ತಸ್ಯಾತ್ಮಶಯ್ಯಾಶಿರೋಂತಿಕೇ ।
ದ್ವಿತೀಯಸ್ಯಾಃ ಕೃತೇ ದೇವ್ಯಾ ದ್ವಿತೀಯಂ ಕಲ್ಪಿತಂ ಫಲಮ್ ॥ ೬೩

ಸುಪ್ತಸ್ಯಾತ್ರ ನೃಪಸ್ಯಾಥ ರಾಜ್ಞೀ ಸಾಧಿಕಸಂಗಮಾ ।
ಉತ್ಥಾಯಾತ್ಮನ ಏವ ದ್ವಾವಿಚ್ಛಂತೀ ಸದೃಶೌ ಸುತೌ ॥ ೬೪

ಶೀರ್ಷಾಂತಾದ್ಭಕ್ಷಯಾಮಾಸ ದ್ವಿತೀಯಮಪಿ ತತ್ಫಲಮ್ ।
ನಿಸರ್ಗಸಿದ್ಧೋ ನಾರೀಣಾಂ ಸಪತ್ನೀಷು ಹಿ ಮತ್ಸರಃ ॥ ೬೫

ಪ್ರಾತಶ್ಚೋತ್ಥಾಯ ಚಿನ್ವಾನಂ ತತ್ಫಲಂ ತಂ ಮಹೀಪತಿಮ್ ।
ಮಯೈವ ತತ್ಫಲಂ ಭುಕ್ತಂ ದ್ವಿತೀಯಮಿತಿ ಸಾಬ್ರವೀತ್ ॥ ೬೬

ತತಃ ಸ ರಾಜಾ ವಿಮನಾ ನಿರ್ಗತ್ಯಾತೀತ್ಯ ವಾಸರಮ್ ।
ನಕ್ತಂ ತಸ್ಯಾ ದ್ವಿತೀಯಸ್ಯಾ ದೇವ್ಯಾ ವಾಸಗೃಹಂ ಯಯೌ ॥ ೬೭

೬೮. ಅವಳು ಎರಡನೆಯ ಹಣ್ಣನ್ನು ಬೇಡಿದಾಗ ಅವಳಿಗೆ ಹೇಳಿದನು. 'ನಾನು ಮಲಗಿದ್ದಾಗ ನಿನ್ನ ಸವತಿಯು ಮೋಸದಿಂದ ಅದನ್ನೂ ತಿಂದುಬಿಟ್ಟಳು.'

೬೯. ಕಾವ್ಯಾಲಂಕಾರೆಯು ಪುತ್ರಪ್ರಾಪ್ತಿಗೆ ಕಾರಣವಾಗಿದ್ದ ಆ ಹಣ್ಣು ಲಭ್ಯವಾಗದ್ದರಿಂದ ಬಹಳ ದುಃಖಿತಳಾಗಿ ಸುಮ್ಮನಾದಳು.

೭೦. ದಿನಗಳು ಕಳೆಯಲಾಗಿ ರಾಣಿ ಅಧಿಕಸಂಗಮೆಯು ಗರ್ಭಿಣಿಯಾದಳು ಮತ್ತು ಸಕಾಲದಲ್ಲಿ ಒಟ್ಟಿಗೆ ಇಬ್ಬರು ಗಂಡುಮಕ್ಕಳನ್ನು ಹೆತ್ತಳು.

೭೧. ಪರಿತ್ಯಾಗಸೇನ ಮಹಾರಾಜನ ಆಸೆಯು ಅವರು ಹುಟ್ಟಿದ್ದರಿಂದ ನೆರವೇರಿತಾದ್ದರಿಂದ ಅವನು ಉತ್ಸವವನ್ನಾಚರಿಸಿ ಸಂತೋಷಪಟ್ಟನು.

೭೨. ಅವರಿಬ್ಬರಲ್ಲಿ ಹಿರಿಯನಾದ ಕನ್ನೈದಿಲೆಯಂತಹ ಕಣ್ಣುಳ್ಳ ಅದ್ಭುತ ರೂಪದವನಿಗೆ ಇಂದೀವರ ಸೇನನೆಂದು ನಾಮಕರಣ ಮಾಡಿದನು.

೭೩. ಚಿಕ್ಕವನಿಗೆ ಅವನ ತಾಯಿಯು (ಬೇರೆಯವರ) ಇಚ್ಛೆಗೆ ವಿರುದ್ಧವಾಗಿ ಹಣ್ಣನ್ನು ತಿಂದಿದ್ದ ಕಾರಣ ಅನಿಚ್ಛಾಸೇನನೆಂದು ಹೆಸರಿಟ್ಟನು.

೭೪. ಆ ರಾಜನ ಎರಡನೆಯ ಪತ್ನಿ ಕಾವ್ಯಾಲಂಕಾರೆಯು ಅದನ್ನು ನೋಡಿ ಅಸೂಯೆಯಿಂದ ಆಲೋಚನೆ ಮಾಡಿದಳು.

---

ತತ್ರ ತತ್ಫಲಮೇಕಂ ತಾಂ ಯಾಚಮಾನಾಂ ಚ ಸೋಽಬ್ರವೀತ್ ।
ಸುಪ್ತಸ್ಯ ಮೇ ತದಪ್ಯಶ್ನಾತ್ಸಪತ್ನೀ ತೇ ಛಲಾದಿತಿ ॥ ೬೮

ತತಃ ಸಾ ತನಯೋತ್ಪತ್ತಿಹೇತುಮಪ್ರಾಪ್ಯ ತತ್ಫಲಮ್ ।
ಬಭೂವ ಕಾವ್ಯಾಲಂಕಾರಾ ರಾಜ್ಞೀ ತೂಷ್ಣೀಂ ಸುದುಃಖಿತಾ ॥ ೬೯

ಗಚ್ಛತ್ಸ್ವಥ ದಿನೇಷ್ವತ್ರ ರಾಜ್ಞೀ ಸಾಧಿಕಸಂಗಮಾ ।
ಸಗರ್ಭಾಭೂದಸೂತಾಥ ಕಾಲೇ ದ್ವೌ ಯುಗಪತ್ಸುತೌ ॥ ೭೦

ರಾಜಾಪಿ ಸ ತದುತ್ಪತ್ತಿಫಲಿತಸ್ವಮನೋರಥಃ ।
ನಂದತಿ ಸ್ಮ ಪರಿತ್ಯಾಗಸೇನಃ ಕೃತಮಹೋತ್ಸವಃ ॥ ೭೧

ತಯೋಶ್ಚ ಸುತಯೋರ್ಜ್ಯೇಷ್ಠಮಿಂದೀವರನಿಭೇಕ್ಷಣಮ್ ।
ನಾಮ್ನೇಂದೀವರಸೇನಂ ಸ ನೃಪಶ್ಚಕ್ರೇಽದ್ಭುತಾಕೃತಿಮ್ ॥ ೭೨

ವಿದಧೇ ಚ ಕನೀಯಾಂಸಮನಿಚ್ಛಾಸೇನಮಾಖ್ಯಯಾ ।
ತಜ್ಜನನ್ಯಾ ಯತೋ ಭುಕ್ತಂ ಫಲಂ ತತ್ತದನಿಚ್ಛಯಾ ॥ ೭೩

ಅಥಾತ್ರ ತಸ್ಯ ರಾಜ್ಞೀ ಸಾ ದ್ವಿತೀಯಾ ಭೂಮಿಪಸ್ಯ ತತ್ ।
ಆಲೋಕ್ಯ ಕಾವ್ಯಾಲಂಕಾರಾ ಸಾಮರ್ಷಾ ಸಮಚಿಂತಯತ್ ॥ ೭೪

೭೫. "ಈ ನನ್ನ ಸವತಿಯು ಮಗನನ್ನು ಪಡೆಯುವಲ್ಲಿ ನನಗೆ ಮೋಸ ಮಾಡಿದ್ದಾಳೆ. ಆದ್ದರಿಂದ ಇವಳಿಗೆ ಸಿಟ್ಟಿಗೆ ತಕ್ಕ ಪ್ರತೀಕಾರವನ್ನು ಮಾಡಲೇಬೇಕು.

೭೬. ಈಕೆಯ ಮಕ್ಕಳಿಬ್ಬರನ್ನೂ ಉಪಾಯಮಾಡಿ ನಾನು ಕೊಲ್ಲಬೇಕು' ಎಂದು ನಿರ್ಧರಿಸಿ ಅದಕ್ಕೆ ತಕ್ಕ ಉಪಾಯವನ್ನು ಹುಡುಕುತ್ತಾ ಇದ್ದಳು.

೭೭. ಆ ರಾಜಕುಮಾರರು ಬೆಳೆಯುತ್ತ ಹೋದಂತೆಲ್ಲ ಇವಳ ಹೃದಯದಲ್ಲಿ ದ್ವೇಷದ ಮರವು ಬೆಳೆಯುತ್ತ ಹೋಯಿತು.

೭೮. ಕ್ರಮೇಣ ಯುವಕರೂ ಬಲಶಾಲಿಗಳೂ ಆದ ಆ ರಾಜಕುಮಾರರು ಜಗತ್ತನ್ನು ಗೆಲ್ಲಬಯಸಿ ತಮ್ಮ ತಂದೆಗೆ ಬಿನ್ನಹ ಮಾಡಿದರು :

೭೯. 'ನಾವಿಬ್ಬರೂ ಶಸ್ತ್ರಾಸ್ತ್ರಪ್ರಯೋಗಗಳನ್ನು ಕಲಿತಿದ್ದೇವೆ. ಯುವಕರಾಗಿದ್ದೇವೆ. ಹೀಗಿದ್ದೂ ವ್ಯರ್ಥವಾದ ತೋಳುಗಳನ್ನು ಇಟ್ಟುಕೊಂಡು ಹೇಗೆ ಇರೋಣ ?

೮೦. ದಿಗ್ವಿಜಯ ಮಾಡಬಯಸದ ಕ್ಷತ್ರಿಯನ ತೋಳುಗಳಿಗೆ ಧಿಕ್ಕಾರ. ಯೌವನಕ್ಕೂ ಧಿಕ್ಕಾರ. ಆದ್ದರಿಂದ ತಂದೆಯೇ ! ದಿಗ್ವಿಜಯಕ್ಕೆ ಹೊರಡಲು ನಮಗೆ ಅನುಮತಿ ನೀಡು'.

೮೧. ಮಕ್ಕಳಿಬ್ಬರೂ ಹೀಗೆ ಹೇಳಿದ್ದನ್ನು ಕೇಳಿ ಸಂತೋಷಪಟ್ಟ ರಾಜ ಪರಿತ್ಯಾಗಸೇನನು ಸಮ್ಮತಿ ನೀಡಿ ಅವರ ಯಾತ್ರೆಗೆ ಶುಭಾರಂಭವನ್ನು ನಡೆಸಿಕೊಟ್ಟನು.

---

ಅಹೋ ಅಹಂ ಸುತಪ್ರಾಪ್ತೇಃ ಸಪತ್ನ್ಯಾ ವಂಚಿತೈತಯಾ ।
ತದೇತಸ್ಯಾ ಮಯಾವಶ್ಯಂ ಕಾರ್ಯಾ ಮನ್ಯುಪ್ರತಿಕ್ರಿಯಾ ॥ ೭೫

ವಿನಾಶ್ಯೌ ತನಯಾವೇತಾವೇತದೀಯೌ ಸ್ವಯುಕ್ತಿತಃ ।
ಇತಿ ಸಂಚಿಂತ್ಯ ಸಾ ತಸ್ಥೌ ತದುಪಾಯಂ ವಿಚಿನ್ವತೀ ॥ ೭೬

ಯಥಾ ಯಥಾ ಚ ತೌ ತತ್ರ ವವೃಧಾತೇ ನೃಪಾತ್ಮಜೌ ।
ತಥಾ ತಥಾಸ್ಯಾ ವವೃಧೇ ಹೃದಯೇ ವೈರಪಾದಪಃ ॥ ೭೭

ಕ್ರಮೇಣ ಯೌವನಸ್ಥೌ ಚ ತೌ ವಿಜ್ಞಾಪಯತಃ ಸ್ಮ ತಮ್ ।
ರಾಜಪುತ್ರೌ ಸ್ವಪಿತರಂ ಜಿಗೀಷೂ ಭುಜಶಾಲಿನೌ ॥ ೭೮

ಅಸ್ತ್ರೇಷು ಶಿಕ್ಷಿತೌ ತಾವದಾವಾಂ ಸಂಪ್ರಾಪ್ತಯೌವನೌ ।
ತದ್ಭುಜಾನ್ನಿಷ್ಫಲಾನೇತಾನ್ ಬಿಭ್ರತೌ ಕಥಮಾಸ್ವಹೇ ॥ ೭೯

ಕ್ಷತ್ರಿಯಸ್ಯಾಜಿಗೀಷಸ್ಯ ಧಿಗ್‌ಬಾಹೂ ಧಿಕ್ ಚ ಯೌವನಮ್ ।
ಅತೋಽನುಜಾನೀಹ್ಯಧುನಾ ತಾತ ದಿಗ್ವಿಜಯಾಯ ನೌ ॥ ೮೦

ಇತಿ ಸೂನ್ವೋರ್ವಚಃ ಶ್ರುತ್ವಾ ರಾಜಾ ಹೃಷ್ಟೋಽನುಮನ್ಯ ಸಃ ।
ಯಾತ್ರಾರಂಭಂ ಪರಿತ್ಯಾಗಸೇನಃ ಸಂವಿದಧೇ ತಯೋಃ ॥ ೮೧

೮೨. "ಅಕಸ್ಮಾತ್ತಾಗಿ ನಿಮಗೆ ಪ್ರಯಾಣದಲ್ಲಿ ಏನಾದರೂ ಕಠಿಣಪರಿಸ್ಥಿತಿಯೇರ್ಪಟ್ಟರೆ ಆಗ ಸಂಕಟನಿವಾರಕಳಾದ ಅಂಬಿಕಾ ದೇವಿಯನ್ನು ನೆನೆಸಿಕೊಳ್ಳಿರಿ. ಏಕೆಂದರೆ ನನಗೆ ನಿಮ್ಮಿಬ್ಬರನ್ನೂ ಕೊಟ್ಟವಳು ಅವಳೇ.'

೮೩. ಎಂದು ನುಡಿದ ರಾಜನು ಸೈನಿಕರು ಹಾಗೂ ಸಾಮಂತರೊಂದಿಗೆ ತಾಯಿಯಿಂದ ಮಂಗಳಾಶೀರ್ವಾದ ಪಡೆದು ಅವರನ್ನು ಯಾತ್ರೆಗೆ ಕಳಿಸಿಕೊಟ್ಟನು.

೮೪. ತನ್ನ ಮುಖ್ಯ ಮಂತ್ರಿಯಾದ ಹಾಗೂ ಅವರ ತಾಯಿಯ ತಂದೆಯಾದ ಪ್ರಥಮಸಂಗಮ ಎಂಬ ಪ್ರಜ್ಞಾವಂತನನ್ನೂ ಕಳುಹಿಸಿಕೊಟ್ಟನು.

೮೫. ಅನಂತರ ಬಲಶಾಲಿಗಳಾದ ಆ ರಾಜಪುತ್ರಸೋದರರಿಬ್ಬರೂ ಪರಾಕ್ರಮದಿಂದ ಪ್ರಸಿದ್ಧರಾಗಿ ಮೊದಲಿಗೆ ಪೂರ್ವದಿಕ್ಕಿಗೆ ಹೋಗಿ ಜಯಭೇರಿ ಹೊಡೆದರು.

೮೬. ಮುಂದೆ ತಡೆಯುವವರಿಲ್ಲದ ಆ ವೀರರು ಅನೇಕ ರಾಜರನ್ನು ಸಂಧಿಸಿ ತಮ್ಮ ಪ್ರತಾಪವನ್ನು ನೆಲೆಗೊಳಿಸಿ ಮುಂದೆ ದಿಗ್ವಿಜಯ ಸಾಧಿಸಲು ದಕ್ಷಿಣದಿಕ್ಕಿಗೆ ಹೋದರು.

೮೭. ಆ ಸಂಗತಿಯನ್ನು ಕೇಳಿ ಅವರ ತಾಯಿತಂದೆಯರು ತುಂಬ ಸಂತೋಷಪಟ್ಟರು. ಮಲತಾಯಿಯಾದರೋ ದ್ವೇಷದ ಬೆಂಕಿಯಿಂದ ಒಳಗೇ ಉರಿದುಹೋದಳು.

---

ಯದ್ಯತ್ರ ಸಂಕಟಂ ಜಾತು ಯುವಯೋಃ ಸ್ಯಾತ್ತದಾಂಬಿಕಾ ।
ಸ್ಮರ್ತವ್ಯಾರ್ತಿಹರಾ ದೇವೀ ತಯಾ ದತ್ತೌ ಹಿ ಮೇ ಯುವಾಮ್ ॥ ೮೨

ಇತ್ಯುಕ್ತ್ವಾ ಚ ಸ ತೌ ರಾಜಾ ಯಾತ್ರಾಯೈ ಪ್ರಾಹಿಣೋತ್ಸುತೌ ।
ಯುಕ್ತೌ ಸೈನ್ಯೈಃ ಸಸಾಮಂತೈರ್ಜನನ್ಯಾ ಕೃತಮಂಗಲೌ ॥ ೮೩

ನಿಜಂ ಮಂತ್ರಿಪ್ರಧಾನಂ ಚ ಪಶ್ಚಾನ್ಮಾತಾಮಹಂ ತಯೋಃ ।
ಪ್ರಜ್ಞಾಸಹಾಯಂ ವ್ಯಸೃಜನ್ನಾಮ್ನಾ ಪ್ರಥಮಸಂಗಮಮ್ ॥ ೮೪

ಅಥ ತೌ ರಾಜಪುತ್ರೌ ದ್ವೌ ಸಬಲೌ ಭ್ರಾತರೌ ಕ್ರಮಾತ್ ।
ಗತ್ವಾ ಪ್ರಾಚೀಂ ದಿಶಂ ಪೂರ್ವಂ ಜಿಗ್ಯತುಃ ಪ್ರಾಜ್ಯವಿಕ್ರಮೌ ॥ ೮೫

ತತೋಽಪ್ರತಿಹತೌ ವೀರೌ ಮಿಲಿತಾನೇಕಪಾರ್ಥಿವೌ ।
ಜೇತುಂ ಸಿದ್ಧಪ್ರತಾಪೌ ತೌ ಜಗ್ಮತುರ್ದಕ್ಷಿಣಾಂ ದಿಶಮ್ ॥ ೮೬

ತಾಂ ಚ ವಾರ್ತಾಂ ತಯೋಃ ಶ್ರುತ್ವಾ ಪಿತರೌ ತೌ ನನಂದತುಃ ।
ಜಜ್ವಾಲಾಪರಮಾತಾ ತು ಸಾಂತರ್ವಿದ್ವೇಷವಹ್ನಿನಾ ॥ ೮೭

೮೮. ಆಮೇಲೆ (ಆ ಕಾವ್ಯಾಲಂಕಾರೆಯು) "ಈ ಇಬ್ಬರು ಮಕ್ಕಳೂ ತಮ್ಮ ತೋಳ್ಬಲದಿಂದ ಭೂಮಿಯನ್ನು ಗೆದ್ದು ನನ್ನನ್ನು ಕೊಂದು, ನನ್ನ ರಾಜ್ಯವನ್ನು ಕಸಿದುಕೊಳ್ಳಲು ಸನ್ನಾಹ ನಡೆಸಿದ್ದಾರೆ.

೮೯. ಆದ್ದರಿಂದ ನೀವು ನನ್ನಲ್ಲಿ ಭಕ್ತಿಯುಳ್ಳವರಾಗಿದ್ದಾರೆ ವಿಚಾರ ಮಾಡದೆಯೇ ನನ್ನ ಮಕ್ಕಳಿಬ್ಬರನ್ನೂ ಕೊಲ್ಲಬೇಕು.'

೯೦–೯೧. ಎಂಬುದಾಗಿ ರಾಜಾಜ್ಞೆಯನ್ನು ಶಿಬಿರದಲ್ಲಿದ್ದ ಸಾಮಂತರಾಜರಿಗೆಲ್ಲ ಆ ದುಷ್ಟೆಯು ಅವನ ಹೆಸರಿನಲ್ಲಿಯೇ ಪತ್ರ ಬರೆದು ಹಣದ ರಾಶಿಯನ್ನು ಕೊಟ್ಟು ಸಂಧಿವಿಗ್ರಹ ಲೇಖಕನು ಕರೆತಂದಿರ ಓಲೆಗಾರನನ್ನು ರಹಸ್ಯವಾಗಿ ಕಳಿಸಿಕೊಟ್ಟಳು.

೯೨. ಆ ಓಲೆಗಾರನು ರಾಜಪುತ್ರರು ಸೈನ್ಯವಿದ್ದಲ್ಲಿಗೆ ಹೋಗಿ ಗುಟ್ಟಾಗಿ ಸಾಮಂತ ರಾಜರಿಗೆ ಆಯಾ ಪತ್ರಗಳನ್ನು ಕೊಟ್ಟನು.

೯೩–೯೪. ಅವರೆಲ್ಲರೂ ಪತ್ರಗಳನ್ನು ಓದಿ, ರಾಜನೀತಿಯು ಎಷ್ಟೊಂದು ಕಠಿಣವೆಂದು ಬಗೆದು, ಒಡೆಯನ ಆಣತಿಯು ಮೀರಲಾಗದ್ದೆಂದೂ ಅರಿತು, ರಾತ್ರಿ ಒಟ್ಟು ಸೇರಿ ಪರ್ಯಾಲೋಚಿಸಿ ಇಬ್ಬರು ರಾಜಕುಮಾರರನ್ನೂ ಅವರ ಗುಣಗಳಿಗೆ ಮಾರುಹೋಗಿದ್ದರೂ ವಿಧಿಯಿಲ್ಲದೆ ಕೊಲ್ಲಲು ನಿಶ್ಚಯಿಸಿದರು.

---

ಏತಾಭ್ಯಾಂ ಭುಜದರ್ಪೇಣ ಪೃಥ್ವೀಂ ಜಿತ್ವಾ ನಿಹತ್ಯ ಮಾಮ್ ।
ರಾಜ್ಯಂ ಮದೀಯಂ ಸ್ವೀಕರ್ತುಂ ಮತ್ಪುತ್ರಾಭ್ಯಾಂ ವಿಚಿಂತಿತಮ್ ॥ ೮೮

ತದ್ಯೂಯಂ ಮಯಿ ಭಕ್ತಾಶ್ಚೇತ್ತದೇತಾವತ್ರ ಮತ್ಸುತೌ ।
ಅವಿಚಾರ್ಯೈವ ಯುಷ್ಮಾಭಿರ್ನಿಹಂತವ್ಯಾವುಭಾವಪಿ ॥ ೮೯

ಇತಿ ತತ್ಕಟಕಸ್ಥೇಭ್ಯಃ ಸಾಮಂತೇಭ್ಯಸ್ತತಃ ಶಠಾ ।
ರಾಜಾದೇಶಂ ತದಾ ರಾಜ್ಞೀ ತನ್ನಾಮ್ನೈವಾಭಿಲಿಖ್ಯ ಸಾ ॥ ೯೦

ಸಂಧಿವಿಗ್ರಹಕಾಯಸ್ಥೇನಾಹೃತೇನಾರ್ಥಸಂಚಯೈಃ ।
ಉಪಾಂಶು ಕಾವ್ಯಾಲಂಕಾರಾ ವ್ಯಸೃಜಲ್ಲೇಖಹಾರಕಮ್ ॥ ೯೧

ಸ ಚ ಗುಪ್ತಂ ತಯೋರ್ಗತ್ವಾ ಕಟಕಂ ರಾಜಪುತ್ರಯೋಃ ।
ಸಾಮಂತೇಭ್ಯೋ ದದೌ ತೇಭ್ಯಸ್ತಾನ್ ಲೇಖಾನ್ ಲೇಖಹಾರಕಃ ॥ ೯೨

ತೇ ವಾಚಯಿತ್ವಾ ತಾನ್ ಸರ್ವೇ ರಾಜನೀತಿಂ ಸುಕರ್ಕಶಾಮ್ ।
ವಿಚಿಂತ್ಯ ತಾಂ ಪ್ರಭೋರಾಜ್ಞಾಮನುಲ್ಲಂಘ್ಯಾಮವೇತ್ಯ ಚ ॥ ೯೩

ರಾತ್ರೌ ಮಿಲಿತ್ವಾ ಸಂಮಂತ್ರ್ಯ ನಿಹಂತುಂ ತೌ ನೃಪಾತ್ಮಜೌ ।
ವಿವಶಾ ನಿಶ್ಚಯಂ ಚಕ್ರುಸ್ತದ್ಗುಣಾವರ್ಜಿತಾ ಅಪಿ ॥ ೯೪

೯೫-೯೬. ಅವರಲ್ಲಿದ್ದ ಮಿತ್ರನೊಬ್ಬನ ಮೂಲಕ ಅದನ್ನೆಲ್ಲ ತಿಳಿಯುತ್ತಲೇ ಅವರ ಮಾತಾಮಹನಾದ ಮಂತ್ರಿಯು ಜೊತೆಯಿದ್ದು ರಾಜಪುತ್ರರಿಗೆ ಇದ್ದ ಸಂಗತಿಯನ್ನು ಅರುಹಿ ಯಾರಿಗೂ ತಿಳಿಯದಂತೆ ಶ್ರೇಷ್ಠಕುದುರೆಗಳ ಮೇಲೆ ಕೂಡಿಸಿ ಅವರನ್ನು ಆ ಕೂಡಲೇ ಶಿಬಿರದಿಂದ ಹೊರಕ್ಕೆ ಒಯ್ದುಬಿಟ್ಟನು.

೯೭ ಆ ರಾಜಕುಮಾರರು ಹೋಗುತ್ತಾ ದಾರಿಯನ್ನು ಅರಿಯದೆ ವಿಂಧ್ಯಾಟವಿಯನ್ನು ಪ್ರವೇಶಿಸಿದರು.

೯೮. ಅಲ್ಲಿ ರಾತ್ರಿಯು ಕಳೆಯಲು ಹೀಗೆಯೇ ಮುಂದೆ ಹೋಗುತ್ತಿದ್ದ ಅವರೀರ್ವರ ಕುದುರೆಗಳೂ ಮಧ್ಯಾಹ್ನದ ಹೊತ್ತಿಗೆ ಬಾಯಾರಿಕೆಯಿಂದ ಬಹಳ ಬಳಲಿ (ಬಿದ್ದು) ಸತ್ತುಹೋದುವು.

೯೯. ಅವರ ಮಾತಾಮಹನೂ ಮುದುಕನಾದ ಕಾರಣ ಹಸಿವು ನೀರಡಿಕೆಗಳಿಂದ ಗಂಟಲು ಒಣಗಿ ಬಿಸಿಲಿಗೆ ಬೆಂಡಾಗಿ ಬಳಲಿದ್ದು ಇಬ್ಬರೂ ನೋಡುತ್ತಿರುವಂತೆಯೇ ತೀರಿಕೊಂಡನು.

೧೦೦. ತಪ್ಪನ್ನೇ ಮಾಡಿರದ ನಮ್ಮಿಬ್ಬರನ್ನೂ ತಂದೆಯು, ದುಷ್ಟ ಮಲತಾಯಿಯನ್ನು ಸಂತೋಷಪಡಿಸಲೋಸುಗ ಈ ದುರವಸ್ಥೆಗೆ ತಂದದ್ದೇಕೆ?

೧೦೧. ಎಂದು ಶೋಕಪಟ್ಟು ಅಣ್ಣತಮ್ಮಂದಿರು ತಂದೆಯೇ ಹಿಂದೆ ಹೇಳಿದ್ದಂತೆ ಆ ಅಂಬಿಕೆಯನ್ನು ಧ್ಯಾನಿಸಿದರು.

---

ತಚ್ಚ ಬುದ್ಧ್ವೈವ ತನ್ಮಧ್ಯಾದೇಕಸ್ಯ ಸುಹೃದೋ ಮುಖಾತ್ ।
ತೌ ಸ ಮಾತಾಮಹೋ ಮಂತ್ರೀ ರಾಜಪುತ್ರೌ ಸಹ ಸ್ಥಿತಃ ॥ ೯೫

ಬೋಧಯಿತ್ವಾ ಯಥಾತತ್ತ್ವಮಾರೋಪ್ಯ ವರವಾಜಿನೋಃ ।
ಅಪಸಾರಿತವಾನ್ ಗುಪ್ತಂ ತತ್ಕಾಲಂ ಕಟಕಾತ್ತತಃ ॥ ೯೬

ತೇನಾಪಸಾರಿತೌ ತೌ ಚ ವ್ರಜಂತೌ ನಿಶಿ ತದ್ಯುತೌ ।
ವಿಂಧ್ಯಾಟವೀಂ ವಿವಿಶತುಃ ಮಾರ್ಗಾಜ್ಞಾನಾತ್ ನೃಪಾತ್ಮಜೌ ॥ ೯೭

ತತ್ರ ರಾತ್ರಾವತೀತಾಯಾಂ ಕ್ರಮಾತ್ಪ್ರಾಮ್ಯತೋಸ್ತಯೋಃ ।
ಮಧ್ಯಾಹ್ನೇಽತಿತೃಷಾಕ್ರಾಂತೌ ಹಯೌ ಪಂಚತ್ವಮಾಪತುಃ ॥ ೯೮

ಸ ಚ ಮಾತಾಮಹೋ ವೃದ್ಧಃ ಕ್ಷುತ್‌ತೃಷ್ಣಾಶುಷ್ಕತಾಲುಕಃ ।
ವ್ಯಪದ್ಯತಾತಪಕ್ಲಾಂತಃ ಶ್ರಾಂತಯೋಃ ಪಶ್ಯತೋಸ್ತಯೋಃ ॥ ೯೯

ಅನಾಗಸೌ ಕಥಂ ಪಿತ್ರಾ ಗಮಿತೌ ಸ್ವೋ ದಶಾಮಿಮಾಮ್ ।
ಸಕಾಮಾಂ ಕುರ್ವತಾ ತಾಂ ನೌ ದುಷ್ಟಾಮಪರಮಾತರಮ್ ॥ ೧೦೦

ಇತಿ ತೌ ತತ್ರ ಶೋಚಂತೌ ದುಃಖಿತೌ ಭ್ರಾತರೌ ತತಃ ।
ಪ್ರಾಕ್ ಪಿತ್ರೈವೋಪದಿಷ್ಟಾಂ ತಾಂ ದೇವೀಂ ದಧ್ಯತುರಂಬಿಕಾಮ್ ॥ ೧೦೧

೧೦೨. ಶರಣ್ಯಳಾದ ಅವಳ ಧ್ಯಾನದ ಪ್ರಭಾವದಿಂದಲೇ ಇಬ್ಬರೂ ಆ ಕ್ಷಣದಲ್ಲಿ ಹಸಿವು ಬಾಯಾರಿಕೆಗಳೂ ಬಳಲಿಕೆಗಳೂ ಹೋಗಿ ಶಕ್ತಿಶಾಲಿಗಳಾಗಿಬಿಟ್ಟರು.

೧೦೩. ಅದರಿಂದ ನಂಬಿಕೆ ಬಂದು, ಮಾರ್ಗಾಯಾಸವೇ ತಿಳಿಯದೆ ಇಬ್ಬರೂ ವಿಂಧ್ಯ ಕಾನನದಲ್ಲಿದ್ದ ಆ ದೇವಿಯನ್ನೇ ಕಾಣಲು ಹೊರಟರು.

೧೦೪. ಅಲ್ಲಿಗೆ ತಲುಪಿದ ಸೋದರರಿಬ್ಬರೂ ಉಪವಾಸದಿಂದಿದ್ದು ಅವಳನ್ನು ಆರಾಧಿಸಲು ದೇವಿಯ ಮುಂದೆಯೇ ತಪಸ್ಸನ್ನು ಪ್ರಾರಂಭಿಸಿದರು.

೧೦೫–೧೦೬. ಈ ವೇಳೆಗೆ ಆ ಸೈನ್ಯದಲ್ಲಿದ್ದ ಸಾಮಂತರಾಜರೆಲ್ಲರೂ ಇವರಿಗೆ ಕೆಟ್ಟದ್ದನ್ನು ಮಾಡಲೆಂದು ಒಟ್ಟಾಗಿ ಬಂದು ಅವರನ್ನು ಆಗ ಎಲ್ಲೆಡೆ ಹುಡುಕಿದರು. ಆದರೆ ರಾಜಕುಮಾರರಿಬ್ಬರೂ ಕಾಣಲಿಲ್ಲ. ಅವರು ಮಾತಾಮಹನೊಂದಿಗೆ ಎಲ್ಲಿಗೋ ಪಲಾಯನ ಮಾಡಿಬಿಟ್ಟಿದ್ದರು.

೧೦೭. ಆಮೇಲೆ ಗುಟ್ಟು ರಟ್ಟಾಗುವ ಆತಂಕದಿಂದ ಅವರೆಲ್ಲರೂ ಅಂಜಿ ರಾಜ ಪರಿತ್ಯಾಗಸೇನನ ಬಳಿಗೆ ಬಂದರು.

೧೦೮. ಅವನಿಗೆ ಪತ್ರಗಳನ್ನೆಲ್ಲ ತೋರಿಸಿ ನಡೆದ ಸಂಗತಿಯನ್ನು ಅರುಹಿದರು. ರಾಜನು ಅದನ್ನು ತಿಳಿದು ದಿಕ್ಕು ತೋಚದವನಾಗಿ ಕೋಪದಿಂದ ಅವರಿಗೆಂದನು.

---

ತಸ್ಯಾ ಧ್ಯಾನಪ್ರಭಾವೇಣ ಶರಣ್ಯಾಯಾಸ್ತದೈವ ತೌ ।
ವಿಗತಕ್ಷುತ್ ಕ್ಲಮತೃಷೌ ಬಲಿನೌ ಚ ಬಭೂವತುಃ ॥ ೧೦೨
ತತಸ್ತತ್ಪ್ರತ್ಯಯಾಶ್ವಸ್ತಾವವಿಜ್ಞಾತಪಥಶ್ರಮೌ ।
ತಾಮೇವ ಯಯತುರ್ದ್ರಷ್ಟುಂ ವಿಂಧ್ಯಕಾಂತಾರವಾಸಿನೀಮ್ ॥ ೧೦೩
ತತ್ರ ಪ್ರಾಪ್ತೌ ತದಗ್ರೇ ಚ ಭ್ರಾತರೌ ತಾವುಭಾವಪಿ ।
ಪ್ರಾರಭೇತಾಂ ನಿರಾಹಾರೌ ತಾಮಾರಾಧಯಿತುಂ ತಪಃ ॥ ೧೦೪
ಅತ್ರಾಂತರೇ ಚ ತೇ ತತ್ರ ಸಾಮಂತಾಃ ಕಟಕೇ ಸ್ಥಿತಾಃ ।
ಸಂಭೂಯ ಯಾವದಾಯಾಂತಿ ತಯೋಃ ಪಾಪಂ ಚಿಕೀರ್ಷವಃ ॥ ೧೦೫
ತಾವತ್ಕ್ವಚಿನ್ನ ದದೃಶುರ್ವಿಚಿನ್ವಂತೋಽಪಿ ಸರ್ವತಃ ।
ತೌ ಸಮಾತಾಮಹೌ ಕ್ವಾಪಿ ರಾಜಪುತ್ರೌ ಪಲಾಯಿತೌ ॥ ೧೦೬
ತತಶ್ಚಾಶಂಕ್ಯ ತಂ ಮಂತ್ರಭೇದಂ ಸರ್ವೇಽಪಿ ತೇ ಭಯಾತ್ ।
ರಾಜ್ಞಸ್ತಸ್ಯ ಪರಿತ್ಯಾಗಸೇನಸ್ಯಾಂತಿಕಮಾಯಯುಃ ॥ ೧೦೭
ಪ್ರದರ್ಶ್ಯ ತಸ್ಮೈ ಲೇಖಾಂಶ್ಚ ಯಥಾವತ್ತಂ ತಮಬ್ರುವನ್ ।
ಸೋಽಥ ಬುದ್ಧ್ವಾ ತದುದ್ಭ್ರಾಂತಃ ಕ್ರುದ್ಧಸ್ತಾನೇವಮಬ್ರವೀತ್ ॥ ೧೦೮
ನೈತೇ ಮತ್ಪ್ರಹಿತಾ ಲೇಖಾ ಇಂದ್ರಜಾಲಂ ಕಿಮಪ್ಯದಃ ।
ಯೂಯಂ ಚ ನ ಕಿಮೇತಾವದಪಿ ಜಾನೀಥ ಬಾಲಿಶಾಃ ॥ ೧೦೯

೧೯. "ಈ ಪತ್ರಗಳು ನಾನು ಕಳಿಸಿದವಲ್ಲ. ಏನೋ ಮೋಸವು ನಡೆದಿರಬೇಕು. ಮೂರ್ಖರಂತೆ ನಿಮಗೆ ಇಷ್ಟೂ ತಿಳಿಯಲಿಲ್ಲವೇ ?

೧೧೦. ಅಷ್ಟೆಲ್ಲ ತಪಸ್ಸು ಮಾಡಿ ಪಡೆದಿರುವ ಮಕ್ಕಳನ್ನು ನಾನು ಹೇಗೆ ಕೊಲ್ಲುತ್ತೇನೆ ? ನೀವು ಅವರನ್ನು ಕೊಂದೇ ಬಿಟ್ಟಿರಿ ಎನ್ನುವಾಗ ತಮ್ಮ ಪುಣ್ಯದಿಂದಾಗಿ ಅವರು ಬದುಕುಳಿದರು.

೧೧೧–೧೧೨. ಅವರ ಮಾತಾಮಹನು ತನ್ನ ಮಂತ್ರಿತ್ವದ ಫಲವನ್ನು ತೋರಿಸಿಕೊಟ್ಟನು.' ಹೀಗೆ ಹೇಳಿ ಆ ಸಾಮಂತರನ್ನು ಕರೆಸಿ ಆಗಲೇ ಓಡಿ ಹೋಗಿಬಿಟ್ಟಿದ್ದ ಕೂಟ ಲೇಖಕನಾದ ಕಾಯಸ್ಥನನ್ನೂ ತನ್ನ ಶಕ್ತಿಯಿಂದ ಕರೆಸಿ ರಾಜನು ಸರಿಯಾಗಿ ವಿಚಾರಣೆ ಮಾಡಿ ಸೆರೆಹಿಡಿದನು.

೧೧೩. ಮಕ್ಕಳನ್ನು ಕೊಲ್ಲಲೆಣಿಸಿದ ಪಾಪಿಷ್ಠೆ ಕಾವ್ಯಾಲಂಕಾರೆಯನ್ನು ಅಂಥ ಕೆಲಸ ಮಾಡಿದ ಕಾರಣ ನೆಲಮಾಳಿಗೆಯಲ್ಲಿ ಕೂಡಿ ಹಾಕಿದನು.

೧೧೪. ಸರಿಯಾಗಿ ವಿಚಾರವಿಮರ್ಶೆ ಮಾಡದೆ ಅತಿಯಾದ ದ್ವೇಷದ ಬುದ್ಧಿಯಿಂದ ದುಡುಕಿ ಕೈಗೊಂಡ ಕೆಟ್ಟ ಕೆಲಸವು ವಿಪತ್ತಿಗೆ ಕಾರಣವಾಗದಿರುವುದಾದರೂ ಹೇಗೆ ?

೧೧೫. ರಾಜಪುತ್ರರ ಜೊತೆಗೆ ಹೋಗಿ ಹಿಂತಿರುಗಿದ್ದ ಸಾಮಂತರನ್ನೆಲ್ಲ ಕೆಲಸ ಬಿಡಿಸಿ ಅವರ ಜಾಗದಲ್ಲಿ ರಾಜನು ಬೇರೆಯವರನ್ನು ನಿಯುಕ್ತಿಗೊಳಿಸಿದನು.

---

ಯದನಲ್ಪತಪಃ ಪ್ರಾಪ್ತಾವಹಂ ಹನ್ಮಿ ಕಥಂ ಸುತೌ ।
ಯುಷ್ಮಾಭಿಸ್ತೌ ಹತಾವೇವ ಸುಕೃತೈಃ ಸ್ವೈಸ್ತು ರಕ್ಷಿತೌ ॥ ೧೧೦

ಮಾತಾಮಹೇನ ಚ ತಯೋರ್ದರ್ಶಿತಂ ಮಂತ್ರಿತಾಫಲಮ್ ।
ಇತ್ಯುಕ್ತ್ವಾ ತಾನ್ ಸ ಸಾಮಂತಾನ್ ಕಾಯಸ್ಥಂ ಕೂಟಲೇಖಕಮ್ ॥ ೧೧೧

ತಂ ಪಲಾಯಿತಮಪ್ಯಾಶು ಸ್ವಶಕ್ತ್ಯಾನಾಯ್ಯ ಭೂಪತಿಃ ।
ಸಮ್ಯಕ್ ಪೃಷ್ಟ್ವಾ ಯಥಾವೃತ್ತಂ ಯಥಾವನ್ನಿಗೃಹೀತವಾನ್ ॥ ೧೧೨

ಭಾರ್ಯಾಂ ಚ ಕಾವ್ಯಾಲಂಕಾರಾಂ ತಾದೃಕ್ಕಾರ್ಯವಿಧಾಯಿನೀಮ್ ।
ಭೂಗೃಹೇ ಸ ನಿಚಿಕ್ಷೇಪ ಪಾಪಾಂತಾಂ ಪುತ್ರಘಾತಿನೀಮ್ ॥ ೧೧೩

ಅವಿಚಾರ್ಯ ತು ಪರ್ಯಂತಮತಿದ್ವೇಷಾಂಧಯಾ ಧಿಯಾ ।
ಸಹಸಾ ಹಿ ಕೃತಂ ಪಾಪಂ ಕಥಂ ಮಾ ಭೂದ್ವಿಪತ್ತಯೇ ॥ ೧೧೪

ಯೇ ಚ ತೇ ರಾಜಪುತ್ರಾಭ್ಯಾಂ ಸಹ ಗತ್ವಾಭ್ಯುಪಾಗತಾಃ ।
ಸಾಮಂತಾಸ್ತಾನ್ನಿವಾರ್ಯಾನ್ಯಾಂಸ್ತತ್ಪದೇ ಸ ನೃಪೋ ವ್ಯಧಾತ್ ॥ ೧೧೫

೧೧೬. ಸತತವಾಗಿ ಮಕ್ಕಳಿಬ್ಬರ ಬಗ್ಗೆ ಸುಳಿವನ್ನು ಹುಡುಕುತ್ತಾ ಆ ರಾಜನು ದುಃಖಾರ್ತನಾಗಿ ಅವರ ತಾಯಿಯೊಂದಿಗೆ ಧರ್ಮಾಸಕ್ತನಾಗಿ ಅಂಬಿಕೆಯನ್ನು ಸ್ಮರಿಸುತ್ತಾ ಇದ್ದನು.

೧೧೭-೧೧೮. ಅಷ್ಟರಲ್ಲಿ ರಾಜಕುಮಾರ ಇಂದೀವರ ಸೇನ ಮತ್ತು ಅವನ ತಮ್ಮನ ತಪಸ್ಸಿನಿಂದ ಸಂತುಷ್ಟಳಾದ ವಿಂಧ್ಯವಾಸಿನೀದೇವತೆಯು ಕನಸಿನಲ್ಲಿ ಕಾಣಿಸಿಕೊಂಡು ಖಡ್ಗವೊಂದನ್ನು ನೀಡಿ ಅಪ್ಪಣೆಮಾಡಿದಳು. "ಖಡ್ಗದ ಪ್ರಭಾವದಿಂದಾಗಿ ಅಜೇಯರಾದ ಶತ್ರುಗಳನ್ನು ಗೆಲ್ಲಲಿರುವೆ.

೧೧೯. ನೀನು ಏನೇನನ್ನು ಬಯಸುತ್ತೀಯೋ ಅವೆಲ್ಲವನ್ನೂ ಪಡೆಯುವೆ ಮತ್ತು ಇದರಿಂದ ನೀವಿಬ್ಬರೂ ಇಷ್ಟಸಿದ್ಧಿಯನ್ನು ಹೊಂದಲಿದ್ದೀರಿ.'

೧೨೦. ಎಂದು ಹೇಳಿ ದೇವಿಯು ಅದೃಶ್ಯಳಾಗಲು ನಿದ್ರೆಯಿಂದೆದ್ದ ಇಂದೀವರಸೇನನು ತನ್ನ ಕೈಯಲ್ಲಿ ಖಡ್ಗವಿರುವುದನ್ನು ಕಂಡನು.

೧೨೧. ಆಮೇಲೆ ತನ್ನ ತಮ್ಮನಿಗೆ ಕನಸನ್ನು ವರ್ಣಿಸಿ ಖಡ್ಗವನ್ನು ತೋರಿಸಿ ಹುರಿದುಂಬಿಸಿ ಬೆಳಿಗ್ಗೆ ಅವನೊಂದಿಗೆ ಕಾಡಿನಲ್ಲಿ ದೊರೆತ ಆಹಾರದಿಂದ ಪಾರಣೆ ಮಾಡಿದನು.

೧೨೨. ಅನಂತರ ಆ ದೇವಿಯ ಅನುಗ್ರಹದಿಂದ ಆಯಾಸವಿಲ್ಲದವನಾಗಿ ಆತನು ದೇವಿಗೆ ನಮಸ್ಕಾರ ಮಾಡಿ, ಖಡ್ಗವನ್ನು ಕೈಯಲ್ಲಿ ಹಿಡಿದು ತಮ್ಮನೊಂದಿಗೆ ಅಲ್ಲಿಂದ ಹೊರಟನು.

---

ತಸ್ಥೌ ಚ ವಾರ್ತಾಮನ್ವಿಷ್ಯನ್ ಸತತಂ ಪುತ್ರಯೋಸ್ತಯೋಃ ।
ತನ್ಮಾತ್ರಾ ಸಹ ದುಃಖಾರ್ತೋ ಧರ್ಮಾಸಕ್ತೋಽಂಬಿಕಾಂ ಸ್ಮರನ್ ॥ ೧೧೬
ತಾವಚ್ಚ ರಾಜಪುತ್ರಸ್ಯ ತಪಸಾ ಸಾನುಜಸ್ಯ ಸಾ ।
ತಸ್ಯೇಂದೀವರಸೇನಸ್ಯ ತುಷ್ಟಾಭೂದ್ವಿಂಧ್ಯವಾಸಿನೀ ॥ ೧೧೭
ದತ್ತ್ವಾ ಚ ಖಡ್ಗಂ ಸ್ವಪ್ನೇ ಸಾ ಸಾಕ್ಷಾದೇವಂ ತಮಾದಿಶತ್ ।
ಅಸ್ಯ ಪ್ರಭಾವಾತ್ ಖಡ್ಗಸ್ಯ ಶತ್ರೂನ್ ಜೇಷ್ಯಸಿ ದುರ್ಜಯಾನ್ ॥ ೧೧೮
ಚಿಂತಯಿಷ್ಯಸಿ ಯತ್ಕಿಂಚಿತ್ ತಚ್ಚ ಸಂಪತ್ಸ್ಯತೇ ತವ ।
ದ್ವಾವಪ್ಯೇತೇನ ಚ ಯುವಾಮಿಷ್ಟಸಿದ್ಧಿಮವಾಪ್ಸ್ಯಥಃ ॥ ೧೧೯
ಇತ್ಯುಕ್ತ್ವಾಂತರ್ಹಿತಾಯಾಂ ಚ ದೇವ್ಯಾಂ ತಸ್ಯಾಂ ಪ್ರಬುಧ್ಯ ಸಃ ।
ತತ್ರೇಂದೀವರಸೇನಸ್ತಂ ಹಸ್ತಸ್ಥಂ ಖಡ್ಗಮೈಕ್ಷತ ॥ ೧೨೦
ಅಥ ಖಡ್ಗೇನ ತತ್ಸ್ವಪ್ನವರ್ಣನೇನ ಚ ಸೋಽನುಜಮ್ ।
ಆಶ್ವಾಸ್ಯ ಚಕ್ರೇ ತದ್ಯುಕ್ತಃ ಪ್ರಾತರ್ವನ್ಯೇನ ಪಾರಣಮ್ ॥ ೧೨೧
ತತಃ ಪ್ರಣಮ್ಯ ದೇವೀಂ ತಾಂ ತತ್ಪ್ರಸಾದಹೃತಕ್ಲಮಃ ।
ಹೃಷ್ಟಸ್ತತ್ಖಡ್ಗಹಸ್ತಶ್ಚ ಸಮಂ ಭ್ರಾತ್ರಾ ಯಯೌ ತತಃ ॥ ೧೨೨

೧೨೩. ಬಹಳ ದೂರಹೋದಮೇಲೆ ಅವನು ದೊಡ್ಡದೊಂದು ನಗರವನ್ನು ತಲುಪಿದನು. ಅದು ಚಿನ್ನದ ಮನೆಗಳಿಂದಾಗಿ ಮೇರು ಪರ್ವತದ ಶಿಖರದ ಭ್ರಾಂತಿಯನ್ನು ಉಂಟುಮಾಡುತ್ತಿತ್ತು.

೧೨೪. ಅಲ್ಲಿ ರಾಜಮಾರ್ಗದ ದ್ವಾರದಲ್ಲಿ ಒಬ್ಬ ರಾಕ್ಷಸನನ್ನು ಕಂಡು ಅವನನ್ನು ಆ ಪುರದ ಹೆಸರನ್ನೂ ಅದರ ರಾಜನ ಹೆಸರನ್ನೂ ಕೇಳಿದನು.

೧೨೫. "ಇದು ಶೈಲಪುರವೆಂಬ ನಗರ. ಇಲ್ಲಿ ಶತ್ರುಗಳನ್ನು ಸದೆಬಡಿಯುವ ನಮ್ಮ ಒಡೆಯನಾದ ಯಮದಂಷ್ಟ್ರನೆಂಬ ರಾಕ್ಷಸರಾಜನು ಇದ್ದಾನೆ.'

೧೨೬. ಆ ರಾಕ್ಷಸನು ಇಷ್ಟು ಹೇಳಲು ಇಂದೀವರಸೇನನು ಯಮದಂಷ್ಟ್ರನನ್ನು ಕೊಲ್ಲುವ ಬಯಕೆಯಿಂದ ಊರಿನೊಳಕ್ಕೆ ಹೋಗತೊಡಗಿದನು.

೧೨೭. ಬಾಗಿಲಿನಲ್ಲಿದ್ದ ರಾಕ್ಷಸನು ಇವನನ್ನು ತಡೆಯುತ್ತಿರಲು ಬಲಶಾಲಿಯಾದ ರಾಜಕುಮಾರನು ಖಡ್ಗದ ಒಂದೇ ಏಟಿನಿಂದ ಅವನ ತಲೆಯನ್ನು ಕಡಿದು ಉರುಳಿಸಿದನು.

೧೨೮. ಅವನನ್ನು ಕೊಂದು ಅರಮನೆಯನ್ನು ಪ್ರವೇಶಿಸಿದ ಇಂದೀವರಸೇನನು ಸಿಂಹಾಸನದಲ್ಲಿ ಕುಳಿತಿದ್ದ ಶೂರ ರಾಕ್ಷಸನಾದ ಯಮದಂಷ್ಟ್ರನನ್ನು ಕಂಡನು.

---

ಗತ್ವಾ ಚ ದೂರಂ ಸ ಪ್ರಾಪದೇಕಂ ಪುರವರಂ ಮಹತ್ ।
ಕುರ್ವಾಣಂ ಮೇರುಶಿಖರಭ್ರಾಂತಿಂ ಹೇಮಮಯೈರ್ಗೃಹೈಃ ॥ ೧೨೩
ತತ್ರ ರೌದ್ರಂ ದದರ್ಶೈಕಂ ಪ್ರತೋಲೀದ್ವಾರಿ ರಾಕ್ಷಸಮ್ ।
ಪಪ್ರಚ್ಛ ತಂ ಚ ವೀರೋಽಸ್ಯ ಪುರಸ್ಯಾಖ್ಯಾಂ ಪತಿಂ ಚ ಸಃ ॥ ೧೨೪
ಇದಂ ಶೈಲಪುರಂ ನಾಮ ನಗರಂ ರಾಕ್ಷಸಾಧಿಪಃ ।
ಅಧ್ಯಾಸ್ತೇ ಯಮದಂಷ್ಟ್ರಾಖ್ಯಃ ಸ್ವಾಮೀ ನಃ ಶತ್ರುಮರ್ದನಃ ॥ ೧೨೫
ಇತ್ಯುಕ್ತೇ ರಕ್ಷಸಾ ತೇನ ಯಮದಂಷ್ಟ್ರಜಿಘಾಂಸಯಾ ।
ತತ್ರೇಂದೀವರಸೇನೋಽಥ ಸ ಪ್ರವೇಷ್ಟುಂ ಪ್ರವೃತ್ತವಾನ್ ॥ ೧೨೬
ನಿರುಂಧಾನಂ ಚ ತಂ ದ್ವಾಃಸ್ಥಂ ರಾಕ್ಷಸಂ ಸ ಮಹಾಭುಜಃ ।
ಏಕಖಡ್ಗಪ್ರಹಾರೇಣ ಶಿರಶ್ಛಿತ್ತ್ವಾ ನ್ಯಪಾತಯತ್ ॥ ೧೨೭
ತಂ ಹತ್ವಾ ರಾಜಭವನಂ ಪ್ರವಿಶ್ಯಾಂತರ್ದದರ್ಶ ಸಃ ।
ಶೂರಃ ಸಿಂಹಾಸನಸ್ಥಂ ತಂ ಯಮದಂಷ್ಟ್ರಂ ನಿಶಾಚರಮ್ ॥ ೧೨೮

೧೨೯. ಆತನು ಮುಖವು ಕೋರೆ ಹಲ್ಲುಗಳಿಂದ ಕರಾಳವಾಗಿತ್ತು. ಅವನ ಎಡಪಕ್ಷದಲ್ಲಿ ಸುಂದರ ಸ್ತ್ರೀಯೊಬ್ಬಳು ಇದ್ದಳು. ಇನ್ನೊಂದು ಪಕ್ಕದಲ್ಲಿ ದಿವ್ಯರೂಪದ ಕುಮಾರಿಯೊಬ್ಬಳು ಇದ್ದಳು.

೧೩೦. ನೋಡಿದ ಕೂಡಲೇ ಈತನು ಅಂಬಿಕೆಯು ಕೊಟ್ಟ ಖಡ್ಗವನ್ನು ಕೈಯಲ್ಲಿ ಹಿಡಿದು ಅವನನ್ನು ಯುದ್ಧಕ್ಕೆ ಕರೆದನು. ಆ ರಾಕ್ಷಸನು ಖಡ್ಗವನ್ನು ಸೆಳೆದುಕೊಂಡು ಎದ್ದು ನಿಂತನು.

೧೩೧. ಇಬ್ಬರಿಗೂ ಯುದ್ಧವು ನಡೆಯಲು ಇಂದೀವರ ಸೇನನು ರಾಕ್ಷಸನನ್ನು ತುಂಡರಿಸುತ್ತಿದ್ದಂತೆ ಆ ರಾಕ್ಷಸನ ತಲೆಗಳು ಮತ್ತೆ ಮತ್ತೆ ಹುಟ್ಟುತ್ತಿದ್ದವು.

೧೩೨. ಅವನ ಆ ಮಾಯೆಯನ್ನು ನೋಡಿ ಇವನನ್ನು ನೋಡಿದ್ದರಿಂದಲೇ ಮೋಹಿಸಿದ್ದ ರಾಕ್ಷಸನ ಪಕ್ಕದಲ್ಲಿದ್ದ ಕುಮಾರಿಯು ಸನ್ನೆ ಮಾಡಿದಳು.

೧೩೩. (ಅದರಂತೆ) ರಾಜಕುಮಾರನು ರಾಕ್ಷಸನ ತಲೆಯನ್ನು ಕತ್ತರಿಸಿದ ಕೂಡಲೇ ಖಡ್ಗದಿಂದ ಅದನ್ನು ಎರಡು ಹೋಳಾಗಿ ಮಾಡಿಬಿಟ್ಟನು.

೧೩೪. ಆಕೆಯ ಪ್ರತಿಮಾಯೆಯಿಂದ ಈತನ ಮಾಯೆಯು ನಾಶವಾಗಲಾಗಿ ರಾಕ್ಷಸನಿಗೆ ಮತ್ತೆ ತಲೆಯು ಹುಟ್ಟದೇ ಅವನು ಸತ್ತುಬಿದ್ದನು.

೧೩೫. ರಾಕ್ಷಸನು ಸತ್ತುದರಿಂದ ಇಬ್ಬರು ಸುಂದರಿಯರೂ ಸಂತುಷ್ಟರಾಗಿರಲು ಇಂದೀವರಸೇನನು ತನ್ನ ತಮ್ಮನೊಂದಿಗೆ ಅಲ್ಲಿ ಕುಳಿತು ಕೇಳಿದನು.

---

ದಂಷ್ಟ್ರಾಘೋರಮುಖಂ ವಾಮಪಾರ್ಶ್ವಸ್ಥಿತವರಾಂಗನಮ್ ।
ಆಶ್ರಿತೇತರಪಾರ್ಶ್ವಂ ಚ ಕುಮಾರ್ಯಾ ದಿವ್ಯರೂಪಯಾ ॥ ೧೨೯

ದೃಷ್ಟ್ವಾ ಚ ಸೋಽಂಬಿಕಾದತ್ತಖಡ್ಗಹಸ್ತೋ ರಣಾಯ ತಮ್ ।
ಆಹೂತವಾನ್ ಸ ಚೋತ್ತಸ್ಥೌ ಖಡ್ಗಮಾಕೃಷ್ಯ ರಾಕ್ಷಸಃ ॥ ೧೩೦

ಪ್ರವೃತ್ತೇ ಚ ತಯೋರ್ಯುದ್ಧೇ ಛಿನ್ನಶ್ಛಿನ್ನೋಽಥರಾಕ್ಷಸಃ ।
ತಸ್ಯೇಂದೀವರಸೇನೇನ ಮೂರ್ಧಾ ಮುಹುರಜಾಯತ ॥ ೧೩೧

ತಾಂ ತಸ್ಯ ಮಾಯಾಮಾಲೋಕ್ಯ ತತ್ಪಾರ್ಶ್ವಸ್ಥಿತಯಾ ತಯಾ ।
ಕುಮಾರ್ಯಾ ಕೃತಸಂಜ್ಞಃ ಸಂದರ್ಶನೇನಾನುರಕ್ತಯಾ ॥ ೧೩೨

ಸ ರಾಜಪುತ್ರಶ್ಛಿತ್ತ್ವೈವ ರಕ್ಷಸಸ್ತಸ್ಯ ತಚ್ಛಿರಃ ।
ಭೂಯಃ ಖಡ್ಗಪ್ರಹಾರೇಣ ಲಘುಹಸ್ತೋ ದ್ವಿಧಾಕರೋತ್ ॥ ೧೩೩

ತಯಾಸ್ಯ ನಷ್ಟಮಾಯಸ್ಯ ರಕ್ಷಸಃ ಪ್ರತಿಮಾಯಯಾ ।
ನಾಜಾಯತ ಪುನರ್ಮೂರ್ಧಾ ತೇನ ರಕ್ಷೋ ವ್ಯಪಾದಿ ತತ್ ॥ ೧೩೪

ಹತೇ ತಸ್ಮಿನ್ ಪ್ರಹೃಷ್ಟೇ ತೇ ತದ್ವರಸ್ತ್ರೀಕುಮಾರಿಕೇ ।
ಸಾನುಜೋ ರಾಜಪುತ್ರೋಽಸಾವುಪವಿಶ್ಯಾಥ ಪೃಷ್ಟವಾನ್ ॥ ೧೩೫

೧೩೬ "ಇಂತಹ ಈ ಊರಿನಲ್ಲಿ ಈ ರಾಕ್ಷಸನು ಒಬ್ಬ ದ್ವಾರಪಾಲಕನಿಂದ ರಕ್ಷಿತನಾಗಿ ಇದ್ದುದೇಕೆ ? ಅವನು ಸತ್ತರೆ ನೀವಿಬ್ಬರೂ ಸಂತೋಷಪಡುತ್ತಿರುವುದೇಕೆ ?'

೧೩೭ ಇದನ್ನು ಕೇಳಿದ ಅವರಿಬ್ಬರಲ್ಲಿ ಕುಮಾರಿಯು ಅವನಿಗೆ ಹೇಳಿದಳು. "ಈ ಶೈಲಪುರದಲ್ಲಿ ವೀರಭುಜನೆಂಬ ರಾಜನಿದ್ದನು.

೧೩೮ ಈಕೆ ಮದನದಂಷ್ಟ್ರೆ ಎಂಬುವಳು ಅವನ ಹೆಂಡತಿ. ಯಮದಂಷ್ಟ್ರನು ಮಾಯೆಯಿಂದ ಇಲ್ಲಿಗೆ ಬಂದು ಈ ರಾಜನನ್ನು ತಿಂದುಬಿಟ್ಟನು.

೧೩೯. ಇವನ ಪರಿಹಾರದವರನ್ನೆಲ್ಲ ತಿಂದ ಅವನು ಈಕೆಯು ಸುಂದರಿಯೆಂಬ ಕಾರಣದಿಂದ ತಿನ್ನದೆ ಹೆಂಡತಿಯನ್ನಾಗಿ ಮಾಡಿಕೊಂಡನು.

೧೪೦. ಅನಂತರ ರಮಣೀಯವಾಗಿರುವ ದೂರದ ಈ ಊರಿನಲ್ಲಿ ಚಿನ್ನದ ಮಹಲುಗಳನ್ನು ನಿರ್ಮಿಸಿ ಪರಿವಾರವಿಲ್ಲದೆ ಒಂಟಿಯಾಗಿಯೇ ಇವಳೊಂದಿಗೆ ಕ್ರೀಡಿಸುತ್ತಿದ್ದನು.

೧೪೧. ನಾನು ಖಡ್ಗದಂಷ್ಟ್ರೆ ಈ ರಾಕ್ಷಸನ ತಂಗಿ. ನಿನ್ನನ್ನು ನೋಡಿದ ಕೂಡಲೇ ನಿನ್ನಲ್ಲಿ ಪ್ರೀತಿ ಹುಟ್ಟಿತು.

೧೪೨. ಆದ್ದರಿಂದ ಈ ರಾಕ್ಷಸನು ಹತನಾದಾಗ ಇವಳೂ ನಾನೂ ಸಂತೋಷಗೊಂಡೆವು. ಆರ್ಯಪುತ್ರನೇ ! ಪ್ರೀತಿಯಿಂದ ಅರ್ಪಿಸಿಕೊಂಡಿರುವ ನನ್ನನ್ನು ನೀನು ಈಗಲೇ ಮದುವೆಯಾಗು.'

---

ಆಸೀತ್ ಕಿಮೀದೃಶೇಽಮುಷ್ಮಿನ್ ಪುರೇ ದ್ವಾಃಸ್ಥೈಕರಕ್ಷಿತಃ ।
ರಾಕ್ಷಸೋಽಯಂ ಯುವಾಂ ಕೇ ಚ ಹತೇಽಸ್ಮಿನ್ ಕಿಂ ಚ ಹೃಷ್ಯತಃ ॥ ೧೩೬

ಏತತ್ಶ್ರುತ್ವಾ ತಯೋರ್ಮಧ್ಯಾತ್ ಕುಮಾರೀ ಸಾ ಜಗಾದ ತಮ್ ।
ಅಸ್ಮಿನ್ ಶೈಲಪುರೇ ವೀರಭುಜೋ ನಾಮಾಭವನ್ನೃಪಃ ॥ ೧೩೭

ಏಷಾ ಮದನದಂಷ್ಟ್ರೇತಿ ಭಾರ್ಯಾ ತಸ್ಯ ಸ ಚಾಮುನಾ ।
ಮಾಯಯಾ ರಾಕ್ಷಸೇನೈತ್ಯ ಯಮದಂಷ್ಟ್ರೇಣ ಭಕ್ಷಿತಃ ॥ ೧೩೮

ಗ್ರಸ್ತಃ ಪರಿಚ್ಛದಶ್ಚಾಸ್ಯ ಸುರೂಪೇತಿ ನ ಭಕ್ಷಿತಾ ।
ಏಕಾ ಮದನದಂಷ್ಟ್ರೈಷಾ ಭಾರ್ಯಾ ಚ ವಿಹಿತಾತ್ಮನಃ ॥ ೧೩೯

ತತೋ ವಿವಿಕ್ತೇ ರಮ್ಯೇಽಸ್ಮಿನ್ ಪುರೇ ನಿರ್ಮಾಯ ಕಾಂಚನಾನ್ ।
ಗೃಹಾನೇಷೋಽನಯಾ ಕ್ರೀಡನ್ನಾಸ್ತಾಪಾಸ್ತಪರಿಚ್ಛದಃ ॥ ೧೪೦

ಅಹಂ ಚ ಖಡ್ಗದಂಷ್ಟ್ರಾಖ್ಯಾ ಕನೀಯಸ್ಯಸ್ಯ ರಕ್ಷಸಃ ।
ಭಗಿನೀ ಕನ್ಯಕಾ ದೃಷ್ಟೇ ತ್ವಯಿ ಸದ್ಯೋಽನುರಾಗಿಣೀ ॥ ೧೪೧

ಅತೋ ಹತೇಽಸ್ಮಿನ್ ಹೃಷ್ಟೇಯಮಹಂ ಚ ತದಿಹಾಧುನಾ ।
ಉಪಯಚ್ಛಸ್ವ ಮಾಮಾರ್ಯಪುತ್ರ ಪ್ರೇಮಸಮರ್ಪಿತಾಮ್ ॥ ೧೪೨

೧೫೩. ಹೀಗೆ ಹೇಳಿದ ಖಡ್ಗದಂಷ್ಟ್ರೆಯನ್ನು ಇಂದೀವರಸೇನನು ಆಗ ಗಾಂಧರ್ವ ರೀತಿಯಿಂದ ಅಲ್ಲಿಯೇ ಮದುವೆಮಾಡಿಕೊಂಡನು.

೧೫೪. ಹೆಂಡತಿಯನ್ನು ಪಡೆದ ಅವನು ದೇವಿಯ ಖಡ್ಗದ ಪ್ರಭಾವದಿಂದ ಅಪೇಕ್ಷಿಷ್ಟ ಸುಖೋಪಭೋಗಗಳನ್ನೆಲ್ಲ ಪಡೆಯುತ್ತಾ ಆ ನಗರದಲ್ಲಿ ತನ್ನ ತಮ್ಮನೊಂದಿಗೆ ಇದ್ದುಬಿಟ್ಟನು.

೧೫೫–೧೫೬. ಒಮ್ಮೆ ತಮ್ಮನಾದ ವೀರ ಅನಿಚ್ಛಾಸೇನನನ್ನು, ತನ್ನ ಖಡ್ಗವೆಂಬ ಚಿಂತಾಮಣಿಯ ಪ್ರಭಾವದಿಂದ ಆಕಾಶಮಾರ್ಗದಲ್ಲಿ ಹೋಗುವ ವಿಮಾನವೊಂದನ್ನು ಧ್ಯಾನದಿಂದ ನಿರ್ಮಿಸಿ ಅದರಲ್ಲಿ ಕೂರಿಸಿ, ತಮ್ಮ ಸಮಾಚಾರವನ್ನು ತಿಳಿಸಲು ತಾಯಿತಂದೆಗಳ ಬಳಿಗೆ ಕಳುಹಿಸಿಕೊಟ್ಟನು.

೧೫೭ ಅವನು ಆಕಾಶಮಾರ್ಗದಲ್ಲಿ ವಿಮಾನದ ಮೂಲಕ ಹೊರಟು ತಮ್ಮ ಊರಾದ ಇರಾವತಿಯನ್ನು ಬೇಗನೆ ತಲುಪಿದನು.

೧೫೮–೧೫೯. ಅವನು ಚಂದ್ರನು ಚಕೋರಪಕ್ಷಿಗಳನ್ನು ಆನಂದ ಪಡಿಸಿದಂತೆ, ತೀವ್ರವಾದ ದುಃಖವೆಂಬ ಬಿಸಿಲಿನಿಂದ ಕೊಪಗೊಂಡಿದ್ದ ಮಾತಾಪಿತೃಗಳನ್ನು ಕಂಡು ಅವರನ್ನು ಸಂತೋಷಪಡಿಸಿದನು. ಅವನು ಅವರಿಬ್ಬರ ಕಾಲುಗಳಿಗೂ ಬಿದ್ದು ನಮಿಸಿದಾಗ ಅವರು ಇವನ್ನು ಆಲಂಗಿಸಿಕೊಂಡರು. ಇವರು ಸೋದರನ ಕ್ಷೇಮಸಂಗತಿಯನ್ನು ಅವರಿಗೆ ತಿಳಿಸಿ ಅವರ ಆತಂಕವನ್ನು ದೂರಮಾಡಿದನು.

---

ಏವಮುಕ್ತವತೀಂ ಖಡ್ಗದಂಷ್ಟ್ರಾಂ ಸ ಪರಿಣೀತವಾನ್ ।
ತಾಮಿಂದೀವರಸೇನೋಽಥ ಗಾಂಧರ್ವವಿಧಿನಾ ತತಃ ॥ ೧೫೩
ತಸ್ಥೌ ಚಾತ್ರೈವ ನಗರೇ ದೇವೀಖಡ್ಗಪ್ರಭಾವತಃ ।
ಚಿಂತಿತೋಪನಮದ್ಭೋಗಃ ಕೃತದಾರೋಽನುಜಾನ್ವಿತಃ ॥ ೧೫೪
ಏಕದಾ ಚ ಕನೀಯಾಂಸಂ ಭ್ರಾತರಂ ವ್ಯೋಮಗಾಮಿನಿ ।
ಸ್ವಖಡ್ಗಚಿಂತಾರತ್ನಸ್ಯ ಪ್ರಭಾವಾತ್ ಧ್ಯಾನನಿರ್ಮಿತೇ ॥ ೧೫೫
ವಿಮಾನೇ ವೀರಮಾರೋಪ್ಯ ಸೋಽನಿಚ್ಛಾಸೇನಮಶ್ರಮಾತ್ ।
ಪ್ರಾಹಿಣೋದಂತಿಕಂ ಪಿತ್ರೋಃ ಸ್ವೋದಂತಾವೇದನಾಯ ತಮ್ ॥ ೧೫೬
ಸೋಽಪಿಗತ್ವಾ ವಿಮಾನೇನ ತೇನ ಕ್ಷಿಪ್ರಾದ್ವಿಹಾಯಸಾ ।
ಪುರೀಮನಿಚ್ಛಾಸೇನಸ್ತಾಂ ಪಿತುಃ ಪ್ರಾಪದಿರಾವತೀಮ್ ॥ ೧೫೭
ತತ್ರ ತೌ ನಂದಯಾಮಾಸ ಪಿತರೌ ದರ್ಶನೇನ ಸಃ ।
ತೀವ್ರದುಃಖಾತಪಕ್ಲಾಂತೌ ಚಕೋರಾವಿವ ಚಂದ್ರಮಾಃ ॥ ೧೫೮
ಉಪೇತ್ಯ ಚಾಂಘ್ರಿಪತಿತಃ ಪರ್ಯಾಯಾಲಿಂಗಿತಸ್ತಯೋಃ ।
ನಿರಾಸ ಪೃಚ್ಛತೋಃ ಶಂಕಾಂ ಭ್ರಾತೃಕಲ್ಯಾಣವಾರ್ತಯಾ ॥ ೧೫೯

೧೫೦. ಮೇಲುನೋಟಕ್ಕೆ ದುಃಖದ್ದೂ ಸುಖದಲ್ಲಿ ಕೊನೆಗೊಂಡದ್ದೂ ಆದ ಅಣ್ಣನ ಹಾಗೂ ತನ್ನ ಕಥೆಯೆಲ್ಲವನ್ನೂ ಇವರಿಬ್ಬರ ಎದುರಿಗೆ ಹೇಳಿದನು.

೧೫೧. ಆ ಪಾಪಿ ಮಲತಾಯಿಯು ದ್ವೇಷದಿಂದ ತಮ್ಮನ್ನು ಮೋಸಮಾಡಿ, ಏನೇನು ಮಾಡಿದಳೆಂಬುದನ್ನೆಲ್ಲ (ತಂದೆಯು) ಕೇಳಿದನು.

೧೫೨. ಆಮೇಲೆ ಉತ್ಸವವನ್ನಾಚರಿಸಿದ ತಂದೆ ಮತ್ತು ತಾಯಿಯರ ಜೊತೆ, ಜನರಿಂದ ಗೌರವಿಸಲ್ಪಡುತ್ತಾ ಅನಿಚ್ಛಾಸೇನನು ಅಲ್ಲಿಯೇ ನಿಶ್ಚಿಂತನಾಗಿ ಇದ್ದನು.

೧೫೩. ಕೆಲವು ದಿನಗಳು ಕಳೆದ ಮೇಲೆ ಕನಸಿನಲ್ಲಿ ಅಣ್ಣನಿಗೇನೋ ಕೆಟ್ಟದ್ದಾಗಿರುವುದನ್ನು ಕಂಡು ಅನುಮಾನಿಸಿ ಆತನ ಬಗ್ಗೆ ವ್ಯಾಕುಲನಾಗಿ ತಂದೆಗೆ ಹೇಳಿದನು.

೧೫೪. ನಿಮ್ಮ ಉತ್ಕಂಠೆಯ ಬಗ್ಗೆ ಹೇಳಿ ಇಂದೀವರ ಸೇನನನ್ನು ಕರೆತರಲು ಹೋಗುತ್ತೇನೆ ಅಪ್ಪಣೆ ನೀಡಿರಿ.

೧೫೫–೧೫೬. ಅದನ್ನು ಕೇಳಿ ಮಗನನ್ನು ನೋಡುವ ತವಕದಿಂದ ತಂದೆ ಸಮ್ಮತಿ ನೀಡಿದನು. ತಾಯಿಯೂ ಸಮ್ಮತಿಸಿದಳು. ಆಗ ಅನಿಚ್ಛಾಸೇನನು ಅವನಿಂದ ಬೀಳ್ಕೊಂಡು ತನ್ನ ವಿಮಾನವನ್ನೇರಿ, ಆಕಾಶಮಾರ್ಗದಲ್ಲಿ ಶೈಲಪುರ ನಗರವನ್ನು ತಲುಪಿದನು. ಅಲ್ಲಿ ಬೆಳಿಗ್ಗೆ ಅಣ್ಣನ ಮನೆಯನ್ನು ಪ್ರವೇಶಿಸಿದನು.

---

ಶಶಂಸ ತಂ ಚ ವೃತ್ತಾಂತಮೇತಯೋಃ ಪುರತೋಽಖಿಲಮ್ ।
ಆಪಾತದುಃಖಂ ಸೌಖ್ಯಾಂತಂ ಭ್ರಾತುರಾತ್ಮನ ಏವ ಚ ॥ ೧೫೦

ಶುಶ್ರಾವ ಚಾತ್ರ ವಿಹಿತಂ ತಾದೃಶಂ ಪಾಪಯಾ ತಯಾ ।
ದ್ವೇಷೇಣಾಪರಮಾತ್ರಾ ತದಾತ್ಮನಾಶಾಯ ಕೈತವಮ್ ॥ ೧೫೧

ತತಃ ಪಿತ್ರೋತ್ಸವವತಾ ಯುಕ್ತೋ ಮಾತ್ರಾ ಚ ನಿರ್ವೃತಃ ।
ತಸ್ಥಾವನಿಚ್ಛಾಸೇನೋಽತ್ರ ಪೂಜ್ಯಮಾನೋ ಜನೇನ ಸಃ ॥ ೧೫೨

ಯಾತೇ ಕತಿಪಯಾಹೇ ಚ ದೃಷ್ಟದುಃಸ್ವಪ್ನಶಂಕಿತಃ ।
ಭ್ರಾತರಂ ಪ್ರತಿಸೋತ್ಕಂಠಃ ಪಿತರಂ ಸ ವ್ಯಜಿಜ್ಞಪತ್ ॥ ೧೫೩

ಗಚ್ಛಾಮಿ ಯುಷ್ಮದುತ್ಕಂಠಾಮಭಿಧಾಯಾನಯಾಮ್ಯಹಮ್ ।
ಆರ್ಯೇಂದೀವರಸೇನಂ ತಮನುಜಾನೀಹಿ ತಾತ ಮಾಮ್ ॥ ೧೫೪

ತಚ್ಛ್ರುತ್ವಾನುಮತಸ್ತೇನ ಪಿತ್ರಾ ಪುತ್ರೋತ್ಸುಕೇನ ಸಃ ।
ಜನನ್ಯಾ ಚ ವಿಮಾನಂ ಸ್ವಂ ತದೇವಾರುಹ್ಯ ಸತ್ವರಃ ॥ ೧೫೫

ಪ್ರಾಯಾದನಿಚ್ಛಾಸೇನಸ್ತದ್ವ್ಯೋಮ್ನಾ ಶೈಲಪುರಂ ಪುರಮ್ ।
ಪ್ರಾತಶ್ಚ ತತ್ರ ಪ್ರಾವಿಕ್ಷತ್ ಸ್ವಭ್ರಾತುಸ್ತಸ್ಯ ಮಂದಿರಮ್ ॥ ೧೫೬

೧೫೭. ಅಲ್ಲಿ ಎಚ್ಚರವಿಲ್ಲದೆ ನೆಲದ ಮೇಲೆ ಬಿದ್ದಿದ್ದ ಅಣ್ಣನನ್ನು ನೋಡಿದನು. ಪಕ್ಕದಲ್ಲಿಯೇ ಖಡ್ಗದಂಷ್ಟ್ರೆ ಮದನದಂಷ್ಟ್ರೆಯರಿಬ್ಬರೂ ಅಳುತ್ತಿದ್ದರು.

೧೫೮. ಇದೇನು, ಎಂದು ಗಾಬರಿಯಿಂದ ಕೇಳುತ್ತಿದ್ದ ಅವನಿಗೆ ಇನ್ನೊಬ್ಬಳಿಂದ ನಿಂದಿಸಿಕೊಳ್ಳುತ್ತಿದ್ದ ಖಡ್ಗದಂಷ್ಟ್ರೆಯು ತಲೆತಗ್ಗಿಸಿ ನುಡಿದಳು.

೧೫೯. "ನೀನು ಇಲ್ಲಿ ಇಲ್ಲದಿದ್ದಾಗ ಒಮ್ಮೆ ನಾನು ಸ್ನಾನಕ್ಕೆ ಹೋಗಿದ್ದಾಗ, ನಿನ್ನ ಅಣ್ಣನು ಗುಟ್ಟಾಗಿ ಈ ಮದನದಂಷ್ಟ್ರೆಯೊಂದಿಗೆ ಸುಖಪಟ್ಟನು.

೧೬೦. ಸ್ವಲ್ಪ ಹೊತ್ತಿನಲ್ಲಿಯೇ ಸ್ನಾನಮಾಡಿ ಬಂದ ನಾನು ಇವನು ಅವಳೊಂದಿಗೆ ಹಾಗೆ ಇದ್ದುದನ್ನು ಕಣ್ಣಾರೆ ಕಂಡು ಮಾತುಗಳಿಂದ ಗದರಿಸಿದೆನು.

೧೬೧. ಆಗ ಇವನು ಸಮಾಧಾನ ಹೇಳುತ್ತಿದ್ದರೂ ಹಣೆಯ ಬರಹವೆಂಬಂತೆ ಮೀರಲಾಗದ ಹೊಟ್ಟೆಕಿಚ್ಚಿನಿಂದ ಅತಿಯಾಗಿ ಮೋಹಿತಳಾಗಿ ಹೀಗೆ ಆಲೋಚಿಸಿದೆನು.

೧೬೨. ಓಹೋ ! ಇವನು ನನ್ನನ್ನು ಲೆಕ್ಕಿಸದೆ ಬೇರೆಯವಳನ್ನು ಸೇವಿಸುತ್ತಿದ್ದಾನೆ. ಖಡ್ಗದ ಮಹಿಮೆಯಿಂದಾಗಿಯೇ ಈತನಿಗೆ ಇಷ್ಟೊಂದು ಮದ ಎಂದು ನನಗೆ ಗೊತ್ತು.

೧೬೩. ಆದ್ದರಿಂದ ಇವನ ಈ ಖಡ್ಗವನ್ನು ಬಚ್ಚಿಡುತ್ತೇನೆ ಎಂದು ಯೋಚಿಸಿ ಮೂರ್ಖಳಾದ ನಾನು ಇವನು ಮಲಗಿದ್ದಾಗ ರಾತ್ರಿಯಲ್ಲಿ ಇದನ್ನು ಬೆಂಕಿಗೆ ಎಸೆದೆನು.

---

ದದರ್ಶ ತತ್ರ ನಿಃಸಂಜ್ಞಂ ಪತಿತಸ್ಥಿತಮಗ್ರಜಮ್ ।
ರುದತ್ಯೋರಂತಿಕೇ ಖಡ್ಗದಂಷ್ಟ್ರಾಮದನದಂಷ್ಟ್ರಯೋಃ ॥ ೧೫೭
ಕಿಮೇತದಿತಿ ಸಂಭ್ರಾಂತಂ ಪೃಚ್ಛಂತಂ ತಮಧೋಮುಖೀ ।
ಜಗಾದ ಖಡ್ಗದಂಷ್ಟ್ರಾ ಸಾ ನಿಂದಿತಾಪರಯಾ ತಯಾ ॥ ೧೫೮
ತ್ವಯ್ಯಸ್ಥಿತೇ ಮಯಿ ಸ್ನಾತುಂ ಗತಾಯಾಮೇಕದಾನಯಾ ।
ತ್ವದ್ಭ್ರಾತಾಯಂ ಸಹಾರಂಸ್ತ ರಹೋ ಮದನದಂಷ್ಟ್ರಯಾ ॥ ೧೫೯
ಕ್ಷಣಾತ್ ಸ್ನಾತ್ವಾಗತಾ ಚಾಹಂ ಸಾಕ್ಷಾದೇನಂ ತಥಾ ಸ್ಥಿತಮ್ ।
ಏತಯಾ ಯುಕ್ತಮದ್ರಾಕ್ಷಂ ವಾಚಾ ಚ ನಿರಭರ್ತ್ಸಯಮ್ ॥ ೧೬೦
ತತೋಽನುನೀತಾಪ್ಯೇತೇನ ನಿಯತ್ಯೇವಾವಿಲಂಘ್ಯಯಾ ।
ಈರ್ಷ್ಯಯಾ ಮೋಹಿತಾತ್ಯರ್ಥಮಹಮೇವಮಚಿಂತಯಮ್ ॥ ೧೬೧
ಅಹೋ ಅಗಣಯಿತ್ವೈವ ಮಾಮಯಂ ಭಜತೇಽಪರಾಮ್ ।
ಜಾನೇಽಸ್ಯ ಖಡ್ಗಮಾಹಾತ್ಮ್ಯಕೃತೋ ದರ್ಪೋಽಯಮೀದೃಶಃ ॥ ೧೬೨
ತದಸ್ಯ ಗೋಪಯಾಮ್ಯೇನಮಿತಿ ಸಂಚಿಂತ್ಯ ಮೂಢಯಾ ।
ಏತತ್‌ಖಡ್ಗೋ ನಿಶಿ ಕ್ಷಿಪ್ತಃ ಸುಪ್ತೇಽಸ್ಮಿನ್‌ದಹನೇ ಮಯಾ ॥ ೧೬೩

೧೬೪. ಅದರಿಂದ ಕಳಂಕಗೊಂಡ ಈ ಖಡ್ಗವು ಈ ಸ್ಥಿತಿಗೆ ಬಂದಿತು. ನನಗೆ ಪಶ್ಚಾತ್ತಾಪ ವಾಯಿತು. ಆಮೇಲೆ ಮದನದಂಷ್ಟ್ರೆಯು ನನ್ನ ಮೇಲೆ ಆಕ್ರೋಶ ವ್ಯಕ್ತಪಡಿಸಿದಳು.

೧೬೫. ಆಮೇಲೆ ಅವಳಿಗೂ ನನಗೂ ಶೋಕದಿಂದ ಬುದ್ಧಿ ಕುರುಡಾಗಿ ನಾವಿಬ್ಬರೂ ಸಾಯಲು ಸಿದ್ಧರಾಗಿರುವಾಗ ನೀನು ಇಲ್ಲಿಗೆ ಬಂದೆ.

೧೬೬. ಆದ್ದರಿಂದ ನೀನೇ ಈ ಖಡ್ಗವನ್ನು ತೆಗೆದುಕೋ. ರಾಕ್ಷಸ ಜಾತಿಯ ಬುದ್ಧಿಯನ್ನು ಬಿಡದ ಕ್ರೂರ ಕಾರ್ಯವೆಸಗಿರುವ ನನ್ನನ್ನು ಇದರಿಂದಲೇ ಕೊಲ್ಲು.'

೧೬೭. ಹೀಗೆ ಅತ್ತಿಗೆಯು ಹೇಳಿದಾಗ ಅನಿಚ್ಛಾಸೇನನು ದುಃಖಿತಳಾದ ಅವಳನ್ನು ಕೊಲ್ಲುವುದು ತರವಲ್ಲ ಎಂದೆಣಿಸಿ ತನ್ನ ತಲೆಯನ್ನೇ ಕತ್ತರಿಸಿಕೊಳ್ಳಲು ಬಯಸಿದನು.

೧೬೮. ""ಹೀಗೆ ಮಾಡಬೇಡ, ನಿನ್ನ ಅಣ್ಣನಾದ ಈ ರಾಜಪುತ್ರನು ಸತ್ತಿಲ್ಲ. ಖಡ್ಗದ ಮೇಲಣ ತಪ್ಪಿನ ಕೋಪದಿಂದ ದೇವಿಯು ಇವನನ್ನು ನಿಶ್ಚೇಷ್ಟಿತನನ್ನಾಗಿಸಿದ್ದಾಳೆ.

೧೬೯. ಈ ಖಡ್ಗದಂಷ್ಟ್ರೆಯು ತಪ್ಪಿತಸ್ಥಳೆಂದು ಬಗೆಯಬೇಡ. ಏಕೆಂದರೆ ಶಾಪದಿಂದಾಗಿ ಅವತರಿಸಿದವರ ಕೈಚಳಕವೇ ಇಂತಹುದು.

೧೭೦. ಈ ಇಬ್ಬರೂ ಹಿಂದಿನ ಜನ್ಮದಲ್ಲಿ ನಿನ್ನ ಅಣ್ಣನ ಹೆಂಡತಿಯರಾಗಿದ್ದವರೇ. ಆದ್ದರಿಂದ ನಿನ್ನ ಇಷ್ಟಾರ್ಥವು ಕೈಗೂಡಲು ಅಂಬಿಕೆಯನ್ನೇ ಒಲಿಸಿಕೋ."

---

ಕಲಂಕಿತಶ್ಚ ಖಡ್ಗೋಽಸೌ ಗತಶ್ಚೈಷ ದಶಾಮಿಮಾಮ್ ।
ಅನುತಪ್ತಾಸ್ಮಿ ಚಾಕ್ರುಷ್ಟಾ ತತೋ ಮದನದಂಷ್ಟ್ರಯಾ ॥ ೧೬೪
ಅಥೈತಸ್ಯಾಂ ಚ ಮಯಿ ಚ ದ್ವಯೋಃ ಶೋಕಾಂಧಚೇತಸೋಃ ।
ಮರಣಾಧ್ಯವಸಾಯಿನ್ಯೋರಾಗತಸ್ತ್ವಮಿಹಾಧುನಾ ॥ ೧೬೫
ತದ್‌ಗೃಹಾಣ ತ್ವಮೇವೈತತ್ ಖಡ್ಗಂ ನಿಸ್ತ್ರಿಂಶಕರ್ಮಿಕಾಮ್ ।
ಅತ್ಯಕ್ತಜಾತಿಧರ್ಮಾಂ ಮಾಮೇತೇನೈವ ನಿಪಾತಯ ॥ ೧೬೬
ಇತ್ಯುಕ್ತಃ ಸ ತಯಾನಿಚ್ಛಾಸೇನೋಽತ್ರ ಭ್ರಾತೃಜಾಯಯಾ ।
ತಾಪಾದವಧ್ಯಾಂ ಮತ್ವಾ ತಾಂ ಛೇತ್ತುಮೈಚ್ಛನ್ನಿಜಂ ಶಿರಃ ॥ ೧೬೭
ಮೈವಂ ಕಾರ್ಷೀರ್ಮೃತೋ ನಾಯಂ ರಾಜಪುತ್ರ ತವಾಗ್ರಜಃ ।
ಖಡ್ಗಪ್ರಮಾದಕೋಪೇನ ದೇವ್ಯಾ ತ್ವೇಷ ವಿಮೋಹಿತಃ ॥ ೧೬೮
ಅಸ್ಯಾಂ ಚ ಖಡ್ಗದಂಷ್ಟ್ರಾಯಾಂ ಮಂತವ್ಯಾ ನಾಪರಾಧಿತಾ ।
ಯತಃ ಶಾಪಾವತೀರ್ಣಾನಾಮೇತದ್ ಹಸ್ತವಿಜೃಂಭಿತಮ್ ॥ ೧೬೯
ಏತೇ ಚಾಸ್ಯ ತವ ಭ್ರಾತುಃ ಪೂರ್ವಭಾರ್ಯೇ ಉಭೇ ಅಪಿ ।
ತತ್‌ಪ್ರಸಾದಯ ತಾಮೇವ ದೇವೀಮಭಿಮತಾಪ್ತಯೇ ॥ ೧೭೦

೧೭೧. ಎಂದು ಆಗ ಆಕಾಶವಾಣಿಯು ನುಡಿಯಲು ಅದನ್ನು ಕೇಳಿ ಅನಿಚ್ಛಾಸೇನನು ಸಾಯುವ ಪ್ರಯತ್ನದಿಂದ ಹಿಂದೆಗೆದನು.

೧೭೨. ಅನಂತರ ಅವನು ಬೆಂಕಿಯಿಂದ ಕಳಂಕಗೊಂಡಿದ್ದ ಆ ಖಡ್ಗವನ್ನೆತ್ತಿಕೊಂಡು ಅದೇ ವಿಮಾನವನ್ನು ಏರಿ ವಿಂಧ್ಯವಾಸಿನೀ ದೇವಿಯ ಪದತಳಕ್ಕೆ ಹೋದನು.

೧೭೩. ಅಲ್ಲಿ ಉಪವಾಸವಿದ್ದು, ತನ್ನ ತಲೆಯನ್ನು ಉಡುಗೊರೆಯಾಗಿ ದೇವಿಗೆ ನೀಡಿ ಸಂತೋಷಪಡಿಸಲು ಯತ್ನಿಸುತ್ತಿದ್ದಾಗ ಆಕಾಶದಿಂದ ಈ ಮಾತು ಹೊರ ಹೊಮ್ಮಿತು.

೧೭೪. 'ಮಗನೇ, ದುಡುಕಿನ ಕೆಲಸವನ್ನು ಮಾಡಬೇಡ ಹೋಗು. ನಿನ್ನ ಅಣ್ಣನು ಬದುಕಲಿ, ಖಡ್ಗವು ಶುದ್ಧವಾಗಲಿ. ನಿನ್ನ ಭಕ್ತಿಯಿಂದ ನಾನು ಸಂತುಷ್ಟಳಾಗಿದ್ದೇನೆ.'

೧೭೫–೧೭೬. ಈ ದೇವವಾಣಿಯನ್ನು ಕೇಳಿ ಆ ಕೂಡಲೇ ಖಡ್ಗವು ನಿರ್ಮಲವಾದುದನ್ನು ನೋಡಿ ಅದನ್ನು ಕೈಯಲ್ಲಿ ಹಿಡಿದು ದೇವಿಗೆ ಪ್ರದಕ್ಷಿಣೆ ಮಾಡಿ ತನ್ನ ಮನೋರಥವನ್ನು ಹತ್ತಿದಂತೆ ಸಿದ್ಧವಾಗಿದ್ದ ವೇಗಗಾಮಿಯಾದ ಆ ವಿಮಾನವನ್ನು ಹತ್ತಿ ಉತ್ಸುಕತೆಯಿಂದ ಶೈಲಪುರಕ್ಕೆ ಬಂದನು.

೧೭೭. ಅಲ್ಲಿ ಎಚ್ಚರಗೊಂಡು ಆಗ ತಾನೆ ಎದ್ದು ಕುಳಿತ ಅಣ್ಣನನ್ನು ನೋಡಿ ಕೂಡಲೇ ಕಣ್ಣೀರಿಡುತ್ತಾ ಅವನ ಪಾದಗಳನ್ನು ಹಿಡಿದುಕೊಂಡನು. ಅವನು ತಮ್ಮನನ್ನು ಆಲಿಂಗಿಸಿಕೊಂಡನು.

---

ಇತಿ ತತ್ಕಾಲಮುದ್ಭೂತಾಮಂತರಿಕ್ಷಾತ್ ಸರಸ್ವತೀಮ್ ।
ಶ್ರುತ್ವಾ ನಿವವೃತೇऽನಿಚ್ಛಾಸೇನಃ ಸ ಮರಣೋದ್ಯಮಾತ್ ॥ ೧೭೧

ಆರುಹ್ಯೈವ ವಿಮಾನಂ ತದ್ಗೃಹೀತ್ವಾಗ್ನಿಕಲಂಕಿತಮ್ ।
ಖಡ್ಗಂ ತಂ ವಿಂಧ್ಯವಾಸಿನ್ಯಾಃ ಪಾದಮೂಲಂ ಜಗಾಮ ಸಃ ॥ ೧೭೨

ತತ್ರ ಮೂರ್ಧೋಪಹಾರೇಣ ತೋಷಯಿಷ್ಯನ್ನುಪೋಷಿತಃ ।
ದೇವೀಂ ತಾಮುದ್ಗತಾಮೇತಾಂ ಗಗನಾದಶೃಣೋದ್ಗಿರಮ್ ॥ ೧೭೩

ಮಾ ಪುತ್ರ ಸಾಹಸಂ ಕಾರ್ಷೀರ್ಗಚ್ಛ ಜೀವತು ತೇऽಗ್ರಜಃ ।
ಜಾಯತಾಂ ನಿರ್ಮಲಃ ಖಡ್ಗೋ ಭಕ್ತ್ಯಾ ತುಷ್ಟಾ ಹ್ಯಹಂ ತವ ॥ ೧೭೪

ಏತದ್ದಿವ್ಯಂ ವಚಃ ಶ್ರುತ್ವಾ ತತ್ಕ್ಷಣಂ ನಿಷ್ಕಲಂಕತಾಮ್ ।
ಪ್ರಾಪ್ತಂ ದೃಷ್ಟ್ವಾ ಕರೇ ಖಡ್ಗಂ ಕೃತ್ವಾ ತಸ್ಯಾಃ ಪ್ರದಕ್ಷಿಣಮ್ ॥ ೧೭೫

ಮನೋರಥಮಿವಾರುಹ್ಯ ವಿಮಾನಂ ಸಿದ್ಧಮಾಶುಗಮ್ ।
ಆಜಗಾಮೋತ್ಸುಕೋऽನಿಚ್ಛಾಸೇನಃ ಶೈಲಪುರಂ ಸ ತತ್ ॥ ೧೭೬

ತತ್ರ ದೃಷ್ಟ್ವೋತ್ಥಿತಂ ಸದ್ಯೋ ಲಬ್ಧಸಂಜ್ಞಂ ತಮಗ್ರಜಮ್ ।
ಜಗ್ರಾಹ ಪಾದಯೋಃ ಸಾಶ್ರುಃ ಕಂಠೇ ಸೋऽಪ್ಯೇನಮಗ್ರಹೀತ್ ॥ ೧೭೭

೧೭೮. ಆ ಇಬ್ಬರೂ ಅತ್ತಿಗೆಯರು ಅನಿಚ್ಛಾಸೇನನ ಪಾದಗಳಿಗೆರಗಿ, ನಿನ್ನಿಂದ ನಮ್ಮ ಪತಿಯು ಬದುಕುಳಿದನು' ಎಂದು ಹೇಳಿದರು.

೧೭೯. ಆಮೇಲೆ ಪ್ರಶ್ನೆ ಮಾಡಿದ ಅಣ್ಣ ಇಂದೀವರ ಸೇನನಿಗೆ............

೧೮೦. ಖಡ್ಗದಂಷ್ಟ್ರೆಯ ಮೇಲೆ ಅವನು ಕೋಪಗೊಳ್ಳಲಿಲ್ಲ. ಅವನ ಸಹೋದರನ ಬಗ್ಗೆ ಅವನಿಗೆ ಸಂತೋಷವಾಯಿತು.[1]

೧೮೧. ಈತನ ಬಾಯಿಂದ ಮಾತಾಪಿತೃಗಳು ತನ್ನನ್ನು ನೋಡಲು ತವಕದಿಂದಿರುವುದನ್ನೂ, ಮಲತಾಯಿಯು ಮಾಡಿದ ವಿಯೋಗವನ್ನುಂಟುಮಾಡಿದ ಮಾಯೆಯನ್ನೂ ಕೇಳಿದನು.

೧೮೨–೧೮೩. ಆಮೇಲೆ ತಮ್ಮನು ಒಪ್ಪಿಸಿಕೊಟ್ಟ ಖಡ್ಗವನ್ನು ತೆಗೆದುಕೊಂಡು ಅದರ ಪ್ರಭಾವದಿಂದ ಚಿಂತಿಸಿದ ಕೂಡಲೇ ಪ್ರತ್ಯಕ್ಷವಾದ ಆ ದೊಡ್ಡ ವಿಮಾನವನ್ನು ಹತ್ತಿ ಚಿನ್ನದ ಮನೆಯೊಂದಿಗೆ ತನ್ನ ಇಬ್ಬರು ಮಡದಿಯರನ್ನೂ ತಮ್ಮನನ್ನೂ ಕರೆದುಕೊಂಡು ಇಂದೀವರಸೇನನು ತನ್ನ ಊರಾದ ಇರಾವತೀ ನಗರಕ್ಕೆ ಹೋದನು.

೧೮೪. ಅಲ್ಲಿ ಜನರು ಆಶ್ಚರ್ಯದಿಂದ ನೋಡುತ್ತಿರುವಂತೆ ಆಕಾಶದಿಂದ ಕೆಳಗಿಳಿದು ಪರಿವಾರದೊಂದಿಗೆ ರಾಜಭವನವನ್ನು ಪ್ರವೇಶಿಸಿ ತಂದೆಯ ಬಳಿಗೆ ಹೋದನು.

---

ತ್ವಯಾ ನೌ ರಕ್ಷಿತೋ ಭರ್ತೇತ್ಯುಭೇ ತೇ ಪಾದಯೋಸ್ತತಃ ।
ನಿಪತ್ಯ ಭ್ರಾತೃಜಾಯೇ ತಮನಿಚ್ಛಾಸೇನಮೂಚತುಃ ॥ ೧೭೮
ಅಥೇಂದೀವರಸೇನಾಯ ಪೃಚ್ಛತೇ ಸೋಽಗ್ರಜಾಯ ತತ್ ।
————————————————————————॥ ೧೭೯

————————————————————————।
ನಾಕ್ರುಧ್ಯತ್ ಖಡ್ಗದಂಷ್ಟ್ರಾಯೈ ಭ್ರಾತರ್ಯಸ್ಮಿಂಸ್ತುತೋಷ ಚ ॥ ೧೮೦
ಶುಶ್ರಾವ ಚೈತಸ್ಯ ಮುಖಾತ್ ಪಿತರೌ ದರ್ಶನೋತ್ಸುಕೌ ।
ಮಾಯಾಮಪರಮಾತ್ರಾಚ ಕೃತಾಂ ತಾಂ ತದ್ವಿಯೋಗದಾಮ್ ॥ ೧೮೧
ತತೋ ಭ್ರಾತ್ರಾರ್ಪಿತಂ ಖಡ್ಗಂ ಗೃಹೀತ್ವಾ ತತ್ಪ್ರಭಾವತಃ ।
ಧ್ಯಾತೋಪನತಮಾರುಹ್ಯ ವಿಮಾನಂ ಸುಮಹಚ್ಚ ಸಃ ॥ ೧೮೨
ಸಹೇಮಮಂದಿರೋ ಭಾರ್ಯಾದ್ವಯೇನ ಸಹ ಸಾನುಜಃ ।
ತಾಮಿಂದೀವರಸೇನಃ ಸ್ವಾಂ ಪುರೀಮಾಗಾದಿರಾವತೀಮ್ ॥ ೧೮೩
ತತ್ರಾವತೀರ್ಯ ನಭಸೋ ವಿಸ್ಮಯಾಲೋಕಿತೋ ಜನೈಃ ।
ರಾಜವೇಶ್ಮ ಪಿತುಃ ಪಾರ್ಶ್ವಂ ವಿವೇಶ ಸಪರಿಚ್ಛದಃ ॥ ೧೮೪

---

1 ಟಿಪ್ಪಣಿ: ಇಲ್ಲಿ ೧೭೯ನೆಯ ಶ್ಲೋಕದ ಉತ್ತರಾರ್ಧವೂ ೧೮೦ನೆಯ ಶ್ಲೋಕದ ಪೂರ್ವಾರ್ಧವೂ ಇಲ್ಲ.

೧೧೫. ತಾಯಿ ತಂದೆಯರನ್ನು ಕಂಡು ಅವನ ಮುಖವು ಕಣ್ಣೀರಿನ ಧಾರೆಯಿಂದ ನೆನೆಯಿತು. ಅವನು ಅವರಿಬ್ಬರ ಕಾಲುಗಳಿಗೆ ಬಿದ್ದನು.

೧೧೬. ಅವರಿಬ್ಬರೂ ಅವನನ್ನೂ ಅವನ ತಮ್ಮನನ್ನೂ ನೋಡಿದ ಕೂಡಲೇ ಅಪ್ಪಿಕೊಂಡರು. ಆಗ ಅಮೃತದಿಂದ ಶರೀರವೆಲ್ಲವೂ ಒದ್ದೆಯಾದಂತೆ ಅವರ ತಾಪದ ಶಮನವಾಯಿತು.

೧೧೭. ದಿವ್ಯ ರೂಪದ ಇಬ್ಬರು ಪತ್ನಿಯರೂ ಅವರ ಕಾಲುಗಳಿಗೆ ನಮಸ್ಕಾರ ಮಾಡಿದರು. ಆ ಇಬ್ಬರು ಸೊಸೆಯರನ್ನೂ ನೋಡುತ್ತಾ ರಾಜರಾಣಿಯರು ಸಂತೋಷಪಟ್ಟು ಅಭಿನಂದಿಸಿದರು.

೧೧೮. ಮಾತಿನ ಮಧ್ಯೆ ಅವರಿಬ್ಬರೂ, ದೇವವಾಣಿಯು ನುಡಿದಂತೆ ಇಂದೀವರಸೇನನ ಪೂರ್ವಜನ್ಮದ ಮಡದಿಯರೆಂದು ತಿಳಿದು ಬಹಳ ಆನಂದಿತರಾದರು.

೧೧೯. ವಿಮಾನದಲ್ಲಿ ಓಡಾಡುವುದು, ಚಿನ್ನದ ಮನೆಯನ್ನು ತಂದಿದ್ದು ಮೊದಲಾದ ಮಗನ ಪ್ರಭಾವವನ್ನು ಕಂಡು ಆಶ್ಚರ್ಯದಿಂದ ಹರ್ಷಿಸಿದರು.

೧೨೦. ಆಮೇಲೆ ತಾಯಿತಂದೆಯರು ಮತ್ತು ಮಡದಿಯರೊಂದಿಗೆ ಜನತೆಗೆ ಉತ್ಸವವನ್ನು ನೀಡುತ್ತಾ, ಇಂದೀವರಸೇನನು (ಸುಖದಿಂದ) ಇರುತ್ತಿದ್ದನು.

೧೨೧. ಒಂದು ದಿನ ತನ್ನ ತಂದೆ ರಾಜ ಪರಿತ್ಯಾಗಸೇನನಿಗೆ ಹೇಳಿ ತನ್ನ ತಮ್ಮನೊಂದಿಗೆ ಇಂದೀವರಸೇನನು ಮತ್ತೆ ದಿಗ್ವಿಜಯಕ್ಕೆ ಹೊರಟನು.

---

ತಥಾಭೂತಶ್ಚ ಪಿತರಂ ತಂ ದೃಷ್ಟ್ವಾ ಮಾತರಂ ಚ ಸಃ ।
ಪಪಾತ ಪಾದಯೋರ್ತ್ಸಾಶ್ರುಧಾರಾಧೌತಮುಖಸ್ತಯೋಃ ॥ ೧೧೫

ತೌ ಚ ತಂ ಸಹಸಾ ದೃಷ್ಟ್ವಾ ಪುತ್ರಮಾಶ್ಲಿಷ್ಯ ಸಾನುಜಮ್ ।
ಅಮೃತೇನೈವ ಸಿಕ್ತಾಂಗೌ ತಾಪನಿರ್ವಾಣಮೀಯತುಃ ॥ ೧೧೬

ದಿವ್ಯರೂಪೇ ಚ ತದ್ಭಾರ್ಯೇ ಕೃತಪಾದಾಭಿವಂದನೇ ।
ಸ್ನುಷೇ ಉಭೇ ತೇ ಪಶ್ಯಂತೌ ಹೃಷ್ಟಾವಭಿನನಂದತುಃ ॥ ೧೧೭

ಕಥಾಪ್ರಸಂಗಾದ್ ಬುದ್ಧ್ವಾ ಚ ತಸ್ಯ ತೇ ಪೂರ್ವನಿರ್ಮಿತೇ ।
ದಿವ್ಯವಾಕ್ಕಥಿತೇ ಭಾರ್ಯೇ ಯಯತುಸ್ತೌ ಪರಾಂ ಮುದಮ್ ॥ ೧೧೮

ವಿಮಾನಗತಿಸೌವರ್ಣಮಂದಿರಾನಯನಾದಿನಾ ।
ಪ್ರಭಾವೇಣ ಸುತಸ್ಯಾಸ್ಯ ವಿಸ್ಮಯೇನ ನನಂದತುಃ ॥ ೧೧೯

ತತಸ್ತಾಭ್ಯಾಂ ಸ ಸಹಿತಃ ಪಿತೃಭ್ಯಾಂ ಸಪರಿಗ್ರಹಃ ।
ಆಸ್ತೇಂದೀವರಸೇನೋಽತ್ರ ಪ್ರದತ್ತಜನತೋತ್ಸವಃ ॥ ೧೨೦

ಏಕದಾ ಚ ಪರಿತ್ಯಾಗಸೇನಂ ತಂ ಜನಕಂ ನೃಪಮ್ ।
ವಿಜ್ಞಪ್ಯ ಸಾನುಜಃ ಪ್ರಾಯಾತ್ಪುನರ್ದಿಗ್ವಿಜಯಾಯ ಸಃ ॥ ೧೨೧

೧೯೨. ಬಲಶಾಲಿಯಾದ ಅವನು ಖಡ್ಗದ ಪ್ರಭಾವದಿಂದ ಇಡಿಯ ಭೂಮಂಡಲವನ್ನೇ ಗೆದ್ದು ಇತರ ರಾಜರ ಚಿನ್ನ, ಆನೆ, ಕುದುರೆ, ರತ್ನಗಳನ್ನು ತೆಗೆದುಕೊಂಡು ಬಂದನು.

೧೯೩. ಸೈನ್ಯದ ಚಲನೆಯಿಂದ ಮೇಲಿದ್ದ ಧೂಳಿಯ ರೂಪದಲ್ಲಿ ಅವನು ಗೆದ್ದ ಭೂಮಿಯೇ ಹೆದರಿಕೊಂಡು ಹಿಂಬಾಲಿಸುತ್ತಿದೆಯೇನೋ ಎಂಬಂತೆ ಕಾಣಿಸುತ್ತಿರಲು ಅವನು ಸ್ವಂತ ನಗರಿಯನ್ನು ತಲುಪಿದನು.

೧೯೪. ರಾಜಧಾನಿಯನ್ನು ಪ್ರವೇಶಿಸಿದ ಅವನನ್ನು ತಂದೆಯು ಎದುರುಗೊಂಡನು. ಇಂದೀವರಸೇನನು ತಮ್ಮನೊಂದಿಗೆ ತಾಯಿ ಅಧಿಕ ಸಂಗಮೆಯನ್ನು ಆನಂದಗೊಳಿಸಿದನು.

೧೯೫. ರಾಜಸಮೂಹವನ್ನೆಲ್ಲ ಸತ್ಕರಿಸಿ ತನ್ನ ಹೆಂಡತಿಯರು ಮತ್ತು ಬಂಧುಗಳೊಂದಿಗೆ ಆ ದಿನ ಇಂದೀವರಸೇನನು ಸಂತೋಷದಿಂದ ಕಳೆದನು.

೧೯೬. ಮಾರನೆಯ ದಿನ (ಭೂಮಿಯನ್ನೆಲ್ಲ) ತಂದೆಗೆ ಕಪ್ಪದ ಮೂಲಕ ಸಮರ್ಪಣೆ ಮಾಡಿದ ಆ ರಾಜಪುತ್ರನು ಇದ್ದಕ್ಕಿದ್ದಂತೆ ತನ್ನ ಪೂರ್ವಜನ್ಮವನ್ನು ನೆನಪಿಸಿಕೊಂಡನು.

೧೯೭. ಆಗ ನಿದ್ದೆಯಿಂದ ಎದ್ದವನಂತೆ ಅವನು ತಂದೆಗೆ ಹೇಳಿದನು. "ಅಪ್ಪಾ, ನನಗೆ ಹಿಂದಿನ ಜನ್ಮದ ನೆನಪುಂಟಾಯಿತು. ಅದನ್ನೀಗ ಹೇಳುವೆನು ಕೇಳು.

---

ಖಡ್ಗಪ್ರಭಾವಾಜ್ಜಿತ್ವಾ ಚ ಪೃಥ್ವೀಂ ಕೃತ್ಸ್ನಾಂ ಮಹಾಭುಜಃ ।
ಆಯಯೌ ಹೇಮಹಸ್ತ್ಯಶ್ವರತ್ನಾನ್ಯಾಹೃತ್ಯ ಭೂಭುಜಾಮ್ ॥ ೧೯೨

ಅವಾಪ ನಗರೀಂ ತಾಂ ಚ ನಿಜಾಂ ವಿಜಿತಯಾ ಭಯಾತ್ ।
ಅನುಯಾತ ಇವೋದ್ಭೂತಸೈನ್ಯಧೂಲಿನಿಭಾದ್ಭುವಾ ॥ ೧೯೩

ಪ್ರವಿಶ್ಯ ರಾಜಧಾನೀಂ ಚ ಪಿತ್ರಾ ಪ್ರತ್ಯುದ್ಗತೋಽಥ ಸಃ ।
ಜನನೀಂ ನಂದಯಾಮಾಸ ಸಾನುಜೋಽಧಿಕಸಂಗಮಾಮ್ ॥ ೧೯೪

ಸಂಮಾನ್ಯ ರಾಜಲೋಕಂ ಚ ಸ್ವಭಾರ್ಯಾಸ್ವಜನಾನ್ವಿತಃ ।
ತತ್ರೇಂದೀವರಸೇನಸ್ತತ್ ಪ್ರಮೋದೇನಾನಯದ್ದಿನಮ್ ॥ ೧೯೫

ಅನ್ಯೇದ್ಯುಸ್ತತ್ಕರದ್ವಾರೇಣಾರ್ಪಯಿತ್ವಾ ಚ ಮೇದಿನೀಮ್ ।
ಪಿತ್ರೇ ಸ ರಾಜಪುತ್ರಃ ಸ್ವಾಮಕಸ್ಮಾಜ್ಜಾತಿಮಸ್ಮರತ್ ॥ ೧೯೬

ತತಃ ಸುಪ್ತಪ್ರಬುದ್ಧಾಭೋ ಜನಕಂ ತಮುವಾಚ ಚ ।
ಮಯಾ ಜಾತಿಃ ಸ್ಮೃತಾ ತಾತ ತದಿದಂ ಶೃಣು ವಚ್ಮಿ ತೇ ॥ ೧೯೭

೧೯೮. ಹಿಮಾಲಯದ ತಪ್ಪಲು ಪ್ರದೇಶದಲ್ಲಿ ಮುಕ್ತಾಪುರವೆಂಬ ಪಟ್ಟಣವೊಂದಿದೆ. ಅಲ್ಲಿ ಮುಕ್ತಾಸೇನನೆಂಬ ವಿದ್ಯಾಧರಾಧಿಪತಿಯು ರಾಜನಾಗಿದ್ದಾನೆ.

೧೯೯. ಕಂಬುವತಿಯೆಂಬ ಅವನ ರಾಣಿಯಲ್ಲಿ ಗುಣವಂತರಾದ ಪದ್ಮಸೇನ–ರೂಪಸೇನ ಎಂಬಿಬ್ಬರು ಮಕ್ಕಳು ಕ್ರಮವಾಗಿ ಹುಟ್ಟಿದರು.

೨೦೦. ಅವರಿಬ್ಬರಲ್ಲಿ ಪದ್ಮಸೇನನನ್ನು ವಿದ್ಯಾಧರಾಧಿಪತಿಯ ಮಗಳಾದ ಆದಿತ್ಯಪ್ರಭೆಯು ಪ್ರೀತಿಯಿಂದ ತಾನೇ ವರಿಸಿದಳು.

೨೦೧. ಅದನ್ನು ತಿಳಿದ ಅವಳ ಗೆಳತಿಯೂ ವಿದ್ಯಾಧರ ಕನ್ನಿಕೆಯೂ ಆದ ಚಂದ್ರವತೀ ಎನ್ನುವವಳು ಕಾಮಾರ್ತಳಾಗಿ ಬಂದು ತಾನೂ ಅವನನ್ನೇ ವರಿಸಿದಳು.

೨೦೨. ಆಗ ಇಬ್ಬರು ಹೆಂಡತಿಯರನ್ನು ಹೊಂದಿದ ಪದ್ಮಸೇನನು ಸವತಿಯ ಮೇಲೆ ಹೊಟ್ಟೆಕಿಚ್ಚಿನಿಂದಿದ್ದ ಹೆಂಡತಿ ಆದಿತ್ಯಪ್ರಭೆಯಿಂದ ದಿನವೂ ವ್ಯಥೆಪಡುತ್ತಿದ್ದನು.

೨೦೩. ಹೊಟ್ಟೆಕಿಚ್ಚಿನಿಂದ ಕುರುಡಾದ ಪತ್ನಿಯರ ಜಗಳವನ್ನು ನಾನು ದಿನವೂ ಸಹಿಸಲಾರೆ. ಈ ನಿರ್ವೇದದಿಂದ ಸಮಾಧಾನ ಹೊಂದಲು ತಪೋವನಕ್ಕೆ ಹೋಗುತ್ತೇನೆ.

೨೦೪. ಆದ್ದರಿಂದ ಅಪ್ಪಾ, ನನಗೆ ಅನುಮತಿ ನೀಡು' ಎಂದು ಪದ್ಮಸೇನನು ತನ್ನ ತಂದೆಯಾದ ಮುಕ್ತಾಸೇನನಿಗೆ ಒತ್ತಾಯದಿಂದ ಮತ್ತೆ ಮತ್ತೆ ಹೇಳಿದನು.

---

ಅಸ್ತಿ ಮುಕ್ತಾಪುರಂ ನಾಮ ಸಾನೌ ಹಿಮವತಃ ಪುರಮ್ ।
ತತ್ರಾಸ್ತಿ ಮುಕ್ತಾಸೇನಾಖ್ಯೋ ರಾಜಾ ವಿದ್ಯಾಧರೇಶ್ವರಃ ॥ ೧೯೮

ಕಂಬುವತ್ಯಭಿಧಾನಾಯಾಂ ದೇವ್ಯಾಂ ತಸ್ಯ ಸುತೌ ಕ್ರಮಾತ್ ।
ಜಾತೌ ದ್ವೌ ಪದ್ಮಸೇನಶ್ಚ ರೂಪಸೇನಶ್ಚ ಸದ್ಗುಣೌ ॥ ೧೯೯

ಪದ್ಮಸೇನಂ ತಯೋಃ ಪ್ರೇಮ್ಣಾ ಸ್ವಯಂ ವೃತವತೀ ಪತಿಮ್ ।
ಕನ್ಯಾದಿತ್ಯಪ್ರಭಾ ನಾಮ ವಿದ್ಯಾಧರವರಾತ್ಮಜಾ ॥ ೨೦೦

ತದ್‌ಬುದ್ಧ್ವಾ ತದ್ವಯಸ್ಯಾಪಿ ನಾಮ್ನಾ ಚಂದ್ರವತೀ ಸ್ವಯಮ್ ।
ಏತ್ಯಾವೃಣೀತ ಕಾಮಾರ್ತಾ ತಂ ವಿದ್ಯಾಧರಕನ್ಯಕಾ ॥ ೨೦೧

ದ್ವಿಭಾರ್ಯಃ ಸ ತದಾ ಪದ್ಮಸೇನೋ ನಿತ್ಯಮಖಿದ್ಯತ ।
ಸಪತ್ನೀಸೇರ್ಷ್ಯಯಾದಿತ್ಯಪ್ರಭಯಾ ಭಾರ್ಯಯಾ ತಯಾ ॥ ೨೦೨

ಈರ್ಷ್ಯಾಂಧಭಾರ್ಯಾಕಲಹಂ ಸೋಢುಂ ಶಕ್ನೋಮಿ ನಾನ್ವಹಮ್ ।
ತಪೋವನಾಯ ಗಚ್ಛಾಮಿ ನಿರ್ವೇದಸ್ಯಾಸ್ಯ ಶಾಂತಯೇ ॥ ೨೦೩

ತತ್ತಾತ ದೇಹಿ ಮೇಽನುಜ್ಞಾಮಿತಿ ನಿರ್ಬಂಧತೋ ಮುಹುಃ ।
ಜನಕಂ ಪದ್ಮಸೇನಃ ಸ್ವಂ ಮುಕ್ತಾಸೇನಂ ಜಗಾದ ಸಃ ॥ ೨೦೪

೨೦೫. ಅವನ ಒತ್ತಾಯಕ್ಕೆ ಸಿಟ್ಟು ಮಾಡಿಕೊಂಡ ತಂದೆಯು "ನೀನು ತಪೋವನಕ್ಕೇಕೆ ಹೋಗುವೆ ? ಭೂಲೋಕಕ್ಕೆ ಹೋಗು' ಎಂದು ಮಗನಿಗೂ ಸೊಸೆಯರಿಗೂ ಶಾಪವಿತ್ತನು.

೨೦೬. ಅಲ್ಲಿ ನಿನ್ನ ಈ ಹೆಂಡತಿ ಆದಿತ್ಯಪ್ರಭೆಯು ಜಗಳದಲ್ಲಿ ಆಸಕ್ತಳಾಗಿ ರಾಕ್ಷಸ ಜನ್ಮವನ್ನು ಪಡೆದು ನಿನ್ನ ಹೆಂಡತಿಯೇ ಆಗಲಿದ್ದಾಳೆ.

೨೦೭. ಎರಡನೆಯವಳಾದ ಈ ಚಂದ್ರವತಿಯು ನಿನ್ನಲ್ಲಿ ತುಂಬ ಅನುರಾಗವುಳ್ಳವಳಾಗಿ ಭೂಮಿಯಲ್ಲಿ ರಾಕ್ಷಸ ರಾಜಕುಮಾರಿಯಾಗಿ ಪ್ರಿಯತಮನಾದ ನಿನ್ನನ್ನು ಪಡೆಯಲಿದ್ದಾಳೆ.

೨೦೮. ಹಿರಿಯನಾದ ನಿನ್ನನ್ನು ಹಿಂಬಾಲಿಸಲು ಆಸೆಯುಳ್ಳ ಈ ರೂಪಸೇನನೂ ನಿನಗೆ ಅಲ್ಲಿ ಸೋದರನಾಗಲಿದ್ದಾನೆ.

೨೦೯. ಇಬ್ಬರು ಹೆಂಡತಿಯರಿಂದಾಗುವ ದುಃಖವನ್ನು ಅಲ್ಲಿಯೂ ಸ್ವಲ್ಪ ಪಡೆಯಲಿರುವೆ' ಹೀಗೆ ಹೇಳಿ ವಿರಮಿಸಿ ಆಮೇಲೆ ನಮ್ಮ ಶಾಪವು ಕೊನೆಗಾಣುವ ಬಗೆಯನ್ನೂ ಅವನು ಹೇಳಿದನು.

೨೧೦. ಯಾವಾಗ ರಾಜಪುತ್ರನಾದ ನೀನು ಭೂಮಿಯನ್ನು ಗೆದ್ದು ಅದನ್ನು ತಂದೆಗೆ ಸಮರ್ಪಣೆ ಮಾಡುವೆಯೋ ಆಗ ಪೂರ್ವಜನ್ಮವನ್ನು ನೆನೆಸಿಕೊಂಡು ಇವರೊಂದಿಗೆ ಬಿಡುಗಡೆ ಹೊಂದಲಿರುವೆ.

---

ಸೋಽಪಿ ತಂ ತದ್ಗ್ರಹಕ್ರುದ್ಧಃ ಸಭಾರ್ಯಮಶಪತ್ಪಿತಾ ।
ಕಿಂ ತೇ ತಪೋವನಂ ಗತ್ವಾ ಮರ್ತ್ಯಲೋಕಮವಾಪ್ನುಹಿ ॥ ೨೦೫

ತತ್ರೈಷಾ ಕಲಹಾಸಕ್ತಾ ಭಾರ್ಯಾದಿತ್ಯಪ್ರಭಾ ತವ ।
ರಾಕ್ಷಸೀಂ ಯೋನಿಮಾಸಾದ್ಯ ತ್ವದ್ಭಾರ್ಯೈವ ಭವಿಷ್ಯತಿ ॥ ೨೦೬

ದ್ವಿತೀಯಾ ಚಂದ್ರವತ್ಯೇಷಾ ತ್ವಯಿ ರಕ್ತಾತಿವಲ್ಲಭಾ ।
ರಾಜಸ್ತ್ರೀ ರಾಕ್ಷಸೀ ಭೂತ್ವಾ ಭೂಮೌ ತ್ವಾಂ ಪ್ರಾಪ್ಸ್ಯತಿ ಪ್ರಿಯಮ್ ॥ ೨೦೭

ಸಾಭಿಲಾಷೋಽನುಸರ್ತುಂ ತ್ವಾಂ ಜ್ಯೇಷ್ಠಂ ಯಲ್ಲಕ್ಷಿತೋ ಮಯಾ ।
ತದೇಷ ರೂಪಸೇನೋಽಪಿ ಭಾವೀ ಭ್ರಾತೈವ ತತ್ರ ತೇ ॥ ೨೦೮

ದ್ವಿಭಾರ್ಯತ್ವಕೃತಂ ಕಿಂಚಿದ್ದುಃಖಂ ತತ್ರಾಪ್ಯವಾಪ್ಸ್ಯಸಿ ।
ಏವಮುಕ್ತ್ವಾ ವಿರಮ್ಯೇತ್ಥಂ ಶಾಪಾಂತಮಕರೋತ್ಸ ನಃ ॥ ೨೦೯

ರಾಜಪುತ್ರೋ ಭುವಂ ಜಿತ್ವಾ ಪೃಥ್ವೀಂ ಪಿತ್ರೋಃ ಪ್ರದಾಸ್ಯತಿ ।
ಯದಾ ತದಾ ಸಹಾಮೀಭಿರ್ಜಾತಿಂ ಸ್ಮೃತ್ವಾ ವಿಮೋಕ್ಷ್ಯಸೇ ॥ ೨೧೦

೨೧೧. ಹೀಗೆ ಅವನ ತಂದೆ ಹೇಳಿದ ನಂತರ ಪದ್ಮಸೇನನು ಆ ಕೂಡಲೇ ಉಳಿದ ಮೂವರೊಂದಿಗೆ ಭೂಲೋಕಕ್ಕೆ ಇಳಿದನು.

೨೧೨. ಅದೇ ಪದ್ಮಸೇನನೇ ಆದ ನಾನು ಇಲ್ಲಿ ನಿನ್ನ ಮಗನಾಗಿ ಹುಟ್ಟಿ ಇಂದೀವರಸೇನನಾಗಿ ನನ್ನ ಕರ್ತವ್ಯವನ್ನು ಮಾಡಿದೆ.

೨೧೩. ಇನ್ನೊಬ್ಬ ರೂಪಸೇನನೆಂಬ ವಿದ್ಯಾಧರ ಪುತ್ರನೇ ಅನಿಚ್ಛಾಸೇನನಾಗಿ ಹುಟ್ಟಿದ ನನ್ನ ತಮ್ಮ.

೨೧೪. ನನ್ನ ಮಡದಿಯರಾಗಿದ್ದ ಆದಿತ್ಯಪ್ರಭೆ ಮತ್ತು ಚಂದ್ರಾವತಿಯರೇ ಈ ಖಡ್ಗದಂಷ್ಟ್ರೆ ಮತ್ತು ಮದನದಂಷ್ಟ್ರೆ .

೨೧೫. ಈಗ ನಮ್ಮ ಶಾಪವು ಕೊನೆಗೊಳ್ಳುವ ಸಮಯವು ಬಂದಿತು. ಆದ್ದರಿಂದ, ಅಪ್ಪಾ, ನಾವೆಲ್ಲರೂ ಈಗ ನಮ್ಮ ಸ್ವಂತದ್ದಾದ ವಿದ್ಯಾಧರರ ಪದವಿಯನ್ನು ಹೊಂದಿ ಹೊರಟುಹೋಗುತ್ತೇವೆ.'

೨೧೬-೨೧೭ ಇಷ್ಟು ಹೇಳಿದ ಆತನು ತಮ್ಮ ಜನ್ಮವನ್ನು ನೆನೆಸಿಕೊಂಡ ತನ್ನ ಮಡದಿಯರು ಮತ್ತು ತಮ್ಮನೊಂದಿಗೆ ಮನುಷ್ಯದೇಹವನ್ನು ಬಿಟ್ಟು ವಿದ್ಯಾಧರ ರೂಪವನ್ನು ಹೊಂದಿ, ಮಾತಾಪಿತೃಗಳ ಚರಣಗಳಿಗೆರಗಿ ಇಬ್ಬರು ಪತ್ನಿಯರನ್ನೂ ಮಡಿಲಲ್ಲಿಟ್ಟು ತನ್ನ ತಮ್ಮನೊಂದಿಗೆ ಆಕಾಶಮಾರ್ಗದಲ್ಲಿ ಸ್ವಂತ ಊರಾದ ವಿದ್ಯಾಧರ ನಾಡಿಗೆ ಹೋದನು.

---

ಇತಿ ಪಿತ್ರೋದಿತಸ್ತೇನ ಪದ್ಮಸೇನೋ ನಿಜೇನ ಸಃ ।
ತತ್ಕಾಲಂ ಸಹ ತೈರನ್ಯೈರ್ಮರ್ತ್ಯಲೋಕಮವಾತರತ್ ॥ ೨೧೧

ಸ ಪದ್ಮಸೇನಸ್ತಾತಾಯಮಹಂ ಜಾತಃ ಸುತಸ್ತವ ।
ನಾಮ್ನೇಂದೀವರಸೇನೋಽತ್ರ ಕರ್ತವ್ಯಂ ಚ ಕೃತಂ ಮಯಾ ॥ ೨೧೨

ಯೋಽಪರೋ ರೂಪಸೇನಶ್ಚ ವಿದ್ಯಾಧರಕುಮಾರಕಃ ।
ಅನಿಚ್ಛಾಸೇನ ಇತ್ಯೇವ ಜಾತಃ ಸೋಽನುಜ ಏವ ಮೇ ॥ ೨೧೩

ಯಾ ಸಾದಿತ್ಯಪ್ರಭಾ ಭಾರ್ಯಾ ಯಾ ಚ ಚಂದ್ರಾವತೀತಿ ಮೇ ।
ವಿದ್ಧಿ ತೇ ದ್ವೇ ಇಮೇ ಖಡ್ಗದಂಷ್ಟ್ರಾಮದನದಂಷ್ಟ್ರಿಕೇ ॥ ೨೧೪

ಇದಾನೀಂ ಚಾಯಮವಧಿಃ ಪ್ರಾಪ್ತಃ ಶಾಪಸ್ಯ ಸೋಽಸ್ಯ ನಃ ।
ತದ್ವ್ರಜಾಮೋ ವಯಂ ತಾತ ನಿಜಂ ವೈದ್ಯಾಧರಂ ಪದಮ್ ॥ ೨೧೫

ಇತ್ಯುಕ್ತ್ವಾ ಚ ಸಮಂ ಭಾರ್ಯಾಭ್ರಾತೃಭಿಃ ಸ್ಮೃತಜಾತಿಭಿಃ ।
ತ್ಯಕ್ತ್ವೈವ ಮಾನುಷೀಂ ಮೂರ್ತಿಂ ಭೂತ್ವಾ ವಿದ್ಯಾಧರಾಕೃತಿಃ ॥ ೨೧೬

ಪ್ರಣಮ್ಯ ಪಿತ್ರೋಶ್ಚರಣೌ ಕೃತ್ವಾಂಕೇ ದಯಿತಾದ್ವಯಮ್ ।
ಸಾನುಜಃ ಪ್ರಯಯೌ ವ್ಯೋಮ್ನಾ ನಿಜಂ ವೈದ್ಯಾಧರಂ ಪುರಮ್ ॥ ೨೧೭

೨೧೮–೨೧೯. ಅಲ್ಲಿ ತಾಯಿಯ ಕಣ್ಣುಗಳಿಗೆ ಹಬ್ಬವಾಗಿದ್ದ ಈ ಸದ್ಗುಣಿ ಪದ್ಮಸೇನನು ತಂದೆಯಾದ ಮುಕ್ತಾಸೇನನಿಂದ ಅಭಿನಂದಿತನಾಗಿ ತಮ್ಮನಾದ ರೂಪಸೇನನೊಂದಿಗೆ ಮತ್ತೆಂದೂ ಹೊಟ್ಟೆಕಿಚ್ಚನ್ನು ತೋರಿಸದ ತನ್ನ ಇಬ್ಬರು ಪತ್ನಿಯರಾದ ಆದಿತ್ಯಪ್ರಭೆ ಚಂದ್ರವತಿಯರೊಂದಿಗೆ ನಿಶ್ಚಿಂತನಾಗಿ ವಾಸಮಾಡುತ್ತಿದ್ದನು.

೨೨೦. ಹೀಗೆ ಮಂತ್ರಿ ಗೋಮುಖನು ಹಾದಿಯಲ್ಲಿ, ರಮಣೀಯವಾದ ಕಥೆಯನ್ನು ನರವಾಹನದತ್ತನಿಗೆ ಪುನಃ ಹೇಳಿದನು.

೨೨೧. "ಈ ರೀತಿಯಲ್ಲಿ ದೊಡ್ಡವರಿಗೆ ಮಾತ್ರವೇ ದೊಡ್ಡ ಕಷ್ಟಗಳೂ ಸುಖಗಳೂ ಉಂಟಾಗುತ್ತವೆ. ಪ್ರಭುವೇ, ಇತರರಿಗೆ ಕಷ್ಟವು ಎಷ್ಟಿದ್ದೀತು ? ಸುಖವಾದರೂ ಎಷ್ಟು ?

೨೨೨. ನೀನಾದರೋ ರತ್ನಪ್ರಭಾ ದೇವಿಯ ವಿದ್ಯೆಯ ಬಲದಿಂದ ರಕ್ಷಿತನಾಗಿದ್ದೀಯೆ. ಆದ್ದರಿಂದ ಆ ರಾಜಕುಮಾರಿ ಕರ್ಪೂರಿಕೆಯನ್ನು ಸುಲಭವಾಗಿಯೇ ಪಡೆಯಲಿರುವೆ.'

೨೨೩. ನರವಾಹನದತ್ತನು ಇಷ್ಟನ್ನು ಸವಿಮಾತಿನ ಗೋಮುಖನ ಬಾಯಿಂದ ಕೇಳಿ ಆಯಾಸವನ್ನು ಅರಿಯದೆ ಮಾರ್ಗದಲ್ಲಿ ಆತನ ಜೊತೆಗೆ ಮುಂದೆ ನಡೆದನು.

---

ತತ್ರಾಭಿನಂದಿತಃ ಪಿತ್ರಾ ಮುಕ್ತಾಸೇನೇನ ಸನ್ಮತಿಃ ।
ಮಾತೃನೇತ್ರೋತ್ಸವೋ ಭ್ರಾತ್ರಾ ರೂಪಸೇನೇನ ಸಂಗತಃ ॥ ೨೧೮
ಉವಾಸ ಪದ್ಮಸೇನೋಽಸೌ ಭೂಯೋಽನಾವಿಷ್ಕೃತೇರ್ಷ್ಯಯಾ ।
ಆದಿತ್ಯಪ್ರಭಯಾ ಚಂದ್ರವತ್ಯಾ ಚ ಸಹ ನಿರ್ವೃತಃ ॥ ೨೧೯
ಇತ್ಯೇತಾಂ ಗೋಮುಖೋ ರಮ್ಯಾಂ ಕಥಯಿತ್ವಾ ಕಥಾಂ ಪಥಿ ।
ನರವಾಹನದತ್ತಂ ತಮುವಾಚ ಸಚಿವಃ ಪುನಃ ॥ ೨೨೦
ಇತ್ಥಂ ಸ್ಯಾನ್ಮಹತಾಮೇವ ಮಹಾಕ್ಲೇಶಸ್ತಥೋದಯಃ ।
ಅನ್ಯೇಷಾಂ ತು ಕಿಯಾನ್ ದೇವ ಕ್ಲೇಶೋವಾಪ್ಯುದಯೋಽಪಿವಾ ॥ ೨೨೧
ತ್ವಂ ತು ರತ್ನಪ್ರಭಾದೇವೀ ವಿದ್ಯಾಶಕ್ತ್ಯಾನುಪಾಲಿತಃ ।
ಕರ್ಪೂರಿಕಾಂ ರಾಜಸುತಾಮಕ್ಲೇಶಾತ್ತಾಮವಾಪ್ಸ್ಯಸಿ ॥ ೨೨೨
ಇತಿ ನರವಾಹನದತ್ತಃ ಶ್ರುತ್ವಾ ಸುಮುಖಸ್ಯ ಗೋಮುಖಸ್ಯ ಮುಖಾತ್ ।
ಪ್ರಾಕ್ರಾಮತ್ಪಥಿ ತಸ್ಮಿನ್ನಜ್ಞಾತಪರಿಶ್ರಮಃ ಸ ತತ್ಸಹಿತಃ ॥ ೨೨೩

೨೨೪. ಹೀಗೆಯೇ ಹೋಗುತ್ತಾ ಸಂಜೆಯ ವೇಳೆಗೆ ಕಮಲಗಳು ಅರಳಿ ನಿಂತಿದ್ದ ತಿಳಿಯಾದ ಸರೋವರವೊಂದನ್ನು ತಲುಪಿದನು. ಅಲ್ಲಿ ರಾಜಹಂಸಗಳು ಇಂಪಾಗಿ ಧ್ವನಿಗೈಯುತ್ತಿದ್ದವು. ಅದರ ಅಪಾರವಾದ ಜಲರಾಶಿಯು ಅಮೃತರಸದಂತೆ ತಂಪಾಗಿತ್ತು. ಅದರ ದಡದಲ್ಲಿ ಮಾವಿನ ಸಾಲು, ಹಲಸು, ದಾಳಿಂಬೆ ಮುಂತಾದವು ಕಂಗೊಳಿಸುತ್ತಿದ್ದವು.

೨೨೫. ಅದರಲ್ಲಿ ಸ್ನಾನ ಮಾಡಿ. ಪಾರ್ವತಿಯ ಪತಿಯನ್ನು ಭಕ್ತಿಯಿಂದ ಪೂಜಿಸಿ ಅಮೃತದಂತೆ ಸಿಹಿಯಾಗಿದ್ದ ಸುಗಂಧದಿಂದ ಕೂಡಿದ ಹಣ್ಣುಗಳ ಆಹಾರವನ್ನು ಸ್ವೀಕರಿಸಿ, ಮೆತ್ತನೆಯ ಚಿಗುರುಗಳನ್ನು ಹಾಸಿ ಮಾಡಿಕೊಂಡಿದ್ದ ಹಾಸಿಗೆಯಲ್ಲಿ ಆ ಸರೋವರದ ದಡದಲ್ಲಿ ನಿದ್ರಿಸಿ ವತ್ಸರಾಜನ ಮಗನು ಗೆಳೆಯ ಗೋಮುಖನೊಂದಿಗೆ ಅಂದಿನ ರಾತ್ರಿಯನ್ನು ಅಲ್ಲಿಯೇ ಕಳೆದನು.

ಮಹಾಕವಿ ಸೋಮದೇವಭಟ್ಟನು ರಚಿಸಿದ
ಕಥಾಸರಿತ್ಸಾಗರದ ರತ್ನಪ್ರಭಾಲಂಬಕದಲ್ಲಿ
ಎಂಟನೆಯ ತರಂಗವು ಮುಗಿಯಿತು.

---

ಗಚ್ಛಂಶ್ಚ ತತ್ರ ಕಲಕೂಜಿತರಾಜಹಂಸ–
ಮಚ್ಛಂ ಸುಧಾಸರಸಶೀತಲಭೂರಿವಾರಿ ।
ಆಮ್ರಾವಲೀಪನಸದಾಡಿಮರಮ್ಯರೋಧಃ
ಸಾಯಂ ಸರೋ ವಿಕಚವಾರಿಜಮಾಸಸಾದ ॥ ೨೨೪

ತಸ್ಮಿನ್ ಸ್ನಾತ್ವಾ ಹಿಮಗಿರಿಸುತಾಕಾಂತಮಭ್ಯರ್ಚ್ಯ ಭಕ್ತ್ಯಾ
ಕೃತ್ವಾಹಾರಂ ಸುರಭಿಮಧುರಾಸ್ವಾದಹೃದ್ಯೈಃ ಫಲೈಸ್ತೈಃ ।
ಸಖ್ಯಾ ಸಾರ್ಧಂ ಮೃದುಕಿಸಲಯಾಸ್ತೀರ್ಣಶಯ್ಯಾಪ್ರಸುಪ್ತ
ಸ್ತತ್ತೀರೇ ತಾಂ ರಜನಿಮನಯತ್ ಸೋಽತ್ರ ವತ್ಸೇಶಸೂನುಃ ॥ ೨೨೫

ಇತಿ ಮಹಾಕವಿ ಶ್ರೀ ಸೋಮದೇವಭಟ್ಟ ವಿರಚಿತೇ
ಕಥಾಸರಿತ್ಸಾಗರೇ
ರತ್ನಪ್ರಭಾಲಂಬಕೇ ಅಷ್ಟಮಸ್ತರಂಗಃ

---

# ಒಂಬತ್ತನೆಯ ತರಂಗ

೧ ಮಾರನೆಯ ದಿನ ಬೆಳಿಗ್ಗೆ ಆ ಸರೋವರದ ದಡದಿಂದ ಎದ್ದು ಪ್ರಯಾಣವನ್ನು ಮುಂದುವರೆಸಿದ ನರವಾಹನದತ್ತನು ಮಂತ್ರಿಯಾದ ಗೋಮುಖನಿಗೆ ಹೀಗೆ ಹೇಳಿದನು.

೨. ""ಗೆಳೆಯನೇ, ಇಂದು ಬೆಳಗಿನ ಝಾವ ಬಿಳಿಯ ಬಟ್ಟೆಯನ್ನುಟ್ಟಿದ್ದ ದಿವ್ಯರೂಪದ ಕನ್ಯೆಯೊಬ್ಬಳು ಕನಸಿನಲ್ಲಿ ನನ್ನ ಬಳಿ ಬಂದು ಹೀಗೆ ಹೇಳಿದಳು :

೩. 'ಮಗು, ನೀನು ನಿಶ್ಚಿಂತನಾಗಿರು. ಇಲ್ಲಿಂದ ಹೊರಡುವ ನೀನು ಸಮುದ್ರದ ದಡದ ಕಾಡಿನೊಳಗೆ ಅದ್ಭುತವಾಗಿರುವ ನಗರವೊಂದನ್ನು ಬೇಗನೆ ತಲುಪಲಿದ್ದೀಯೆ.

೪. ಅಲ್ಲಿ ವಿಶ್ರಮಿಸಿಕೊಂಡು ಶ್ರಮವಿಲ್ಲದೆಯೇ ಕರ್ಪೂರಸಂಭವ ನಗರವನ್ನು ತಲುಪಿ ಆ ಊರಿನಲ್ಲಿ ರಾಜಕುಮಾರಿಯಾದ ಕರ್ಪೂರಿಕೆಯನ್ನು ಪಡೆಯಲಿದ್ದೀಯೆ.'

೫ ಇಷ್ಟು ಹೇಳಿ ಅವಳು ಕಣ್ಮರೆಯಾದಳು. ನಾನು ಆ ಕೂಡಲೇ ಎಚ್ಚರಗೊಂಡೆ" ಎಂದು ಹೇಳಿದ ನರವಾಹನದತ್ತನಿಗೆ ಗೋಮುಖನು ಸಂತೋಷದಿಂದ ಹೇಳಿದನು.

---

# ನವಮಸ್ತರಂಗಃ

ತತಃ ಪ್ರಾತಃ ಸರಸ್ತೀರಾತ್ತಸ್ಮಾದುತ್ಥಾಯ ಮಂತ್ರಿಣಮ್ ।<br>
ನರವಾಹನದತ್ತಸ್ತಂ ಗೋಮುಖಂ ಪ್ರಸ್ಥಿತೋಽಬ್ರವೀತ್ ॥ ೧

ವಯಸ್ಯ ಜಾನೇ ಕಾಪ್ಯದ್ಯ ರಾತ್ರ್ಯಂತೇ ಧವಲಾಂಬರಾ ।<br>
ಕುಮಾರೀ ದಿವ್ಯರೂಪಾ ಮಾಮೇತ್ಯ ಸ್ವಪ್ನೇಽಭ್ಯಧಾದಿದಮ್ ॥ ೨

ನಿಶ್ಚಿಂತೋ ಭವ ವತ್ಸ ತ್ವಮಿತಃ ಶೀಘ್ರಮವಾಪ್ಸ್ಯಸಿ ।<br>
ಅಬ್ಧೇಸ್ತೀರೇ ವನಾಂತಃಸ್ಥಮಾಶ್ಚರ್ಯಂ ನಗರಂ ಮಹತ್ ॥ ೩

ವಿಶ್ರಾಂತಸ್ತತ್ರ ಚಾಕ್ಲೇಶಾತ್ಪ್ರಾಪ್ಯ ಕರ್ಪೂರಸಂಭವಮ್ ।<br>
ಪುರಂ ಕರ್ಪೂರಿಕಾಂ ಪ್ರಾಪ್ಸ್ಯಸ್ಯತ್ರ ತಾಂ ರಾಜಕನ್ಯಕಾಮ್ ॥ ೪

ಇತ್ಯುಕ್ತ್ವಾ ಮಾಂ ತಿರೋಽಭೂತ್ಸಾ ಪ್ರಬುದ್ಧಶ್ಚಾಸ್ಮಿ ತತ್ಕ್ಷಣಮ್ ।<br>
ಏವಂ ತಮುಕ್ತವಂತಂ ಚ ಪ್ರೀತಃ ಪ್ರೋವಾಚ ಗೋಮುಖಃ ॥ ೫

೬ "ಒಡೆಯನೇ, ನೀನು ದೇವತೆಗಳಿಂದ ಅನುಗೃಹೀತನಾಗಿರುವೆ. ನಿನಗೆ ಕಷ್ಟಕರವಾದದ್ದು ಯಾವುದಿದೆ ? ಆದುದರಿಂದ ನಿಶ್ಚಯವಾಗಿಯೂ ಸುಲಭವಾಗಿ ನಿನ್ನ ಇಷ್ಟಾರ್ಥವು ಕೈಗೂಡುವುದು.'

೭ ಹೀಗೆ ಗೋಮುಖನು ಉತ್ಸಾಹಪಡಿಸಲು ನರವಾಹನದತ್ತನು ಅಲ್ಲಿಂದ ಬೇಗಬೇಗನೆ ಆ ದಾರಿಯಲ್ಲಿ ಮುಂದೆ ಹೊರಟನು.

೮ ಕ್ರಮೇಣ ಸಮುದ್ರದ ದಡದ ಬಳಿಯಿದ್ದ ಒಂದು ನಗರವನ್ನು ಅವನು ತಲುಪಿದನು. ಅದರಲ್ಲಿ ಬೆಟ್ಟದ ಶಿಖರಗಳನ್ನು ಹೋಲುವ ಉಪ್ಪರಿಗೆ ಮನೆಗಳ ಸಾಲುಗಳೂ ರಾಜಮಾರ್ಗ ಹಾಗೂ ಗೋಪುರಗಳೂ ಇದ್ದವು.

೯. ಮೇರುಪರ್ವತವನ್ನು ಹೋಲುವ ಸಂಪೂರ್ಣವಾಗಿ ಬಂಗಾರದಿಂದಮಾಡಿದ ಅರಮನೆಯಿಂದ ಕಂಗೊಳಿಸುತ್ತಾ ವಿಸ್ತಾರವಾಗಿದ್ದ ಆ ನಗರವು ಇನ್ನೊಂದು ಭೂಮಂಡಲದಂತೆ ಕಾಣಿಸುತ್ತಿತ್ತು.

೧೦. ಅಂಗಡಿಯ ಸಾಲಿನ ಬೀದಿಯನ್ನು ಪ್ರವೇಶಿಸಿದಾಗ ಅಲ್ಲಿ ಎಲ್ಲವೂ ಜೀವಂತವಾಗಿರುವಂತೆ ವರ್ತಿಸುತ್ತಿದ್ದ ಮರದ ಯಂತ್ರಗಳೇ ಇದ್ದುವು.

೧೧. ಇಲ್ಲಿ ವ್ಯಾಪಾರಿಗಳು ಗಣಿಕೆಯರು ಪಟ್ಟಣಿಗರೆಲ್ಲರೂ ಇದ್ದು ವಿಸ್ಮಯವನ್ನುಂಟು ಮಾಡುತ್ತಿದ್ದು ಎಲ್ಲವೂ ಮಾತಿಲ್ಲದ ಕಾರಣ ನಿರ್ಜೀವವೆಂದು ತಿಳಿದು ಮುಂದುವರೆದನು.

---

ದೇವೈರನುಗೃಹೀತಸ್ತ್ವಂ ದೇವ ಕಿಂ ತೇಽಸ್ತಿದುಷ್ಕರಮ್ ।
ತನ್ನಿಶ್ಚಿತಮಕೃಚ್ಛ್ರೇಣ ತವ ಸೇತ್ಸ್ಯತ್ಯಭೀಪ್ಸಿತಮ್ ॥ ೬

ಏವಮುಕ್ತವತಾ ತೇನ ಗೋಮುಖೇನ ಸಮಂ ಪಥಿ ।
ನರವಾಹನದತ್ತೋಽತ್ರ ಸ ಪ್ರಾಯಾತ್ತ್ವರಸ್ತತಃ ॥ ೭

ಕ್ರಮಾತ್ ಪ್ರಾಪಚ್ಚ ಜಲಧೇರುಪಕಂಠಗತಂ ಸ ತತ್ ।
ಅದ್ರಿಕೂಟನಿಭಾಟ್ಟಾಲಪ್ರತೋಲೀಗೋಪುರಾನ್ವಿತಮ್ ॥ ೮

ಮೇರ್ವಾಭಸರ್ವಸೌವರ್ಣರಾಜಮಂದಿರರಾಜಿತಮ್ ।
ನಗರಂ ವಿಪುಲಾಭೋಗಂ ಭೂಮಂಡಲಮಿವಾಪರಮ್ ॥ ೯

ಪ್ರವಿಶ್ಯ ತತ್ರ ವಿಪಣೀಮಾರ್ಗೇಣ ಸ ದದರ್ಶ ಚ ।
ಕಾಷ್ಠಯಂತ್ರಮಯಂ ಸರ್ವಂ ಚೇಷ್ಟಮಾನಂ ಸಜೀವವತ್ ॥ ೧೦

ವಣಿಗ್ವಿಲಾಸಿನೀ ಪೌರಜನಂ ಜನಿತವಿಸ್ಮಯಮ್ ।
ವಿಜ್ಞಾಯಮಾನಂ ನಿರ್ಜೀವ ಇತಿ ವಾಗ್ವಿರಹಾತ್ಪರಮ್ ॥ ೧೧

೧೨-೧೩. ಅನಂತರ ಗೋಮುಖನ ಮಿತ್ರನಾದ ರಾಜಕುಮಾರನು ಅರಮನೆಯನ್ನು ಸಮೀಪಿಸಿ ಅಲ್ಲಿಯೂ ಅದೇ ರೀತಿಯ ಆನೆಕುದುರೆಗಳನ್ನು ನೋಡುತ್ತಾ ಸುವರ್ಣಪುರದ ಮೇಲ್ಭಾಗದಲ್ಲಿ ಕಂಗೊಳಿಸುತ್ತಿದ್ದ ರಾಜನ ಅರಮನೆಯೊಳಗೆ ಮಂತ್ರಿಯೊಂದಿಗೆ ವಿಸ್ಮಿತನಾಗಿ ಪ್ರವೇಶಿಸಿದನು.

೧೪-೧೫. ಅಲ್ಲಿ ಯಂತ್ರದ ದ್ವಾರಪಾಲಕ ಹಾಗೂ ಗಣಿಕಾಸ್ತ್ರೀಯರಿಂದ ಸುತ್ತುವರೆಯಲ್ಪಟ್ಟಿದ್ದ, ಜಡದ ಸ್ಪಂದನಕ್ಕೆ ಕಾರಣವಾಗಿದ್ದ ಅವರೆಲ್ಲರ ಚೇತನವಾದ ಇಂದ್ರಿಯಗಳಿಗೆ ಆತ್ಮವಿದ್ದಂತೆ ಅಧಿಷ್ಠಾತೃವಾಗಿ ರತ್ನಸಿಂಹಾಸನದಲ್ಲಿ ಕುಳಿತಿದ್ದ ವ್ಯಕ್ತಿಯನ್ನು ಕಂಡನು.

೧೬. ಸುಂದರ ರೂಪದ ರಾಜಕುಮಾರನನ್ನು ಕಂಡ ಅವನು ಎದ್ದು ಬಂದು ಸ್ವಾಗತವನ್ನು ಬಯಸಿ ತನ್ನ ಆಸನದಲ್ಲಿ ಕುಳ್ಳಿರಿಸಿದನು.

೧೭. ಅನಂತರ ನೀವು ಯಾರು, ಮನುಷ್ಯರೇ ಇಲ್ಲದ ಈ ನೆಲಕ್ಕೆ ಗೆಳೆಯನೊಂದಿಗೆ ಒಂದಾದರೂ ಹೇಗೆ, ಏಕೆ ಎಂದೆಲ್ಲ ಪ್ರಶ್ನೆ ಮಾಡಿದನು.

೧೮. ಆಗ ನರವಾಹನದತ್ತನು ತನ್ನ ಕಥೆಯನ್ನು ಸಂಪೂರ್ಣವಾಗಿ ಹೇಳಿ ಆ ವಿನೀತನಾಗಿದ್ದ ಪುರುಷನನ್ನು ಕೇಳಿದನು.

---

ಕ್ರಮಾಚ್ಚ ಗೋಮುಖಸಖಃ ಸೋಽಂತಿಕಂ ರಾಜವೇಶ್ಮನಃ ।
ಪ್ರಾಪ ತಾದೃಶಮೇವಾತ್ರ ಹಸ್ತ್ಯಶ್ವಾದಿ ವಿಲೋಕಯನ್ ॥ ೧೨
ವಿವೇಶ ಚಾಸ್ಯ ಸೌವರ್ಣಪುರಮಸ್ತಕಶೋಭಿನಃ ।
ಅಭ್ಯಂತರಂ ಸಸಚಿವಃ ಸಾಶ್ಚರ್ಯೋ ರಾಜಸದ್ಮನಃ ॥ ೧೩
ತತ್ರ ಯಂತ್ರಪ್ರತೀಹಾರವಾರನಾರೀಪರಿಶ್ರಿತಮ್ ।
ಜಡಾನಾಂ ಸ್ಪಂದನೇ ಹೇತುಂ ತೇಷಾಂ ಚೇತನಮೇಕಕಮ್ ॥ ೧೪
ಇಂದ್ರಿಯಾಣಾಮಿವಾತ್ಮಾನಮಧಿಷ್ಠಾತೃತಯಾ ಸ್ಥಿತಮ್ ।
ರತ್ನಸಿಂಹಾಸನಾಸೀನಂ ಭವ್ಯಂ ಪುರುಷಮೈಕ್ಷತ ॥ ೧೫
ಸೋಽಪಿ ತಂ ಪುರುಷೋ ದೃಷ್ಟ್ವಾ ಚೋತ್ತಮಾಕೃತಿಮುತ್ಥಿತಃ ।
ವಿಧಾಯ ಸ್ವಾಗತಂ ಸ್ವಸ್ಮಿನ್ನುಪಾವೇಶಯದಾಸನೇ ॥ ೧೬
ಪಪ್ರಚ್ಛ ಚೋಪವಿಷ್ಟಾಗ್ರೇ ಕಃ ಕಥಂ ಕಿಮಮಾನುಷಾಮ್ ।
ಕ್ಷ್ಮಾಮಾತ್ಮನಾ ದ್ವಿತೀಯಃಸನ್ ಇಮಾಂ ಪ್ರಾಪ್ತೋ ಭವಾನಿತಿ ॥ ೧೭
ತತಃ ಸೋಽಪಿ ಸ್ವವೃತ್ತಾಂತಂ ನಿವೇದ್ಯ ತಮಶೇಷತಃ ।
ನರವಾಹನದತ್ತಸ್ತಂ ಪ್ರಷ್ಟುಂ ಪಪ್ರಚ್ಛ ಪೂರುಷಮ್ ॥ ೧೮

೧೯. 'ನೀನು ಯಾರು ? ನಿನ್ನ ಈ ಆಶ್ಚರ್ಯಕರವಾದ ಪಟ್ಟಣ ಎಂತಹುದು, ಹೇಳು' ಎಂದು ಕೇಳಿದನು. ಅದನ್ನು ಕೇಳಿದ ಆ ಮನುಷ್ಯನು ತನ್ನ ಕಥೆಯನ್ನು ಹೇಳಲು ಪ್ರಾರಂಭಿಸಿದನು.

೨೦. 'ಕಾಂಚಿಯೆಂಬ ದೊಡ್ಡ ನಗರವೊಂದಿದೆ. ಅದು ಎಲ್ಲ ಗುಣಗಳಿಂದ ಸೊಗಸಾಗಿದ್ದು ಭೂದೇವಿಯೆಂಬ ವಧುವಿಗೆ ಒಡ್ಯಾಣದಂತೆ ಒಳ್ಳೆಯ ಅಲಂಕಾರವಾಗಿದೆ.

೨೧. ಅಲ್ಲಿ ಬಾಹುಬಲನೆಂದು ಪ್ರಸಿದ್ಧನಾದ ಮಹಾರಾಜನಿದ್ದಾನೆ. ಆತನು ಚಂಚಲ ಸ್ವಭಾವದವಳೇ ಆಗಿದ್ದರೂ ತನ್ನ ತೋಳಬಲದಿಂದ ಲಕ್ಷ್ಮಿಯನ್ನು ಗೆದ್ದು ಕೋಷದಲ್ಲಿ ಕಟ್ಟಿಹಾಕಿದ್ದಾನೆ

೨೨–೨೩. ಅವನ ರಾಷ್ಟ್ರದಲ್ಲಿ ನಾವಿಬ್ಬರೂ ಅಣ್ಣತಮ್ಮಂದಿರಾದ ಬಡಗಿಗಳು. ಮಯನು ಬರೆದಿರುವ ಮರ ಮುಂತಾದವುಗಳಿಂದ ಮಾಡಿದ ಮಾಯಾ ಯಂತ್ರಗಳ ಶಾಸ್ತ್ರದಲ್ಲಿ ನಿಪುಣರು. ಹಿರಿಯವನು ಪ್ರಾಣಧರ ಎಂಬುವನು. ಅವನು ವೇಶ್ಯಾ ದುಶ್ಚಟದಿಂದ ಹಾಳಾದನು. ನಾನು ಕಿರಿಯವನು. ಅವನ ಭಕ್ತ ನನ್ನ ಹೆಸರು ರಾಜ್ಯಧರ.

೨೪. ಅವನು ತಂದೆಯ ಆಸ್ತಿಯೆಲ್ಲವನ್ನೂ ಅನುಭವಿಸಿ ಸ್ನೇಹದಿಂದ ನಾನು ಕೊಟ್ಟ ನನ್ನ ಆಸ್ತಿಯನ್ನೂ ಅನುಭವಿಸಿದನು.

---

ಕಸ್ತ್ವಂ ಕಿಂ ಚೇದಮಾಶ್ಚರ್ಯಂ ಪುರಂ ತೇ ಭದ್ರ ಕಥ್ಯತಾಮ್ ।
ತತ್ಶ್ರುತ್ವಾ ಸ ಪುಮಾನ್ವಕ್ತುಂ ಸ್ವೋದಂತಮುಪಚಕ್ರಮೇ ॥ ೧೯

ಅಸ್ತಿ ಕಾಂಚೀತಿ ನಗರೀ ಗರೀಯೋಗುಣಗುಂಫಿತಾ ।
ಕಾಂಚೀವ ವಸುಧಾವಧ್ವಾಃ ಸದಲಂಕೃತಿತಾಂ ಗತಾ ॥ ೨೦

ತಸ್ಯಾಂ ಬಾಹುಬಲಾಖ್ಯೋಽಸ್ತಿ ಕಾಂಚ್ಯಾಂ ಖ್ಯಾತೋ ಮಹೀಪತಿಃ ।
ಕೋಷೇ ಬದ್ಧಾಕೃತಾ ಯೇನ ಚಲಾಪಿ ಶ್ರೀರ್ಭುಜಾರ್ಜಿತಾ ॥ ೨೧

ತಸ್ಯ ರಾಷ್ಟ್ರೇ ನೃಪಸ್ಯಾವಾಂ ತಕ್ಷಾಣೌ ಭ್ರಾತರಾವುಭೌ ।
ಮಯಪ್ರಣೀತದಾರ್ವಾದಿಮಾಯಾಯಂತ್ರವಿಚಕ್ಷಣೌ ॥ ೨೨

ಜ್ಯೇಷ್ಠಃ ಪ್ರಾಣಧರೋ ನಾಮ ವೇಶ್ಯಾವ್ಯಸನವಿಪ್ಲುತಃ ।
ಅಹಂ ಕನಿಷ್ಠಸ್ತದ್ಭಕ್ತೋ ನಾಮ್ನಾ ರಾಜ್ಯಧರಃ ಪ್ರಭೋ ॥ ೨೩

ತೇನ ಭುಕ್ತ್ವಾ ಧನಂ ಪಿತ್ರ್ಯಂ ಮದ್ಭರ್ತ್ರಾ ಸ್ವಂ ಚ ಕಿಂಚನ ।
ಭುಕ್ತಂ ಮದರ್ಜಿತಮಪಿ ಸ್ನೇಹಾರ್ದ್ರೇಣಾರ್ಪಿತಂ ಮಯಾ ॥ ೨೪

೨೫. ಆದರೂ ಅತಿಯಾದ ದುಶ್ಚಟದಿಂದ ಅವನು ವೇಶ್ಯೆಗೆ ಹಣ ನೀಡಲು ಹಣವನ್ನು ಕದಿಯುವ ಸಲುವಾಗಿ ರಜ್ಜು ಯಂತ್ರವನ್ನು ಹೊರುವ ಎರಡು ಮರದ ಹಂಸಗಳನ್ನು ನಿರ್ಮಾಣಮಾಡಿದನು.

೨೬–೨೭. ಹಗ್ಗವನ್ನು ಬಿಗಿಹಿಡಿದಾಗ ಹಾರುವ ಅವೆರಡು ಹಂಸಗಳೂ ರಾತ್ರಿಯಲ್ಲಿ ರಾಜ ಬಾಹುಬಲನ ಖಜಾನೆಯಿಂದ ಯಂತ್ರಪ್ರಯೋಗದಿಂದ ಕಿಟಕಿಯ ಮೂಲಕ ಒಳಕ್ಕೆ ಹೋಗಿ ಕೊಕ್ಕಿನಿಂದ ಭರಣಿಯಲ್ಲಿದ್ದ ಆಭರಣವನ್ನು ಎತ್ತಿಕೊಂಡು ಬಂದು ನನ್ನ ಅಣ್ಣನ ಮನೆಗೆ ಬರುತ್ತಿದ್ದವು .

೨೮. ಅದನ್ನು ಮಾರಿ ನನ್ನ ಹಿರಿಯನು ವೇಶ್ಯೆಯೊಂದಿಗೆ ಅನುಭವಿಸುತ್ತಿದ್ದನು. ಹಾಗೆ ಪ್ರತಿರಾತ್ರಿಯೂ ಹಗಲೂ ಅವನು ರಾಜನ ಖಜಾನೆಯನ್ನು ಕದಿಯತೊಡಗಿದನು.

೨೯. ನಾನು ಎಷ್ಟು ತಡೆದರೂ ಅವನು ಈ ಕೆಟ್ಟಕೆಲಸವನ್ನು ಬಿಡಲೇ ಇಲ್ಲ. ದುಶ್ಚಟಗಳಿಂದ ಕುರುಡಾದ ಯಾವನು ತಾನೇ ಸರಿ, ತಪ್ಪು ಮಾರ್ಗಗಳನ್ನು ವಿಮರ್ಶೆ ಮಾಡುತ್ತಾನೆ?

೩೦–೩೧. ಆ ರೀತಿ ರಾತ್ರಿಯಲ್ಲಿ ಚಿಲುಕವನ್ನು ಅಲುಗಾಡಿಸದೆಯೇ ಕಳ್ಳತನವಾಗುತ್ತಿರುವುದನ್ನು ಕೋಶರಕ್ಷಕರು ನೋಡಿ ಒಂದು ಇಲಿ ಕೂಡ ಓಡಾಡದ ರಾಜಬೀದಿಯಲ್ಲಿ ಕೆಲವು ದಿನ ಹುಡುಕಾಟವನ್ನು ಮಾಡಿ ಏನೂ ಪತ್ತೆಯಾಗದೆ ಬಹಳ ನೊಂದುಕೊಂಡು ರಾಜನ ಬಳಿ ಹೋಗಿ ಎಲ್ಲವನ್ನೂ ಸ್ಪಷ್ಟವಾಗಿ ನಿವೇದಿಸಿದರು.

---

ತತೋऽಪಿ ಸೋऽತಿವ್ಯಸನೀ ವೇಶ್ಯಾರ್ಥಾರ್ಥಜಿಹೀರ್ಷಯಾ ।
ರಜ್ಜುಯಂತ್ರವಹಂ ದಾರುಮಯಂ ಹಂಸಯುಗಂ ವ್ಯಧಾತ್ ॥ ೨೫
ತದ್ಧಂಸಯುಗಲಂ ರಜ್ಜುಘಟ್ಟನಪ್ರೇರಿತಂ ನಿಶಿ ।
ರಾಜ್ಞೋ ಬಾಹುಬಲಸ್ಯಾತ್ರ ಕೋಶಾದ್ಯಂತ್ರಪ್ರಯೋಗತಃ ॥ ೨೬
ಗವಾಕ್ಷೇಣ ಪ್ರವಿಶ್ಯಾಂತಶ್ಚಂಚ್ವಾ ಪಟಲಕೇ ಸ್ಥಿತಮ್ ।
ಆದಾಯಾಭರಣಂ ತಸ್ಯ ಯದ್ಭ್ರಾತುರ್ಗೃಹಮಾಗಮತ್ ॥ ೨೭
ತಚ್ಚ ವಿಕ್ರೀಯ ಸೋऽಭುಂಕ್ತ ಮಜ್ಜ್ಯೇಷ್ಠಃ ಸಹ ವೇಶ್ಯಯಾ ।
ತಥೈವಾಹರ್ನಿಶಂ ಕೋಷಮಮುಷ್ಣಾತ್ಸ ಚ ಭೂಪತೇಃ ॥ ೨೮
ವಾರ್ಯಮಾಣೋऽಪಿ ಚ ಮಯಾ ನಾಕಾರ್ಯಾದ್ವ್ಯರಮತ್ತತಃ ।
ಕೋ ಹಿ ಮಾರ್ಗಮಮಾರ್ಗಂ ವಾ ವ್ಯಸನಾಂಧೋ ನಿರೀಕ್ಷತೇ ॥ ೨೯
ತಥಾ ಚ ಮುಷ್ಯಮಾಣೇऽಪಿ ರಾತ್ರಿಷ್ವಚಲಿತಾರ್ಗಲೇ ।
ನಿರ್ಮೂಷಕೇ ರಾಜಗಂಜೇ ದಿನಾನಿ ಕತಿಚಿದ್ ಭಯಾತ್ ॥ ೩೦
ವಿಚಿನ್ವನ್ ಪ್ರತ್ಯಹಂ ತೂಷ್ಣೀಂ ಪರಿತಪ್ತೋऽಧಿಕಾಧಿಕಮ್ ।
ತದ್ಭಾಂಡಾಗಾರಿಕೋ ಗತ್ವಾ ಸ್ಫುಟಂ ರಾಜ್ಞೇ ನ್ಯವೇದಯತ್ ॥ ೩೧

೩೨. ರಾಜನು ಅವನನ್ನೂ ಇನ್ನಷ್ಟು ರಕ್ಷಕರನ್ನೂ ಖಜಾನೆಯಲ್ಲಿ ಇರಿಸಿ ರಾತ್ರಿ ಎಚ್ಚರವಾಗಿದ್ದು ಅಲ್ಲಿನ ಸತ್ಯ ಸಂಗತಿಯನ್ನರಿಯಲು ಹೇಳಿದನು.

೩೩. ರಾತ್ರಿವೇಳೆಯಲ್ಲಿ ನನ್ನ ಸೋದರನು ಹಗ್ಗದಿಂದ ನಡೆಸುತ್ತಿದ್ದ ಎರಡು ಹಂಸಗಳು ಕಿಟಕಿಯ ಮೂಲಕ ಒಳಬಂದುದನ್ನು ಅವರು ನೋಡಿದರು.

೩೪. ಯಂತ್ರಯುಕ್ತಿಯಿಂದ ನಡೆಸಲಾಗುತ್ತಿದ್ದ ಎರಡು ಹಂಸಗಳು ಆಭರಣಗಳನ್ನು ಕಚ್ಚಿಕೊಂಡಾಗ ಅವುಗಳ ಹಗ್ಗವನ್ನು ಕತ್ತರಿಸಿ ಎರಡನ್ನೂ ರಾಜನಿಗೆ ಬೆಳಿಗ್ಗೆ ತೋರಿಸಲು ಹಿಡಿದುಕೊಂಡರು.

೩೫ ಆ ಕೂಡಲೇ ನನ್ನ ಅಣ್ಣನು ಗಾಬರಿಗೊಂಡು ನನಗೆಂದನು. "ತಮ್ಮಾ, ನನ್ನ ಎರಡು ಹಂಸಗಳನ್ನೂ ಖಜಾನೆ ರಕ್ಷಕರು ಸೆರೆಹಿಡಿದಿದ್ದಾರೆ.

೩೬ ಹಗ್ಗವು ಸಡಿಲಗೊಂಡಿದೆ. ಯಂತ್ರದ ಕೀಲಿಕೈ ಸಿಕ್ಕಿಕೊಂಡಿದೆ. ಆದ್ದರಿಂದ ಈಗಲೇ ನಾವಿಬ್ಬರೂ ಇಲ್ಲಿಂದ ಓಡಿಹೋಗಲೇಬೇಕು.

೩೭ ಬೆಳಿಗೆ ರಾಜನು ನಾವಿಬ್ಬರೂ ಕಳ್ಳರೆಂದು ತಿಳಿದು ನಮ್ಮನ್ನು ಬಂಧಿಸುತ್ತಾನೆ. ಏಕೆಂದರೆ ಮಾಯಾಯಂತ್ರಗಳನ್ನು ತಿಳಿದಿರುವವರೆಂದು ನಾವಿಬ್ಬರು ಮಾತ್ರ ಪ್ರಸಿದ್ಧರಾಗಿದ್ದೇವೆ.

೩೮. ಒಮ್ಮೆ ಕೀಲಿಕೊಟ್ಟರೆ ವೇಗದಿಂದ ಎಂಟು ನೂರು ಯೋಜನದೂರ ಹೋಗುವ ವಾಯುಯಂತ್ರದ ವಿಮಾನವು ಈಗ ನನ್ನ ಬಳಿ ಇದೆ.

---

ರಾಜಾಪಿ ತಂ ತಥಾನ್ಯಾಂಶ್ಚ ರಕ್ಷಕಾನ್ ಜಾಗ್ರತೋ ನಿಶಿ ।
ಕೋಷಾಂತಃ ಸ್ಥಾಪಯಾಮಾಸ ತತ್ರ ತತ್ತ್ವಮವೇಕ್ಷಿತುಮ್ ॥ ೩೨
ತೇ ನಿಶೀಥೇ ಪ್ರವಿಷ್ಟೌ ತೌ ಗವಾಕ್ಷೇಣಾತ್ರ ರಕ್ಷಕಾಃ ।
ಮದ್ಭ್ರಾತೃಯಂತ್ರಹಂಸೌ ದ್ವಾವಪಶ್ಯನ್ ರಜ್ಜುಘಟ್ಟಿತೌ ॥ ೩೩
ಯಂತ್ರಯುಕ್ತಿಪರಿಭ್ರಾಂತೌ ಚಂಚೂಪಾತ್ತವಿಭೂಷಣೌ ।
ಛಿನ್ನರಜ್ಜೂ ಅಗೃಹ್ಣಂಶ್ಚ ರಾಜ್ಞೇ ದರ್ಶಯಿತುಂ ಪ್ರಗೇ ॥ ೩೪
ತತ್ಕಾಲಂ ಚ ಸ ಮದ್ಭ್ರಾತಾ ಜ್ಯೇಷ್ಠೋಽವಾದೀತ್ಸಸಂಭ್ರಮಃ ।
ಭ್ರಾತರ್ಗೃಹೀತೌ ಹಂಸೌ ದ್ವೌ ಮದೀಯೌ ಗಂಜರಕ್ಷಿಭಿಃ ॥ ೩೫
ರಜ್ಜುರ್ಹಿ ಶಿಥಿಲೀಭೂತೌ ಯಂತ್ರೇ ಪ್ರಸ್ತಾ ಚ ಕೀಲಿಕಾ ।
ತಸ್ಮಾದಿತೋಽಪಸರ್ತವ್ಯಮಧುನೈವಾವಯೋರ್ದ್ವಯೋಃ ॥ ೩೬
ಚೌರಾವಿತಿ ನಿಗೃಹ್ಣೀಯಾತ್ ಪ್ರಾತರ್ಬುದ್ಧ್ವಾ ನೃಪೋ ಹಿ ನೌ ।
ಆವಾಮೇವ ಹಿ ವಿಖ್ಯಾತೌ ಮಾಯಾಯಂತ್ರವಿದಾವುಭೌ ॥ ೩೭
ವಾತಯಂತ್ರವಿಮಾನಂ ಚ ತನ್ಮಮಾಸ್ತೀಹ ಮಂಕ್ಷು ಯತ್ ।
ಯೋಜನಾಷ್ಟಶತೀ ಯಾತಿ ಸಕೃತ್ಪ್ರಹತಕೀಲಿಕಮ್ ॥ ೩೮

೩೯. ಆದ್ದರಿಂದ ದುಃಖಕರವಾಗಿದ್ದರೂ ದೂರದ ಬೇರೆ ದೇಶಕ್ಕೆ ಈಗ ಹೋಗಿಬಿಡೋಣ. ಕೆಟ್ಟಕೆಲಸಮಾಡುತ್ತಿದ್ದಾಗ ಒಳ್ಳೆಯ ಮಾತನ್ನು ತಿರಸ್ಕರಿಸಿದವನಿಗೆ ಸುಖವೆಲ್ಲಿದ್ದೀತು ?

೪೦. ಪಾಪಬುದ್ಧಿಯ ನಾನು ನಿನ್ನ ಮಾತನ್ನು ನಡೆಸಲಿಲ್ಲ. ಅದರ ಪರಿಣಾಮವು ತಪ್ಪುಮಾಡದ ನಿನ್ನ ಮೇಲೂ ಉಂಟಾಯಿತು.'

೪೧. ಹೀಗೆ ಹೇಳಿ ನನ್ನ ಅಣ್ಣ ಪ್ರಾಣಧರನು ಕುಟುಂಬ ಸಹಿತನಾಗಿ ಆಗಲೇ ಆಕಾಶದಲ್ಲಿ ಹೋಗುವ ವಿಮಾನವನ್ನೇರಿದನು.

೪೨. ಅವನು ಎಷ್ಟು ಹೇಳಿದರೂ ಬಹುಜನರಿಂದ ತುಂಬಿದ್ದ ಅದನ್ನು ನಾನು ಹತ್ತಲಿಲ್ಲ. ಆಮೇಲೆ ಅವನು ಅದರಲ್ಲಿ ಆಕಾಶವನ್ನೇರಿ ಎಲ್ಲೋ ದೂರಕ್ಕೆ ಹೊರಟು ಹೋದನು.

೪೩–೪೪. ಅನ್ವರ್ಥಕವಾದ ಹೆಸರಿನ ಪ್ರಾಣಧರನು ಹೋದ ಮೇಲೆ ನಾನು ಬೆಳಿಗ್ಗೆ ರಾಜನಿಂದ ಉಂಟಾಗಲಿರುವ ಅಪಾಯವನ್ನು ಊಹಿಸಿಕೊಂಡು ನಾನೇ ನಿರ್ಮಾಣಮಾಡಿದ್ದ ಇನ್ನೊಂದು ವಾಯುಯಂತ್ರ ವಿಮಾನವೊಂದರಲ್ಲಿ ಒಬ್ಬನೇ ಅಲ್ಲಿಂದ ಬೇಗನೆ ಹೊರಟು ಎರಡು ನೂರು ಯೋಜನಗಳಷ್ಟು ದೂರ ಹೋದೆನು.

೪೫. ಮತ್ತೆ ಆಕಾಶದಲ್ಲಿ ಹೋಗುವ ಆ ವಿಮಾನವನ್ನು ನಡೆಸಿ ಅಲ್ಲಿಂದ ಇನ್ನೂ ಇನ್ನೂರು ಯೋಜನ ದೂರ ಹೋದೆನು.

---

ತೇನ ದೂರಂ ವ್ರಜಾವೋಽದ್ಯ ವಿದೇಶಮಪಿ ದುಃಖದಮ್ ।
ಪಾಪೇ ಕರ್ಮಣ್ಯವಜ್ಞಾತಹಿತವಾಕ್ಯೇ ಕುತಃ ಸುಖಮ್ ॥ ೩೯
ಯನ್ಮಯಾ ನ ಕೃತಂ ವಾಕ್ಯಂ ತವ ದುಷ್ಕೃತಬುದ್ಧಿನಾ ।
ತಸ್ಯೈಷ ಪಾಕಃ ಪ್ರಸೃತೋ ಯೋಽಯಂ ತ್ವಯ್ಯಪ್ಯಪಾಪಿನಿ ॥ ೪೦
ಏವಮುಕ್ತ್ವಾ ಸಮಾರೋಹದ್ವಿಮಾನಂ ವ್ಯೋಮಗಾಮಿ ತತ್ ।
ಸ ಮೇ ಪ್ರಾಣಧರೋ ಭ್ರಾತಾ ತದೈವ ಸಕುಟುಂಬಕಃ ॥ ೪೧
ಅಹಂ ತೂಕ್ತೋಽಪಿ ತೇನಾತ್ರ ನಾರೋಹಂ ಬಹುಭಿರ್ವೃತೇ ।
ತತಸ್ತೇನ ಖಮುತ್ಪತ್ಯ ಸ ಪ್ರಾಯಾತ್ ಕ್ವಾಪಿ ದೂರತಃ ॥ ೪೨
ಗತೇ ಪ್ರಾಣಧರೇ ತಸ್ಮಿನ್ನಹಮನ್ವರ್ಥನಾಮನಿ ।
ಪ್ರಭಾತೇ ಭಾವಿ ಸಂಭಾವ್ಯ ರಾಜತೋ ಭಯಮೇಕಕಃ ॥ ೪೩
ಆರುಹ್ಯ ಸ್ವಕೃತೇಽನ್ಯಸ್ಮಿನ್ ವಾತಯಂತ್ರವಿಮಾನಕೇ ।
ದ್ರುತಂ ತತೋ ಗತೋಽಭೂವಂ ಯೋಜನಾನಾಂ ಶತದ್ವಯಮ್ ॥ ೪೪
ಪ್ರೇರಿತೇನ ಪುನಸ್ತೇನ ವಿಮಾನೇನ ಖಗಾಮಿನಾ ।
ತತೋಽಪಿ ಯೋಜನಶತದ್ವಯಮನ್ಯದಗಾಮಹಮ್ ॥ ೪೫

೪೬. ಆಗ ಸಮುದ್ರಕ್ಕೆ ಹತ್ತಿರವಾಗಿರಬಹುದೆಂಬ ಶಂಕೆಯಿಂದ ವಿಮಾನವನ್ನು ಬಿಟ್ಟು ಕಾಲುನಡಿಗೆಯಲ್ಲಿ ಬಂದು ಕ್ರಮೇಣ ಈ ಊರನ್ನು ತಲುಪಿದೆನು.

೪೭. ವಸ್ತ್ರ, ಆಭರಣ, ಶಯನ ಮುಂತಾದ ರಾಜ ಭೋಗಗಳಿಂದ ಕೂಡಿರುವ ಈ ಅರಮನೆಯಲ್ಲಿ ಕುತೂಹಲದಿಂದ ಪ್ರವೇಶಿಸಿದೆನು.

೪೮. ಸಂಜೆ ಉದ್ಯಾನದ ಕೊಳದ ನೀರಿನಲ್ಲಿ ಸ್ನಾನಮಾಡಿ ಹಣ್ಣುಗಳನ್ನು ತಿಂದು ರಾಜಶಯ್ಯೆಯಲ್ಲಿ ರಾತ್ರಿ ಮಲಗಿದ ನಾನು ಒಬ್ಬನೇ ಚಿಂತಿಸಿದೆನು.

೪೯. ನಿರ್ಜನವಾದ ಈ ಊರಿನಲ್ಲಿ ನಾನೇನು ಮಾಡಲಿ ? ಆದ್ದರಿಂದ ಬೆಳಿಗ್ಗೆ ಇಲ್ಲಿಂದ ಎಲ್ಲಿಯಾದರೂ ಹೊರಟು ಹೋಗುತ್ತೇನೆ. ಬಾಹುಬಲ ರಾಜನ ಭಯವಂತೂ ಈಗ ಹೊರಟು ಹೋಗಿದೆ.

೫೦. ಹೀಗೆ ಯೋಚಿಸಿ ಮಲಗಿದ್ದ ನನಗೆ ಬೆಳಗಿನ ಝಾವ, ದಿವ್ಯರೂಪವನ್ನು ಧರಿಸಿದ್ದ ನವಿಲನ್ನೇರಿದ್ದ ಮನುಷ್ಯನೊಬ್ಬನು ಸ್ವಪ್ನದಲ್ಲಿ ಹೀಗೆ ಹೇಳಿದನು.

೫೧. "ಅಯ್ಯಾ, ನೀನು ಇಲ್ಲಿಯೇ ಇರಬೇಕು. ಬೇರೆ ಎಲ್ಲಿಯೂ ಹೋಗಬಾರದು. ಊಟದ ಸಮಯದಲ್ಲಿ ಮಧ್ಯಮಪುರವನ್ನೇರಿ ಅಲ್ಲೇ ಇರಬೇಕು.'

೫೨. ಹೀಗೆಂದು ಹೇಳಿ ಅವನು ಅಂತರ್ಧಾನನಾಗಲು ಎಚ್ಚರಗೊಂಡ ನಾನು ಅಂದುಕೊಂಡೆನು. ಇದು ನಿಶ್ಚಯವಾಗಿಯೂ ಷಣ್ಮುಖನು ನಿರ್ಮಿಸಿದ ದಿವ್ಯಸ್ಥಾನ.

---

ತತಃ ಸಮುದ್ರನೈಕಟ್ಯಶಂಕಾತ್ತ್ಯಕ್ತವಿಮಾನಕಃ ।
ಪದ್ಭ್ಯಾಂ ವ್ರಜನ್ನಿಹ ಪ್ರಾಪ್ತಃ ಶೂನ್ಯಂ ಪುರಮಿದಂ ಕ್ರಮಾತ್ ॥ ೪೬

ಕೌತುಕಾಚ್ಚ ಪ್ರವಿಷ್ಟೋಽಹಂ ದೇವೇದಂ ರಾಜಮಂದಿರಮ್ ।
ವಸ್ತ್ರಾಭರಣಶಯ್ಯಾದಿರಾಜೋಪಕರಣಾನ್ವಿತಮ್ ॥ ೪೭

ಸಾಯಂ ಚೋದ್ಯಾನವಾಪ್ಯಂಭಃಸ್ನಾತೋ ಭುಕ್ತ್ವಾ ಫಲಾನ್ಯಹಮ್ ।
ರಾಜಶಯ್ಯಾಗತೋ ರಾತ್ರಾವೇಕಾಕೀ ಸಮಚಿಂತಯಮ್ ॥ ೪೮

ನಿರ್ಜನೇ ಕಿಂ ಕರೋಮೀಹ ತತ್ಪ್ರಾತರ್ಯಾತ್ರ ಕುತ್ರಚಿತ್ ।
ವ್ರಜಾಮೀತೋ ಗತಂ ಮೇ ಹಿ ಭಯಂ ಬಾಹುಬಲಾನ್ನೃಪಾತ್ ॥ ೪೯

ಇತಿ ಸಂಚಿಂತ್ಯ ಸಂಸುಪ್ತಂ ನಿಶಾಂತೇ ದಿವ್ಯರೂಪಧೃತ್ ।
ಪುರುಷೋ ಬರ್ಹಿಣಾರೂಢಃ ಸ್ವಪ್ನೇ ಮಾಮೇವಮಭ್ಯಧಾತ್ ॥ ೫೦

ಇಹೈವ ಭದ್ರ ವಸ್ತವ್ಯಂ ಗಂತವ್ಯಂ ನಾನ್ಯತಸ್ತ್ವಯಾ ।
ಆಹಾರಕಾಲೇ ಚಾರುಹ್ಯ ಸ್ಥಾತವ್ಯಂ ಮಧ್ಯಮೇ ಪುರೇ ॥ ೫೧

ಇತ್ಯುಕ್ತ್ವಾಂತರ್ಹಿತೇ ತಸ್ಮಿನ್ ಪ್ರಬುದ್ಧೋಽಹಮಚಿಂತಯಮ್ ।
ಕುಮಾರನಿರ್ಮಿತಮಿದಂ ದಿವ್ಯಸ್ಥಾನಂ ಸುನಿಶ್ಚಿತಮ್ ॥ ೫೨

೫೩. ನನ್ನ ಪೂರ್ವಜನ್ಮದ ಪುಣ್ಯದಿಂದಾಗಿ ಅವನು ಕನಸಿನಲ್ಲಿ ಅನುಗ್ರಹಮಾಡಿದ್ದಾನೆ. ಈಗ ಎಚ್ಚರಗೊಂಡಿರುವ ನಾನು ಇಲ್ಲಿಯೇ ವಾಸವಾಗಿದ್ದರೆ ಒಳ್ಳೆಯದಾಗುವುದು ಖಂಡಿತ

೫೪–೫೫. ಹೀಗೆ ನಂಬಿಕೆಇಟ್ಟುಕೊಂಡು ಎದ್ದು ಅಹ್ನಿಕ ಮಾಡಿ ಊಟದ ಸಮಯದಲ್ಲಿ ಈ ಮಧ್ಯಮಪುರದಲ್ಲಿ ನಾನು ಹತ್ತಿ ಕುಳಿತಿದ್ದಾಗ ಚಿನ್ನದ ಪಾತ್ರೆಗಳಲ್ಲಿ ತುಂಬಿದ್ದ ಸವಿಯಾದ ತುಪ್ಪ ಹಾಲು ಶಾಲ್ಯನ್ನ ಮುಂತಾದವನ್ನೊಳಗೊಂಡ ಊಟವು ಆಕಾಶದಿಂದ ನನ್ನ ಮುಂದೆ ಬಂದು ಬಿದ್ದಿತು.

೫೬. ನಾನು ಬೇರೆ ಏನೇನು ಅಪೇಕ್ಷಿಸಿದೆನೋ ಅದೆಲ್ಲವೂ ನನಗೆ ದೊರಕಿತು. ಅದನ್ನೇ ತಿಂದು ನಾನು ನಿಶ್ಚಿಂತನಾದೆನು.

೫೭. ಒಡೆಯನೇ, ಪ್ರತಿದಿನ ಬಯಸಿದಂತೆಲ್ಲ ಒದಗುತ್ತಿದ್ದ ರಾಜಭೋಗದಿಂದ ಈ ಊರಿನಲ್ಲಿಯೇ ವಾಸ್ತವ್ಯ ಹೂಡಿಬಿಟ್ಟೆನು.

೫೮. ಹೆಂಡತಿ ಅಥವಾ ಪರಿವಾರದವರು ನಾನು ಅಪೇಕ್ಷೆಪಟ್ಟರೂ ಇಲ್ಲಿ ಇರುವುದಿಲ್ಲ. ಆದ್ದರಿಂದ ನಾನು ಯಂತ್ರ ಮಯವಾದ ಜನರನ್ನು ನಿರ್ಮಿಸಿದೆನು.

---

ಕೃತಶ್ಚ ತೇನ ಮೇ ಸ್ವಪ್ನೇ ಪೂರ್ವಪುಣ್ಯೈರನುಗ್ರಹಃ ।
ಉತ್ಥಿತೋಽಸ್ಮೀಹ ನೂನಂ ಹಿ ಶ್ರೇಯೋಽಸ್ತಿ ವಸತೋಽತ್ರ ಮೇ ॥ ೫೩

ಇತಿ ಬದ್ಧಾಸ್ಥಮುತ್ಥಾಯ ಕೃತ್ವಾಹ್ನಿಕಮಹಂ ಸ್ಥಿತಃ ।
ಆರುಹ್ಯ ಯಾವದಾಹಾರಕಾಲೇಽಸ್ಮಿನ್ ಮಧ್ಯಮೇ ಪುರೇ ॥ ೫೪

ತಾವದ್ಧಿರಣ್ಮಯೇಷ್ವಗ್ರೇ ಪಾತ್ರೇಷೂಪನತೇಷು ಮೇ ।
ಅಪತತ್ ಖಾತ್ ಘೃತಕ್ಷೀರಶಾಲಿಭಕ್ತಾದಿಭೋಜನಮ್ ॥ ೫೫

ಚಿಂತಿತಂ ಚಿಂತಿತಂ ಚಾನ್ಯನ್ಮಮ ಭೋಜ್ಯಮುಪಾನಮತ್ ।
ತದ್ ಭುಕ್ತ್ವಾ ಚಾಹಮಭವಂ ದೇವಾತೀವೇಹ ನಿರ್ವೃತಃ ॥ ೫೬

ತತೋ ಗೃಹೀತ್ವೈವ ಮಯಾ ಸ್ಥಿತಿರಸ್ಮಿನ್ ಪುರೇ ಪ್ರಭೋ ।
ಚಿಂತಿತೋಪನಮದ್ರಾಜಭೋಗೇನ ಪ್ರತಿವಾಸರಮ್ ॥ ೫೭

ಭಾರ್ಯಾ ಪರಿಚ್ಛದೋ ವಾ ಮೇ ಚಿಂತಿತಸ್ತು ನ ತಿಷ್ಠತಿ ।
ತೇನ ಯಂತ್ರಮಯೋಽತ್ರಾಯಂ ಜನಃ ಸರ್ವಃ ಕೃತೋ ಮಯಾ ॥ ೫೮

೫೯–೬೦. ಹೀಗೆ ಇಲ್ಲಿ ವಿಧಿವಶದಿಂದ ಬಡಗಿಯಾದರೂ ನಾನು ಬಂದು ಒಂಟಿಯಾಗಿ ರಾಜ್ಯಧರನೆಂಬ ರಾಜನಾಗಿ ನನ್ನ ವಿನೋದಕ್ಕೆಂದು ಎಲ್ಲವನ್ನೂ ಮಾಡುತ್ತೇನೆ. ಆದ್ದರಿಂದ ದೇವನಿರ್ಮಿತವಾದ ಈ ಊರಿನಲ್ಲಿ ಇಂದು ತಾವು ವಿಶ್ರಮಿಸಿಕೊಳ್ಳಿರಿ. ನಾನು ಯಥಾಶಕ್ತಿ ತಮ್ಮ ಸೇವೆಗೈಯುತ್ತೇನೆ.'

೬೧. ಹೀಗೆ ಹೇಳಿ ಆ ರಾಜ್ಯಧರನು ನರವಾಹನದತ್ತ ಮತ್ತು ಗೋಮುಖರನ್ನು ಆ ಊರಿನ ಉದ್ಯಾನಕ್ಕೆ ಕರೆದೊಯ್ದನು.

೬೨. ಅಲ್ಲಿ ಅವರು ಕೊಳದ ನೀರಿನಲ್ಲಿ ಮಿಂದು ಕಮಲಗಳಿಂದ ಶಿವನನ್ನು ಪೂಜಿಸಿದ ಮೇಲೆ ಅರಮನೆಯ ಮಧ್ಯದ ಊಟದ ಜಾಗಕ್ಕೆ ಅವರನ್ನು ಕೊಂಡೊಯ್ದನು.

೬೩. ಅಲ್ಲಿ ರಾಜ್ಯಧರನು ಮುಂದೆ ಕುಳಿತಿರಲು ಮಂತ್ರಿ ಗೋಮುಖನೊಂದಿಗೆ ನರವಾಹನದತ್ತನು ಚಿಂತಿಸಿದ ಕೂಡಲೇ ಒದಗಿಬರುತ್ತಿದ್ದ ಉತ್ತಮ ಆಹಾರವನ್ನು ತಿಂದನು.

೬೪. ಆಮೇಲೆ ಕಣ್ಣಿಗೆ ಕಾಣಿಸದ ಯಾರೋ ಒಬ್ಬಾತನು ಊಟ ಮಾಡಿದ ನೆಲವನ್ನು ಒರೆಸಿದ ಮೇಲೆ ತಾಂಬೂಲವನ್ನು ಚರ್ವಣ ಮಾಡಿ ಮಧುವನ್ನು ಕುಡಿದು ಸುಖಿಸಿದನು.

---

ಇತೀಹಾಗತ್ಯ ತಕ್ಷಾಪಿ ದೇವೈಕಾಕೀ ಕರೋಮ್ಯಹಮ್ ।
ರಾಜ್ಞೋ ಲೀಲಾಯಿತುಂ ರಾಜ್ಯಧರೋ ನಾಮ ವಿಧೇರ್ವಶಾತ್ ॥ ೫೯
ತದ್ದೇವನಿರ್ಮಿತೇಽಮುಷ್ಮಿನ್ ಭವಂತೋಽದ್ಯ ಪುರೇ ದಿನಮ್ ।
ವಿಶ್ರಾಮ್ಯಂತು ಯಥಾಶಕ್ತಿ ಪರಿಚರ್ಯಾಪರೇ ಮಯಿ ॥ ೬೦
ಇತ್ಯುಕ್ತ್ವಾ ತತ್ಪುರೋದ್ಯಾನಂ ತೇನ ರಾಜ್ಯಧರೇಣ ಸಃ ।
ನರವಾಹನದತ್ತೋಽತ್ರ ನೀಯತೇ ಸ್ಮ ಸಗೋಮುಖಃ ॥ ೬೧
ತತ್ರ ವಾಪೀಜಲಸ್ನಾತೋ ವಾರಿಜಾರ್ಚಿತಧೂರ್ಜಟಿಃ ।
ತಾಂ ಮಧ್ಯಮಪುರಾಹಾರಭೂಮಿಂ ಚ ಪ್ರಾಪಿತೋಽಭವತ್ ॥ ೬೨
ಬುಭುಜೇ ತತ್ರ ಚಾಹಾರಾನ್ ಧ್ಯಾತೋಪಸ್ಥಾಪಿತಾನ್ ಶುಭಾನ್ ।
ತೇನ ರಾಜ್ಯಧರೇಣಾಗ್ರಸ್ಥಿತೇನ ಸ ಸಮಂತ್ರಿಕಃ ॥ ೬೩
ತತಃ ಕೇನಾಪ್ಯದೃಷ್ಟೇನ ಪ್ರಮೃಷ್ಟಾಹಾರಭೂಮಿಕಃ ।
ಅನುತಾಂಬೂಲಭೋಗಂ ಸ ತಸ್ಥೌ ಪೀತಾಸವಃ ಸುಖಮ್ ॥ ೬೪

೬೫. ಚಿಂತಾಮಣಿಯಂತೆ ಪ್ರಸಿದ್ಧವಾದ ಊರಿನ ಮಹಿಮೆಗೆ ಆಶ್ಚರ್ಯಪಡುತ್ತಾ ರಾತ್ರಿ ರಾಜ್ಯಧರನು ಊಟಮಾಡಿದ ಮೇಲೆ, ಉತ್ತಮವಾದ ಹಾಸಿಗೆಯಲ್ಲಿ ಮಲಗಿದನು.

೬೬. ಕರ್ಪೂರಿಕೆಯನ್ನು ಕಾಣಬೇಕೆಂದು ಹೊಸ ಕಾತರತೆಯಿಂದ ನಿದ್ರೆ ಬಾರದಿದ್ದ ನರವಾಹನದತ್ತನ ಕಥೆಯನ್ನು ಕೇಳುತ್ತಿದ್ದ ರಾಜ್ಯಧರನು ಹಾಸಿಗೆಯಲ್ಲಿದ್ದೇ ಅವನಿಗೆಂದನು:

೬೭. "ನೀನು ನಿದ್ರೆ ಮಾಡುತ್ತಿಲ್ಲವೇಕೆ ? ನಿನಗೆ ಇಷ್ಟವಾಗಿರುವ ಪ್ರಿಯತಮೆಯನ್ನು ಪಡೆದೇ ಪಡೆಯುವೆ. ಉದಾರಸತ್ತ್ವನನ್ನು ಲಕ್ಷ್ಮಿಯು ಆಶ್ರಯಿಸುವಂತೆ ಸುಂದರಿಯು ತಾನೇ ವರಿಸುತ್ತಾಳೆ.

೬೮–೬೯. ಇದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಆ ಕಥೆಯನ್ನು ಹೇಳುತ್ತೇನೆ ಕೇಳು : ನಾನು ಹೇಳಿದ ಬಾಹುಬಲನೆಂಬ ಕಾಂಚಿಯ ರಾಜನಿಗೆ ಅನ್ವರ್ಥವಾದ ಹೆಸರಿನ ಅರ್ಥಲೋಭ ಎಂಬ ಹೆಸರಿನ ಸಿರಿವಂತ ದ್ವಾರಪಾಲಕನಿದ್ದನು. ಅವನಿಗೆ ರೂಪವತಿಯಾದ ಮಾನಪರೆಯೆಂಬ ಮಡದಿಯಿದ್ದಳು.

೭೦. ವೈಶ್ಯವೃತ್ತಿಯ ಆ ಅರ್ಥಲೋಭನು ದುರಾಸೆಯವನಾದ ಕಾರಣ ಸೇವಕರಾರನ್ನೂ ನಂಬದೇ ವ್ಯಾಪಾರ ವ್ಯವಹಾರಗಳಲ್ಲಿ ತನ್ನ ಹೆಂಡತಿಯನ್ನೇ ನೇಮಿಸಿದನು.

---

ಅಥ ಚಿಂತಾಮಣಿಪ್ರಖ್ಯಪುರಮಾಹಾತ್ಮ್ಯವಿಸ್ಮಿತಃ ।
ಭುಕ್ತೇ ರಾಜ್ಯಧರೇ ನಕ್ತಂ ಸ ಭೇಜೇ ಶಯನೋತ್ತಮಮ್ ॥ ೬೫

ಕರ್ಪೂರಿಕಾ ನವೌತ್ಸುಕ್ಯವಿನಿದ್ರಂ ಚಾತ್ರ ತತ್ಕಥಾಮ್ ।
ಪೃಚ್ಛಂತಮಬ್ರವೀದ್ ರಾಜ್ಯಧರೋಽಥ ಶಯನಸ್ಥಿತಃ ॥ ೬೬

ಕಿಂ ನ ನಿದ್ರಾಸಿ ಕಲ್ಯಾಣಿನ್ ಪ್ರಾಪ್ಸ್ಯಸ್ಯೇವೇಪ್ಸಿತಾಂ ಪ್ರಿಯಾಮ್ ।
ಉದಾರಸತ್ತ್ವಂ ವೃಣುತೇ ಸ್ವಯಂ ಹಿ ಶ್ರೀರಿವಾಂಗನಾ ॥ ೬೭

ಪ್ರತ್ಯಕ್ಷದೃಷ್ಟಮತ್ರೇದಂ ತಥಾ ಚ ಶೃಣು ವಚ್ಮಿ ತೇ ।
ಯಃ ಸ ಕಾಂಚೀಪತಿರ್ಬಾಹುಬಲೋ ರಾಜಾ ಮಯೋದಿತಃ ॥ ೬೮

ತಸ್ಯಾನ್ವರ್ಥೋಽರ್ಥಲೋಭಾಖ್ಯಃ ಪ್ರತೀಹಾರೋಽರ್ಥವಾನಭೂತ್ ।
ತಸ್ಯ ಮಾನಪರಾ ನಾಮ ಭಾರ್ಯಾಭೂದ್ರೂಪಶಾಲಿನೀ ॥ ೬೯

ಸೋಽರ್ಥಲಾಭೋ ವಣಿಗ್ಧರ್ಮಾಲ್ಲೋಭಾದ್ ಭೃತ್ಯೇಷ್ವವಿಶ್ವಸನ್ ।
ವಣಿಜ್ಯಾವ್ಯವಹಾರೇಷು ಮಧ್ಯೇ ಭಾರ್ಯಾಂ ನ್ಯಯುಂಕ್ತ ತಾಮ್ ॥ ೭೦

೨೧. ಅವಳು ಅದನ್ನು ಇಷ್ಟಪಡದೇ ಇದ್ದರೂ, ಅವನ ಅಧೀನಳಾಗಿದ್ದರಿಂದ, ತನ್ನ ಮಧುರವಾದ ರೂಪದಿಂದಲೂ ಮಾತಿನಿಂದಲೂ ಜನರನ್ನು ಆಕರ್ಷಿಸುತ್ತಾ ವೈಶ್ಯರೊಂದಿಗೆ ವ್ಯವಹಾರ ನಡೆಸುತ್ತಿದ್ದಳು.

೨೨. ಆನೆ ಕುದುರೆ ರತ್ನ ಬಟ್ಟೆ ಮೊದಲಾಗಿ ಅವಳು ಮಾರಾಟ ಮಾಡುತ್ತಿದ್ದವುಗಳೆಲ್ಲವೂ ಅಭಿವೃದ್ಧಿಯಾಗಿ ಹೆಚ್ಚುತ್ತಿರುವುದನ್ನು ನೋಡಿ ಅರ್ಥಲೋಭನು ಅವಳ ವ್ಯವಹಾರವನ್ನು ಅನುಮೋದಿಸಿದನು.

೨೩. ಒಮ್ಮೆ ದೂರದ ದೇಶವೊಂದರಿಂದ ಸುಖಧನನೆಂಬ ದೊಡ್ಡ ವ್ಯಾಪಾರಿಯೊಬ್ಬನು ಅಲ್ಲಿಗೆ ಬಂದನು. ಅವನಲ್ಲಿ ಕುದುರೆ ಮುಂತಾಗಿ ಬಹಳ ಮಾರಾಟದ ವಸ್ತುಗಳು ಇದ್ದವು.

೨೪. ಅವನು ಬಂದುದನ್ನು ತಿಳಿಯುತ್ತಲೇ ಅರ್ಥಲೋಭನು ಹೆಂಡತಿಗೆ ಹೇಳಿದನು : ಸುಖಧನನೆಂಬ ವ್ಯಾಪಾರಿಯು ಬೇರೆ ದೇಶವೊಂದರಿಂದ ಇಲ್ಲಿಗೆ ಬಂದಿದ್ದಾನೆ.

೨೫. ಪ್ರಿಯೆ, ಆತನು ಇಪ್ಪತ್ತು ಸಾವಿರ ಕುದುರೆಗಳನ್ನೂ ಮತ್ತು ಚೀನಾ ದೇಶದಲ್ಲಿ ತಯಾರಾದ ಅಸಂಖ್ಯಾತ ಬಟ್ಟೆಜೋತೆಗಳನ್ನು ತಂದಿದ್ದಾನೆ.

೨೬. ಆದ್ದರಿಂದ ನೀನು ಹೋಗಿ ಐದು ಸಾವಿರ ಕುದುರೆಗಳನ್ನೂ ಮತ್ತು ಹತ್ತು ಸಾವಿರ ಒಳ್ಳೆಯ ಬಟ್ಟೆ ಜೊತೆಗಳನ್ನೂ ಅವನಿಂದ ಕೊಂಡು ತಾ.

---

ಸಾನಿಚ್ಛಂತ್ಯಪಿ ತದ್ವಶ್ಯಾ ವಣಿಗ್ಭಿಃ ಸಂವ್ಯವಾಹರತ್ ।
ಮಧುರೇಣಾಹೃತಜನಾ ರೂಪೇಣ ವಚನೇನ ಚ ॥ ೨೧

ಗಜಾಶ್ವರತ್ನವಸ್ತ್ರಾದಿವಿಕ್ರಯಂ ಯಂ ವ್ಯಧತ್ತ ಸಾ ।
ತಂ ತಂ ಸೋಪಚಯಂ ದೃಷ್ಟ್ವಾ ಸೋಽರ್ಥಲೋಭೋಽನ್ವಮೋದತ ॥ ೨೨

ಏಕದಾ ಚಾತ್ರ ಕೋಽಪ್ಯಾಗಾತ್ ದೂರಾದ್ದೇಶಾಂತರಾದ್ವಣಿಕ್ ।
ಮಹಾನ್ ಸುಖಧನೋ ನಾಮ ಪ್ರಭೂತಾಶ್ವಾದಿಭಾಂಡಭೃತ್ ॥ ೨೩

ತಂ ಬುದ್ಧ್ವೈವಾಗತಂ ಭಾರ್ಯಾಮರ್ಥಲೋಭೋಽಬ್ರವೀತ್ಸ ತಾಮ್ ।
ವಣಿಕ್ಸುಖಧನೋ ನಾಮ ಪ್ರಾಪ್ತೋ ದೇಶಾಂತರಾದಿಹ ॥ ೨೪

ಪ್ರಿಯೇ ವಾಜಿಸಹಸ್ರಾಣಿ ತೇನಾನೀತಾನಿ ವಿಂಶತಿಃ ।
ಚೀನದೇಶಜಸದ್ವಸ್ತ್ರಯುಗ್ಮಾನ್ಯಗಣನಾನಿ ಚ ॥ ೨೫

ತದ್ಗತ್ವಾಶ್ವಸಹಸ್ರಾಣಿ ಪಂಚ ತಸ್ಮಾತ್ ತ್ವಮಾನಯ ।
ಕ್ರೀತ್ವಾ ಸದ್ವಸ್ತ್ರಯುಗ್ಮಾನಾಂ ಸಹಸ್ರಾಣಿ ತಥಾ ದಶ ॥ ೨೬

೭೭. ನಾನು ನನ್ನ ಒಂದು ಸಾವಿರ ಮತ್ತು ಆತನ ಐದು ಸಾವಿರ ಕುದುರೆಗಳೊಂದಿಗೆ ರಾಜನನ್ನು ಕಂಡು ವ್ಯಾಪಾರ ಮಾಡುತ್ತೇನೆ.'

೭೮. ಹೀಗೆ ಹೇಳಿ ಆ ಪಾಪಿ ಅರ್ಥಲೋಭನು ಹೆಂಡತಿಯನ್ನು ಕಳಿಸಿಕೊಟ್ಟನು. ಆ ಮಾನಪರೆಯು ಸುಖಧನನ ಸನಿಹಕ್ಕೆ ಹೋದಳು.

೭೯. ಆಕೆಯ ರೂಪದಿಂದ ಆಕರ್ಷಿತವಾದ ಸುಖಧನನು ಅವಳಿಗೆ ಸ್ವಾಗತ ಬಯಸಿದನು. ಅವಳು ಅವನ ಬಳಿ ಬಟ್ಟೆ ಮತ್ತು ಕುದುರೆಗಳನ್ನು ಕೊಳ್ಳಲು ಹಣದೊಂದಿಗೆ ಆಯ್ಕೆ ಮಾಡತೊಡಗಿದಳು.

೮೦. ಕಾಮಪರವಶನಾದ ಆ ವ್ಯಾಪಾರಿಯು ಅವಳನ್ನು ಕರೆದೊಯ್ದು ಏಕಾಂತದಲ್ಲಿ ಹೀಗೆಂದನು. "ಒಂದು ಬಟ್ಟೆಯನ್ನಾಗಲಿ ಅಥವಾ ಕುದುರೆಯನ್ನಾಗಲಿ ನಾನು ನಿನಗೆ ಹಣಕ್ಕೆ ನೀಡುವುದಿಲ್ಲ.

೮೧. ನನ್ನೊಂದಿಗೆ ಒಂದೇ ರಾತ್ರಿ ಕಾಲ ಕಳೆಯುವಿಯಾದರೆ ನೂರು ಕುದುರೆಗಳನ್ನೂ ಐದು ಸಾವಿರ ಬಟ್ಟೆಗಳನ್ನೂ ನಿನಗೆ ಕೊಡುತ್ತೇನೆ.'

೮೨. ಇಷ್ಟು ಹೇಳಿ ಇನ್ನೂ ಹೆಚ್ಚು ಕೊಡುವೆನೆಂದು ಆ ಸುಂದರಿಯನ್ನು ಬೇಡಿದನು. ಅಡೆತಡೆಯಿಲ್ಲದ ಓಡಾಡುವ ಹೆಂಗಸರ ಬಗ್ಗೆ ಯಾರಿಗೆ ತಾನೇ ಬಯಕೆ ಹುಟ್ಟುವುದಿಲ್ಲ ?

---

ಯಾವದಶ್ವಸಹಸ್ರೈ ಸ್ವೈಸ್ತಥಾ ತ್ರೈಶ್ಚಾಪಿ ಪಂಚಭಿಃ ।
ಕರೋಮಿ ದರ್ಶನಂ ರಾಜ್ಞೋ ವಣಿಜ್ಯಾಂ ವಿದಧಾಮಿ ಚ ॥ ೭೭

ಏವಮುಕ್ತ್ವಾರ್ಥಲೋಭೇನ ಪ್ರೇಷಿತಾ ತೇನ ಪಾಪ್ಮನಾ ।
ಆಗಾನ್ಮಾನಪರಾ ತಸ್ಯ ಪಾರ್ಶ್ವಂ ಸುಖಧನಸ್ಯ ಸಾ ॥ ೭೮

ಮಾರ್ಗತಿ ಸ್ಮ ಚ ಮೂಲ್ಯೇನ ತಾನ್‌ವಸ್ತ್ರಸಹಿತಾನ್ ಹಯಾನ್ ।
ರಚಿತಸ್ವಾಗತಾತ್ತಸ್ಮಾತ್ತದ್ರೂಪಾಹೃತಚಕ್ಷುಷಃ ॥ ೭೯

ಸ ಚ ತಾಂ ಕಾಮವಿವಶೋ ನೀತ್ವೈಕಾಂತೇಽಬ್ರವೀದ್ವಣಿಕ್ ।
ಮೂಲ್ಯೇನ ವಸ್ತ್ರಮೇಕಂ ತೇ ಹಯಂ ವಾ ನ ದದಾಮ್ಯಹಮ್ ॥ ೮೦

ವತ್ಸ್ಯೇಕಾಂ ನಿಶಾಂ ಸಾಕಂ ಮಯಾ ಚೇತ್ತದ್ದದಾಮಿ ತೇ ।
ಶತಾನಿ ವಾಜಿನಾಂ ಪಂಚಸಹಸ್ರಾಣಿ ಚ ವಾಸಸಾಮ್ ॥ ೮೧

ಇತ್ಯುಕ್ತ್ವಾ ಸೋಽಧಿಕೇನಾಪಿ ತಾಂ ಪ್ರಾರ್ಥಯತ ಸುಂದರೀಮ್ ।
ಸ್ತ್ರೀಷ್ವನರ್ಗಲಚೇಷ್ಟಾಸು ಕಸ್ಯೇಚ್ಛಾ ನೋಪಜಾಯತೇ ॥ ೮೨

೮೩. ಆಗ ಅವಳು ಅವನಿಗೆ ಹೇಳಿದಳು. "ನನ್ನ ಗಂಡನನ್ನು ಇದರ ಬಗ್ಗೆ ಕೇಳುತ್ತೇನೆ. ಅವನು ಅತಿ ದುರಾಸೆಯ ಕಾರಣ ನನ್ನನ್ನು ಇದಕ್ಕೂ ಪ್ರೇರಿಸುತ್ತಾನೆಂದು ಗೊತ್ತು.'

೮೪. ಇಷ್ಟು ಹೇಳಿ ಅವಳು ತನ್ನ ಮನೆಗೆ ಹೋಗಿ ಗಂಡನಿಗೆ ಆ ವ್ಯಾಪಾರಿ ಸುಖಧನನು ಗುಟ್ಟಾಗಿ ಹೇಳಿದ್ದನ್ನೆಲ್ಲ ತಿಳಿಸಿದಳು.

೮೫–೮೬. ಆಗ ಆ ಪಾಪಿಷ್ಠ ರಾಕ್ಷಸ, ಪತಿ ಅರ್ಥಲೋಭನು ಅವಳಿಗೆಂದನು. "ಪ್ರಿಯಳೇ ಐದು ಸಾವಿರ ಬಟ್ಟೆಗಳೂ ಒಂದು ನೂರು ಕುದುರೆಗಳೂ ಒಂದೇ ರಾತ್ರಿಯಿಂದ ದೊರಕುವುದಾದರೆ ಇದರಲ್ಲಿ ತಪ್ಪೇನಿದೆ ? ಆದ್ದರಿಂದ ಈಗ ಅವನ ಬಳಿಗೆ ಹೋಗು. ಬೆಳಿಗ್ಗೆ ಬೇಗನೆ ಬರುವಿಯಂತೆ.'

೮೭. ಆ ದುಷ್ಟಗಂಡನ ಈ ಮಾತನ್ನು ಕೇಳಿ ಮಾನಪರೆಯ ಮನದಲ್ಲಿ ಜಿಜ್ಞಾಸೆಯುಂಟಾಗಿ ಹೀಗೆ ಚಿಂತಿಸಿದಳು.

೮೮. ಹೆಂಡತಿಯನ್ನೇ ಮಾರುವವನೂ, ಪಾಪಿಯೂ ಸತ್ವವಿಲ್ಲದವನೂ ಮತ್ತು ಲೋಭದ ಭಾವನೆಯಿಂದ ದಿನವೂ ಹಣದಲ್ಲಿಯೇ ಮುಳುಗಿರುವವನೂ ಆದ ಈತನಿಗೆ ಧಿಕ್ಕಾರವಿರಲಿ.

೮೯. ನೂರು ಕುದುರೆ ಮತ್ತು ಚೀನಾದ ಸಾವಿರ ರೇಷ್ಮೆ ಬಟ್ಟೆಗಳಿಂದ ಒಂದು ರಾತ್ರಿಗೆ ನನ್ನನ್ನು ಕೊಳ್ಳುತ್ತಿರುವ ಆ ಉದಾರಬುದ್ಧಿಯ ವ್ಯಾಪಾರಿಯೇ ನನಗೆ ಗಂಡನಾಗಿರುವುದು ಲೇಸು.

---

ತತಃ ಸಾ ಪ್ರತ್ಯವೋಚತ್ತಮೇವಂ ಪೃಚ್ಛಾಮ್ಯಹಂ ಪತಿಮ್ ।
ಅತ್ರಾಪಿ ಹಿ ಸ ಜಾನೇ ಮಾಂ ಪ್ರೇರಯೇದತಿಲೋಭತಃ ॥ ೮೩

ಇತ್ಯುಕ್ತ್ವಾ ಸ್ವಗೃಹಂ ಗತ್ವಾ ಪತ್ಯೇ ತಸ್ಮೈ ತದಬ್ರವೀತ್ ।
ಯದುಕ್ತಾ ತೇನ ವಣಿಜಾ ರಹಃ ಸುಖಧನೇನ ಸಾ ॥ ೮೪

ಸೋಽಥ ಪಾಪೋಽರ್ಥಲೋಭಸ್ತಾಂ ಕೀನಾಶಃ ಪತಿರಬ್ರವೀತ್ ।
ಪ್ರಿಯೇ ವಸ್ತ್ರಸಹಸ್ರಾಣಿ ಪಂಚ ವಾಜಿಶತಾನಿ ಚ ॥ ೮೫

ಏಕಯಾ ಯದಿಲಭ್ಯಂತೇ ರಾತ್ರ್ಯಾದೋಷಸ್ತದತ್ರ ಕಃ ।
ತದ್ಗಚ್ಛ ಪಾರ್ಶ್ವಂ ತಸ್ಯಾದ್ಯ ಪ್ರಭಾತೇ ದ್ರುತಮೇಷ್ಯಸಿ ॥ ೮೬

ಏತಚ್ಛ್ರುತ್ವಾ ವಚಸ್ತಸ್ಯ ಭರ್ತುಃ ಕಾಪುರುಷಸ್ಯ ಸಾ ।
ಹೃದಿ ಮಾನಪರಾ ಜಾತವಿಚಿಕಿತ್ಸಾ ವ್ಯಚಿಂತಯತ್ ॥ ೮೭

ದಾರವಿಕ್ರಯಿಣಂ ಪಾಪಂ ಹೀನಸತ್ತ್ವಂ ಧಿಗಸ್ತ್ವಿಮಮ್ ।
ಲೋಭಭಾವನಯಾ ನಿತ್ಯಂ ಬತ ತನ್ಮಯತಾಂ ಗತಮ್ ॥ ೮೮

ವರಂ ಸ ಏವ ಭರ್ತಾ ಮೇ ಯೋ ಮಾಮಶ್ವಶತೈರ್ನಿಶಾಮ್ ।
ಚೀನಪಟ್ಟಸಹಸ್ರೈಶ್ಚ ಕ್ರೀಣಾತ್ಯೇಕಮುದಾರಧೀಃ ॥ ೮೯

೯೦. ಹೀಗೆ ಚಿಂತಿಸಿ ನನ್ನದೇನೂ ತಪ್ಪಿಲ್ಲ ಎಂದುಕೊಂಡು ತನ್ನ ಕೆಟ್ಟ ಗಂಡನ ಅನುಮತಿ ಪಡೆದ ಅವಳು ಸುಖಧನನ ಮನೆಗೆ ಹೋದಳು.

೯೧. ಅವನು ಅವಳು ಬಂದುದನ್ನು ಕಂಡು ಅವಳನ್ನು ಕೇಳಿ ವಿಷಯ ತಿಳಿದು ಆಕೆಯ ಪ್ರಾಪ್ತಿಯನ್ನು ಆಶ್ಚರ್ಯವೆಂದು ಬಗೆದು ತಾನೇ ಧನ್ಯನೆಂದು ಭಾವಿಸಿಕೊಂಡನು.

೯೨. ಆಕೆಯ ಗಂಡನಾದ ಅರ್ಥಲೋಭನಿಗೆ ಒಂದು ದಿನದ ಶುಲ್ಕವೆಂದು ಮಾತಿಗೆ ಅನುಸಾರವಾಗಿ, ಕುದುರೆ, ಬಟ್ಟೆಗಳನ್ನು ತತ್‌ಕ್ಷಣವೇ ಕಳುಹಿಸಿಕೊಟ್ಟನು.

೯೩. ಆತನು ಚಿರಕಾಲದ ಅನಂತರ ದೊರೆತ ತನ್ನ ಸಂಪತ್ತಿನ ಫಲ ರೂಪದ ಲಕ್ಷ್ಮಿಯೆಂಬಂತಿದ್ದ ಅವಳೊಂದಿಗೆ ಅಂದಿನ ರಾತ್ರಿಯನ್ನು ಸಂತೃಪ್ತಿಯಿಂದ ಕಳೆದನು.

೯೪. ಬೆಳಿಗ್ಗೆ ಷಂಡ ಗಂಡನಾದ ಅರ್ಥಲೋಭನು ನಾಚಿಕೆಗೆಟ್ಟು ಅವಳನ್ನು ಮನೆಗೆ ಕರೆಯಲು ಕಳುಹಿಸಿದ್ದ ಸೇವಕರಿಗೆ ಮಾನಪರೆಯು ಹೇಳಿದಳು.

೯೫. "ಗಂಡನೇ ನನ್ನನ್ನು ಮಾರಿದ ಮೇಲೆ ಬೇರೆಯವನೊಂದಿಗೆ ಕೂಡಿದ ನಾನು, ಆ ನಾಚಿಕೆಗೆಟ್ಟವನ ಹೆಂಡತಿ ಮತ್ತೆ ಹೇಗಾಗಲಿ ?

೯೬. ನೀವೇ ಹೇಳಿರಿ, ನಾನು ಈಗ ಹಾಗೆ ಮಾಡುವುದು ಚೆನ್ನಾಗಿರುವುದೇ ? ಆದ್ದರಿಂದ ಹೊರಡಿರಿ. ನನ್ನನ್ನು ಯಾರು ಕೊಂಡುಕೊಂಡನೋ ಅವನೇ ನನ್ನ ಗಂಡ.'

---

ಇತ್ಯಾಲೋಚ್ಯ ನ ಮೇ ದೋಷ ಇತ್ಯನುಜ್ಞಾಪ್ಯ ತಂ ತತಃ ।
ಕುಭರ್ತಾರಮಗಾತ್ತಸ್ಯ ಗೃಹಂ ಸುಖಧನಸ್ಯ ಸಾ ॥ ೯೦

ಸ ಚ ತಾಮಾಗತಾಂ ದೃಷ್ಟ್ವಾ ಪೃಷ್ಟ್ವಾ ಬುದ್ಧ್ವಾ ಚ ತತ್ತಥಾ ।
ಚಿತ್ರೀಯಮಾಣಸ್ತತ್ ಪ್ರಾಪ್ತೇರಮಂಸ್ತಾತ್ಮನಿ ಧನ್ಯತಾಮ್ ॥ ೯೧

ಪ್ರಾಹಿಣೋಚ್ಚಾರ್ಥಲೋಭಾಯ ತಸ್ಮೈ ತತ್ಪತಯೇ ದ್ರುತಮ್ ।
ತಚ್ಛುಲ್ಕಭೂತಾನಶ್ವಾಂಶ್ಚ ವಸ್ತ್ರಾಣಿ ಚ ಯಥೋದಿತಮ್ ॥ ೯೨

ಉವಾಸ ಚ ತಯಾ ಸಾಕಂ ಪೂರ್ಣಕಾಮಃ ಸ ತಾಂ ನಿಶಾಮ್ ।
ಮೂರ್ತಯೇವ ಚಿರಪ್ರಾಪ್ತನಿಜಸಂಪತ್ಫಲಶ್ರಿಯಾ ॥ ೯೩

ಪ್ರಾತಶ್ಚಾಹ್ವಾಯಕಾನ್ ಭೃತ್ಯಾನರ್ಥಲೋಭೇನ ನಿಸ್ತ್ರಪಮ್ ।
ಕ್ಲೀಬೇನ ತೇನ ಪ್ರಹಿತಾನ್ ಸಾಥ ಮಾನಪರಾಬ್ರವೀತ್ ॥ ೯೪

ವಿಕ್ರೀತಾ ಸಂಗತಾನ್ಯೇನ ಭೂತ್ವಾ ತಸ್ಯ ಕಥಂ ಪುನಃ ।
ಭಾರ್ಯಾ ಭವಾಮಿ ನಿರ್ಲಜ್ಜಃ ಸ ಯಥಾ ಕಿಮಹಂ ತಥಾ ॥ ೯೫

ಯೂಯಮೇವ ಮಮ ಬ್ರೂತ ಯದ್ಯೇತತ್ ಶೋಭತೇಽಧುನಾ ।
ತದ್ಯಾತ ಯೇನ ಕ್ರೀತಾಸ್ಮಿ ಸ ಏವ ಹಿ ಪತಿರ್ಮಮ ॥ ೯೬

೯೭. ಅವಳು ಹಾಗೆ ಹೇಳಲು ಅಲ್ಲಿಂದ ಹೊರಟು ಬಂದ ಸೇವಕರು ತಲೆತಗ್ಗಿಸಿಕೊಂಡು ನಿಂತು ಅರ್ಥಲೋಭನಿಗೆ ಆಕೆಯ ಮಾತುಗಳನ್ನು ಹಾಗೆಯೇ ಹೇಳಿದರು.

೯೮. ಅದನ್ನು ಕೇಳಿ ಆ ಅಧಮನು ಒತ್ತಾಯದಿಂದ ಅವಳನ್ನು ಕರೆತರಲು ಬಯಸಿದನು. ಆಗ ಹರಬಲನೆಂಬ ಸ್ನೇಹಿತನೊಬ್ಬನು ಅವನಿಗೆಂದನು.

೯೯. "ಆ ಸುಖಧನನಿಂದ ಅವಳನ್ನು ಕರೆತರಲು ನಿನಗೆ ಸಾಧ್ಯವಿಲ್ಲ. ವೀರಶ್ರೇಷ್ಠನಾದ ಅವನೊಡನೆ ಹೋರಾಡುವ ಶೌರ್ಯ ನಿನಗೆ ಉಂಟೆಂದು ನನಗೆ ಅನ್ನಿಸುವುದಿಲ್ಲ.

೧೦೦. ತ್ಯಾಗವನ್ನು ಪ್ರೀತಿಸಿದ ನಿನ್ನ ಮಡದಿಯು ಅವನನ್ನು ಶೂರನನ್ನಾಗಿಸಿದ್ದಾಳೆ. ಅಲ್ಲದೆ ಬಲಶಾಲಿಯಾದ ಅವನು ಬಲಿಷ್ಠರಾದ ಅನೇಕ ಗೆಳೆಯರೊಂದಿಗೆ ಬಂದಿದ್ದಾನೆ.

೧೦೧. ನೀನಾದರೋ ಜಿಪುಣತನದಿಂದ ಹೆಂಡತಿಯನ್ನು ಮಾರಿದವನು. ವಿವೇಕಿಯಾದ ಅವಳು ನಿನ್ನನ್ನು ತ್ಯಜಿಸಿದ್ದಾಳೆ. ಅವಮಾನದಿಂದ ನಿನಗೆ ಉತ್ಸಾಹವಿಲ್ಲವಾಗಿದೆ. ನಿಂದಿತನಾದ ನೀನು ನಪುಂಸಕನಾಗಿದ್ದೀಯೆ.

೧೦೨. ನಿನಗೆ ಸ್ವತಃ ಅಷ್ಟೊಂದು ಶಕ್ತಿಯಿಲ್ಲ. ನಿನಗೆ ಸಹಾಯಮಾಡಲು ಗೆಳೆಯರೂ ಇಲ್ಲ. ಹೀಗಿರುವಾಗ ಆ ಶತ್ರುವಿನ ವಿರುದ್ಧ ಗೆಲುವನ್ನು ಹೇಗೆ ಸಾಧಿಸಬಲ್ಲೆ ?

೧೦೩. ಹೆಂಡತಿಯನ್ನೇ ಮಾರಿರುವ ಪಾಪವನ್ನು ತಿಳಿದರೆ ರಾಜನು ಕುಪಿತನಾಗುತ್ತಾನೆ. ಆದ್ದರಿಂದ ಸುಮ್ಮನೆ ಇರು. ಮತ್ತೆ ಹಾಸ್ಯಕ್ಕೆ ಈಡಾಗಬೇಡ.'

---

ಇತ್ಯುಕ್ತಾಸ್ತೇ ತಯಾ ಭೃತ್ಯಾಸ್ತತೋ ಗತ್ವಾ ತಥೈವ ತತ್ ।
ಅಬ್ರುವನ್ನರ್ಥಲೋಭಾಯ ವಾಕ್ಯಂ ತಸ್ಯಾ ಅಧೋಮುಖಾಃ ॥ ೯೭

ಸ ತತ್ ಶ್ರುತ್ವಾ ಬಲಾದ್ಯೈಚ್ಛದಾನೇತುಂ ತಾಂ ನರಾಧಮಃ ।
ತತೋ ಹರಬಲೋ ನಾಮ ವಯಸ್ಯಸ್ತಮಭಾಷತ ॥ ೯೮

ನ ಸಾ ಸುಖಧನಾತ್ತಸ್ಮಾದಾನೇತುಂ ಶಕ್ಯತೇ ತ್ವಯಾ ।
ಪ್ರವೀರಸ್ಯ ನ ತಸ್ಯಾಗ್ರೇ ತವ ಪಶ್ಯಾಮಿ ಧೀರತಾಮ್ ॥ ೯೯

ಸಾ ಹಿ ತ್ಯಾಗಾನುರಾಗಿಣ್ಯಾ ನಾರ್ಯಾ ಶೂರೀಕೃತಸ್ತಯಾ ।
ಬಲೀ ಚ ಬಲಿಭಿಶ್ಚಾನ್ಯೈರ್ಯುಕ್ತೋ ಮಿತ್ರೈಃ ಸಹಾಗತಃ ॥ ೧೦೦

ತ್ವಂ ತು ಕಾರ್ಪಣ್ಯವಿಕ್ರೀತವಿವಿಕ್ತದಯಿತೋಜ್ಝಿತಃ ।
ಅವಮಾನನಿರುತ್ಸಾಹೋ ಗರ್ಹಿತಃ ಕ್ಲೀಬತಾಂ ಗತಃ ॥ ೧೦೧

ನ ಚ ಸ್ವತೋ ಬಲೀ ತಾದೃಕ್ ನ ಚ ಮಿತ್ರಬಲಾನ್ವಿತಃ ।
ತತ್ ಕಥಂ ತ್ವಂ ಸಮರ್ಥಃಸ್ಯಾಸ್ತಸ್ಯ ಪ್ರತ್ಯರ್ಥಿನೋ ಜಯೇ ॥ ೧೦೨

ರಾಜಾ ಚ ಕುಪ್ಯೇತ್ ಬುದ್ಧ್ವಾ ತೇ ದಾರವಿಕ್ರಯದುಷ್ಕೃತಮ್ ।
ತತ್ತೂಷ್ಣೀಂ ಭವ ಭೂಯೋಽಪಿ ಮಾ ಕೃಥಾ ಹಾಸ್ಯವಿಭ್ರಮಮ್ ॥ ೧೦೩

೧೦೪. ಎಂಬುದಾಗಿ ಗೆಳೆಯನು ತಡೆದರೂ ಕ್ರೋಧದಿಂದ ಸೈನಿಕರ ಜೊತೆ ಹೋಗಿ ಅರ್ಥಲೋಭನು ಸುಖಧನನ ಮನೆಯನ್ನು ಮುತ್ತಿದನು.

೧೦೫. ಆಗ ಸ್ನೇಹಿತರ ಸೈನ್ಯಗಳೊಂದಿಗೆ ಸುಖಧನನ ಸೈನ್ಯವು ಹೊರಬಂದು ಈತನ ಸೇನೆಯನ್ನು ಕ್ಷಣಾರ್ಧದಲ್ಲಿ ಧ್ವಂಸ ಗೊಳಿಸಿತು.

೧೦೬–೧೦೭. ಆಗ ಅರ್ಥಲೋಭನು ರಾಜನ ಬಳಿಗೆ ಓಡಿಹೋದನು. ಸುಖಧನನೆಂಬ ವ್ಯಾಪಾರಿಯು ತನ್ನ ಹೆಂಡತಿಯನ್ನು ಕದ್ದಿದ್ದಾನೆ ಎಂದು ತನ್ನ ತಪ್ಪನ್ನು ಮುಚ್ಚಿಟ್ಟುಕೊಂಡು ರಾಜನಿಗೆ ದೂರು ನೀಡಿದನು. ರಾಜನು ಕೋಪದಿಂದ ಸುಖಧನನನ್ನು ನಿಗ್ರಹಿಸಲು ಬಯಸಿದನು.

೧೦೮. ಆಗ ಸಂಧಾನನೆಂಬ ಮಂತ್ರಿಯು ರಾಜನಿಗೆ ಹೇಳಿದನು : "ಪ್ರಭುವೇ, ಈ ವ್ಯಾಪಾರಿಯನ್ನು ಹಾಗೆ ಹೀಗೆ ತಡೆಯಲು ಸಾಧ್ಯವಾಗುವುದಿಲ್ಲ.

೧೦೯. ತನ್ನ ಹನ್ನೊಂದು ಮಿತ್ರರ ಜೊತೆ ಬಂದಿರುವ ಅವನ ಬಳಿಯಲ್ಲಿ ಶ್ರೇಷ್ಠವಾದ ಕುದುರೆಗಳು ಒಂದು ಲಕ್ಷಕ್ಕೂ ಮಿಕ್ಕಿವೆ.

೧೧೦. ಇಲ್ಲಿ ನಿಜಸಂಗತಿಯು ಇನ್ನೂ ತಿಳಿದಿಲ್ಲ. ಇದು ಕಾರಣವಿಲ್ಲದೇ ಆಗಿರಲಿಕ್ಕಿಲ್ಲ. ಆದ್ದರಿಂದ ಒಬ್ಬ ದೂತನನ್ನು ಕಳುಹಿಸಿ ಅವನು ಏನು ಹೇಳುತ್ತಾನೆಂದು ತಿಳಿಯಬೇಕು.'

---

ಇತಿ ಸಖ್ಯಾ ನಿಷಿದ್ಧೋಽಪಿ ಕ್ರೋಧಾದ್ಗತ್ವಾ ಸಸೈನಿಕಃ ।
ಯಾವದ್ ರುಣದ್ಧ್ಯರ್ಥಲೋಭೋ ಗೃಹಂ ಸುಖಧನಸ್ಯ ಸಃ ॥ ೧೦೪

ತಾವತ್ತಸ್ಯ ಸಮಿತ್ರಸ್ಯ ಸೈನ್ಯೈಃ ಸುಖಧನಸ್ಯ ತತ್ ।
ಸೈನ್ಯಂ ತದೀಯಂ ನಿರ್ಗತ್ಯ ಕೃತ್ಸ್ನಂ ಭಗ್ನಮಭೂತ್ ಕ್ಷಣಾತ್ ॥ ೧೦೫

ತತಃ ಪಲಾಯಿತಃ ಪ್ರಾಯಾತ್ ಸೋಽರ್ಥಲೋಭೋ ನೃಪಾಂತಿಕಮ್ ।
ದಾರಾಃ ಸುಖಧನಾಖ್ಯೇನ ವಣಿಜಾ ದೇವ ಮೇ ಹೃತಾಃ ॥ ೧೦೬

ಇತಿ ವ್ಯಜಿಜ್ಞಪಚ್ಚಾತ್ರ ನೃಪಂ ನಿಹ್ನುತದುರ್ನಯಃ ।
ನೃಪೋಽಪ್ಯೈಚ್ಛದವಷ್ಟಬ್ಧುಂ ಸ ತಂ ಸುಖಧನಂ ರುಷಾ ॥ ೧೦೭

ತತಃ ಸಂಧಾನನಾಮಾ ತಂ ಮಂತ್ರೀ ರಾಜಾನಮಬ್ರವೀತ್ ।
ಯಥಾ ತಥಾ ನ ಶಕ್ಯೋಽಸಾವವಷ್ಟಬ್ಧುಂ ವಣಿಕ್ ಪ್ರಭೋ ॥ ೧೦೮

ತಸ್ಯೈಕಾದಶಭಿರ್ಮಿತ್ರೈಃ ಸಹಾಯಾತೈರ್ಯುತಸ್ಯ ಹಿ ।
ಲಕ್ಷಮಭ್ಯಧಿಕಂ ದೇವ ವರ್ತತೇ ವರವಾಜಿನಾಮ್ ॥ ೧೦೯

ತತ್ತ್ವಂ ಚ ನಾತ್ರ ವಿಜ್ಞಾತಂ ನ ಹ್ಯೇತತ್ಸ್ಯಾದಕಾರಣಮ್ ।
ತತ್ಪ್ರೇಷ್ಯದೂತಂ ಪ್ರಷ್ಟವ್ಯಃ ಕಿಂತಾವತ್ಸೋಽತ್ರ ಜಲ್ಪತಿ ॥ ೧೧೦

೧೧೧. ಮಂತ್ರಿಯು ಹೀಗೆನ್ನಲು ರಾಜ ಬಾಹುಬಲನು ಒಬ್ಬ ದೂತನನ್ನು ಸುಖಧನನ ಬಳಿಗೆ ಕಳುಹಿಸಿಕೊಟ್ಟನು.

೧೧೨. ಆ ದೂತನು ರಾಜಾಜ್ಞೆಯಂತೆ ಅಲ್ಲಿ ಹೋಗಿ ಕೇಳಿದಾಗ ಮಾನಪರೆಯು ತಾನೇ ತನ್ನ ಕಥೆಯನ್ನು ಹೇಳಿದಳು.

೧೧೩. ಅದನ್ನು ಕೇಳಿ ಆಕೆಯ ಆಶ್ಚರ್ಯಕರ ರೂಪವನ್ನು ಕಾಣಲು ರಾಜನು ಅರ್ಥಲೋಭನ ಜೊತೆ ಸುಖಧನನ ಮನೆಗೆ ಹೋದನು.

೧೧೪. ಅಲ್ಲಿ ಸುಖಧನನು ವಿನಯದಿಂದ ಇರಲು, ಬ್ರಹ್ಮನಿಗೂ ಲಾವಣ್ಯಸಿರಿಯಿಂದ ವಿಸ್ಮಯ ತರುವಂತಿದ್ದ ಆ ಮಾನಪರೆಯನ್ನು ನೋಡಿದನು.

೧೧೫. ರಾಜನ ಕಾಲಿಗೆ ಬಿದ್ದ ಮಾನಪರೆಯು ತನ್ನನ್ನು ಪ್ರಶ್ನಿಸಿದ ರಾಜನಿಗೆ ಅರ್ಥಲೋಭನು ಕೇಳುತ್ತಿರುವಂತೆಯೇ, ತನ್ನ ಬಾಯಿಂದಲೇ ಎಲ್ಲವನ್ನೂ ನಡೆದಂತೆ ಹೇಳಿಬಿಟ್ಟಳು.

೧೧೬. ಅದನ್ನು ಕೇಳಿ ಅದೇ ನಿಜವೆಂದು ಭಾವಿಸಿದ ರಾಜನಿಗೆ ಅರ್ಥಲೋಭನು ಉತ್ತರ ನಿರುತ್ತರನಾದನು. ರಾಜನು, "ಸುಂದರಿ, ನಿನ್ನ ಇಷ್ಟವೇನು' ಎಂದು ಅವಳನ್ನೇ ಕೇಳಿದನು.

೧೧೭. ಅದಕ್ಕೆ ಆಕೆಯು ನಿರ್ಣಯಿಸಿಕೊಂಡು "ಪ್ರಭುವೇ, ಆಪತ್ತು ಒದಗದೇ ಇರುವಾಗಲೂ ಯಾರು ನನ್ನನ್ನು ಮಾರಿದನೋ ಅಂಥಹ ಶಕ್ತಿಯಿಲ್ಲದ ಕಡುಲೋಭಿಯ ಬಳಿಗೆ ಹೇಗೆ ಹೋಗಲಿ ?' ಎಂದಳು.

---

ಇತಿ ಮಂತ್ರಿವಚಃ ಶ್ರುತ್ವಾ ರಾಜಾ ಬಾಹುಬಲಸ್ತತಃ ।
ಪ್ರಷ್ಟುಂ ತತ್ ಪ್ರಾಹಿಣೋದ್ದೂತಂ ತಸ್ಮೈ ಸುಖಧನಾಯ ಸಃ ॥ ೧೧೧

ಸ ದೂತಸ್ತಂ ತದಾದೇಶಾತ್ ಗತ್ವಾ ಯಾವತ್ಪೃಚ್ಛತಿ ।
ತಾವನ್ಮಾನಪರಾ ಸಾಸ್ಮೈ ಸ್ವವೃತ್ತಾಂತಂ ತಮಭ್ಯಧಾತ್ ॥ ೧೧೨

ಶ್ರುತ್ವೈವ ಚ ತದಾಶ್ಚರ್ಯಂ ರೂಪಂ ತಸ್ಯಾಶ್ಚ ವೀಕ್ಷಿತುಮ್ ।
ಗೃಹಂ ಸುಖಧನಸ್ಯಾಗಾತ್ ಸಾರ್ಥಲೋಭೋ ಮಹೀಪತಿಃ ॥ ೧೧೩

ತತ್ರಾಪಶ್ಯತ್ ಸುಖಧನೇ ಪ್ರಹ್ವೇ ಮಾನಪರಾಂ ಸ ತಾಮ್ ।
ವಿಧಾತುರಪಿ ಲಾವಣ್ಯಲಕ್ಷ್ಮ್ಯಾ ವಿಸ್ಮಯದಾಯಿನೀಮ್ ॥ ೧೧೪

ಪಾದಾನತಾಯಾಃ ಸೋಽಸ್ಯಾಶ್ಚ ಪೃಷ್ಟಾಯಾಶ್ಚ ಸ್ವಯಂ ಮುಖಾತ್ ।
ಅಶೃಣೋತ್ತದ್ಯಥಾವೃತ್ತಮರ್ಥಲೋಭಸ್ಯ ಶೃಣ್ವತಃ ॥ ೧೧೫

ಶ್ರುತ್ವಾ ಚ ಮತ್ವಾ ಸತ್ಯಂ ತದರ್ಥಲೋಭೇ ನಿರುತ್ತರೇ ।
ತಾಮಪೃಚ್ಛತ್ ಸ ಸುಮುಖೀಂ ಕಿಮಿದಾನೀಂ ಭವತ್ವಿತಿ ॥ ೧೧೬

ತತಃ ಸಾ ನಿಶ್ಚಿತಾವಾದೀದ್ದೇವ ಯೇನಾಸ್ಮ್ಯನಾಪದಿ ।
ವಿಕ್ರೀತಾನ್ಯಸ್ಯ ನಿಃಸತ್ತ್ವಂ ಲುಬ್ಧಂ ಕಥಮುಪೈಮಿ ತಮ್ ॥ ೧೧೭

೧೧೮. ಇದನ್ನು ಕೇಳಿದ ರಾಜನು "ಒಳ್ಳೆಯದು, ಸರಿಯಾಗಿಯೇ ಹೇಳಿದೆ' ಎನ್ನಲು ಅರ್ಥಲೋಭನು ಕಾಮಕ್ರೋಧ ಲಜ್ಜೆಗಳಿಂದ ಕಳವಳಗೊಂಡು ನುಡಿದನು:

೧೧೯. "ರಾಜನೇ ! ನಾನೂ ಈ ಸುಖಧನನೂ ಯುದ್ಧ ಮಾಡುತ್ತೇವೆ. ನನ್ನ ಸೈನ್ಯಗಳೂ ಹೋರಾಡುತ್ತವೆ. ಬಲಾಬಲಗಳನ್ನು ನೀನೇ ನೋಡು.'

೧೨೦. ಈ ಮಾತನ್ನು ಕೇಳಿದ ಸುಖಧನನು "ಸರಿ, ಹಾಗಿದ್ದರೆ ನಾವಿಬ್ಬರೇ ಹೋರಾಡೋಣ. ಸೈನ್ಯದ ಸಹಾಯವೇತಕ್ಕೆ ?

೧೨೧. ಯಾರು ಜಯಶಾಲಿಯಾಗುವನೋ ಮಾನಪರೆಯು ಅವನವಳಾಗುತ್ತಾಳೆ' ಎಂದನು. ಆಗ ರಾಜನು "ಓ ಹಾಗೆಯೇ ಆಗಬಹುದು' ಎಂದನು.

೧೨೨. ಆಗ ರಾಜನೂ ಮಾನಪರೆಯೂ ನೋಡುತ್ತಿರುವಂತೆಯೇ, ಕುದುರೆಯನ್ನೇರಿದ ಇಬ್ಬರೂ ವ್ಯಾಪಾರಿಗಳು ರಣಾಂಗಣಕ್ಕೆ ಇಳಿದರು.

೧೨೩. ಯುದ್ಧವು ಆರಂಭವಾಗಲು ಸುಖಧನನ ಭರ್ಜಿಯ ಪೆಟ್ಟಿನಿಂದ ಅರ್ಥಲೋಭನ ಕುದುರೆ ಕೆಳಗೆ ಬಿದ್ದಿತು. ಸುಖಧನನು ಅರ್ಥಲೋಭನನ್ನು ನೆಲದ ಮೇಲೆ ಕುಕ್ಕಿದನು.

೧೨೪. ಹಾಗೆಯೇ ಮತ್ತೆ ಮೂರು ಕುದುರೆ ಸತ್ತು ನೆಲದ ಮೇಲೆ ಬಿದ್ದಿದ್ದ ಅರ್ಥಲೋಭನನ್ನು ಹುರಿದುಂಬಿಸಿದನು. ಧರ್ಮಯೋಧನಾದ ಸುಖಧನನು ಆತನನ್ನು ಕೊಲ್ಲಲಿಲ್ಲ.

---

ಏತತ್ ಶ್ರುತ್ವಾ ನೃಪೇ ತಸ್ಮಿನ್ ಸಾಧೂಕ್ತಮಿತಿ ವಾದಿನಿ ।
ಅವೋಚತ್ ಸೋಽರ್ಥಲೋಭೋಽತ್ರ ಕಾಮಕ್ರೋಧತ್ರಪಾಕುಲಃ ॥ ೧೧೮

ಅಯಂ ಸುಖಧನೋ ರಾಜನ್ ಅಹಂ ಚಾನುಬಲಂ ವಿನಾ ।
ಯುಧ್ಯಾವಹೇ ಸ್ವಸೈನ್ಯಾಭ್ಯಾಂ ಸತ್ತ್ವಾಸತ್ತ್ವಮವೇಕ್ಷ್ಯತಾಮ್ ॥ ೧೧೯

ಇತ್ಯರ್ಥಲೋಭಸ್ಯ ವಚಃಶ್ರುತ್ವಾ ಸುಖಧನೋಽಭ್ಯಧಾತ್ ।
ತರ್ಹಿ ಯುಧ್ಯಾವಹೇ ಆವಾಂ ದ್ವಾವೇವ ಕಿಮು ಸೈನಿಕೈಃ ॥ ೧೨೦

ಯಃ ಪ್ರಾಪ್ಸ್ಯತಿ ಜಯಂ ಮಾನಪರಾ ತಸ್ಯ ಭವಿಷ್ಯತಿ ।
ಶ್ರುತ್ವೈತತ್ ಬಾಢಮಸ್ತ್ವೇವಮಿತಿ ರಾಜಾಪ್ಯಭಾಷತ ॥ ೧೨೧

ತತೋ ಮಾನಪರಾಯಾಂ ಚ ರಾಜ್ಞಿ ಚಾವೇಕ್ಷ್ಯಮಾಣಯೋಃ ।
ಯುದ್ಧಭೂಮಿಂ ಹಯಾರೂಢೌ ತಾವವಾತರತಾಮುಭೌ ॥ ೧೨೨

ಪ್ರವೃತ್ತೇ ಚಾಹವೇ ತತ್ರ ಕುಂತಾಘಾತೋತ್ತತದ್ಧಯಮ್ ।
ಅರ್ಥಲೋಭಂ ಸುಖಧನಃ ಪರ್ಯಸ್ಥದ್ವಸುಧಾತಲೇ ॥ ೧೨೩

ತಥೈವ ವಾರಾಂಸ್ತ್ರೀನನ್ಯಾನ್ ಹತಾಶ್ವಂ ಪತಿತಂ ಕ್ಷಿತೌ ।
ಧೀರಯನ್ ಧರ್ಮಯೋಧೀ ಸ ನ ತಂ ಸುಖಧನೋಽವಧೀತ್ ॥ ೧೨೪

೧೨೫. ಐದನೆಯ ಬಾರಿಗೆ ಕೆಳಗೆ ಬಿದ್ದ ಕುದುರೆಯು ಮೇಲೆ ಒದೆಯಲು ಅರ್ಥಲೋಭನು ಪ್ರಜ್ಞೆ ಕಳೆದುಕೊಂಡಾಗ ಅವನ ಸೇವಕರು ಆತನನ್ನು ಕರೆದೊಯ್ದರು.

೧೨೬. ಆಮೇಲೆ ಎಲ್ಲರೂ ಸಾಧು (ಒಳ್ಳೆಯವರು) ಎಂದು ಹೊಗಳಿ ಅಭಿನಂದಿಸುತ್ತಿರಲು ಬಾಹುಬಲರಾಜನು ಸುಖಧನನನ್ನು ಯೋಗ್ಯರೀತಿಯಲ್ಲಿ ಸನ್ಮಾನಿಸಿದನು.

೧೨೭. ಅವನು ತಂದಿದ್ದ ಉಡುಗೊರೆಯನ್ನು ಅವನಿಗೇ ಕೊಟ್ಟು ಅರ್ಥಲೋಭನು ಅನ್ಯಾಯದಿಂದ ಗಳಿಸಿದ್ದ ಎಲ್ಲ ಐಶ್ವರ್ಯವನ್ನೂ ವಶಕ್ಕೆ ತೆಗೆದುಕೊಂಡನು.

೧೨೮. ಅವನ ಜಾಗದಲ್ಲಿ ಬೇರೆಯವರನ್ನು ನೇಮಿಸಿ ಸಂತುಷ್ಟನಾಗಿ ತನ್ನ ಮನೆಗೆ ಹೋದನು. ಪಾಪಿಗಳ ಸಂಪರ್ಕದಿಂದ ಬಿಡುಗಡೆ ಹೊಂದಿದ ಸಜ್ಜನರು ನೆಮ್ಮದಿ ಹೊಂದುತ್ತಾರಷ್ಟೆ!

೧೨೯. ಆ ಸುಖಧನನಾದರೋ ಬಲದಿಂದ ಅನುರಾಗವತಿಯಾದ ಮಾನಪರೆಯೊಂದಿಗೆ ಸುಖವಾಗಿ ವಿಹರಿಸಿಕೊಂಡಿದ್ದನು.

೧೩೦–೧೩೧. ಹೀಗೆ ಹೆಂಡತಿಯರೂ ಐಶ್ವರ್ಯವೂ, ಅಶಕ್ತರೂ ನೀಚರೂ ಆದವರಿಂದ ದೂರ ಹೋಗಿ ತಾವಾಗಿಯೇ ಸತ್ವಶಾಲಿಗಳನ್ನು ಸೇರುವ ಕಾರಣ ನೀನು ಚಿಂತೆ ಮಾಡಬೇಡ. ನಿದ್ರೆ ಮಾಡು. ಪ್ರಭುವೇ, ನೀನು ಆ ರಾಜಪುತ್ರಿ ಕರ್ಪೂರಿಕೆಯನ್ನು ಬೇಗನೆ ಪಡೆಯಲಿದ್ದೀಯೆ.'

---

ವಾರೇತು ಪಂಚಮೇಽಶ್ವೇನ ಪತಿತ್ವೋಪರಿ ತಾಡಿತಃ ।
ಅರ್ಥಲೋಭಃ ಸ ನಿಶ್ಚೇಷ್ಟಸ್ತತೋ ಭೃತ್ಯೈರನೀಯತ ॥ ೧೨೫

ತತಃ ಸುಖಧನಂ ಸರ್ವೈಃ ಸಾಧುವಾದಾಭಿಪೂಜಿತಮ್ ।
ಸ ತಂ ಬಾಹುಬಲೋ ರಾಜಾ ಯಥೋಚಿತಮಮಾನಯತ್ ॥ ೧೨೬

ಪ್ರಾಭೃತಂ ಚ ತದಾನೀತಂ ತಸ್ಮಾ ಏವ ಸಮರ್ಪಯತ್ ।
ಅಹರಚ್ಚಾರ್ಥಲೋಭಸ್ಯ ಸರ್ವಸ್ವಮಶುಭಾರ್ಜಿತಮ್ ॥ ೧೨೭

ತತ್ಪದೇ ಚಾಪರಂ ಕೃತ್ವಾ ತುಷ್ಟಃ ಪ್ರಾಯಾತ್ ಸ್ವಮಂದಿರಮ್ ।
ನಿವೃತ್ತಪಾಪಸಂಪರ್ಕಾಃ ಸಂತೋ ಯಾಂತಿ ಹಿ ನಿರ್ವೃತಿಮ್ ॥ ೧೨೮

ಸೋಽಪಿ ಪ್ರಸಹ್ಯ ವಿಹರನ್ನಾಸೀತ್ ಸುಖಧನಃ ಸುಖಮ್ ।
ಸಹಿತೋ ಮಾನಪರಯಾ ಭಾರ್ಯಯಾ ಚಾನುರಕ್ತಯಾ ॥ ೧೨೯

ಏವಂ ದಾರಾಃ ಪಲಾಯಂತೇ ಹೀನಸತ್ತ್ವಾದ್ಧನಾನಿ ಚ ।
ಸುಸತ್ತ್ವಸ್ಯೋಪತಿಷ್ಠಂತೇ ಸ್ವಯಮೇತ್ಯ ಯತಸ್ತತಃ ॥ ೧೩೦

ತದಲಂ ಚಿಂತಯಾ ನಿದ್ರಾಂ ಭಜಸ್ವ ನ ಚಿರೇಣ ಹಿ ।
ರಾಜಪುತ್ರೀಮವಾಪ್ತಾಸಿ ತ್ವಂ ತಾಂ ಕರ್ಪೂರಿಕಾಂ ಪ್ರಭೋ ॥ ೧೩೧

೧೩೨. ಎಂಬುದಾಗಿ ಆ ರಾತ್ರಿ ರಾಜ್ಯಧರನು ಹೇಳಿದ ಅರ್ಥವತ್ತಾದ ಮಾತನ್ನು ಕೇಳಿದ ನರವಾಹನದತ್ತನೂ ಗೋಮುಖನೂ ನಿದ್ದೆ ಮಾಡಿದರು.

೧೩೩. ಬೆಳಿಗ್ಗೆ ಎದ್ದು ಉಪಾಹಾರ ಸೇವಿಸಿ ಸುಮ್ಮನೆ ಕುಳಿತಿರುವಾಗ ಬುದ್ಧಿವಂತನಾದ ಗೋಮುಖನು ರಾಜ್ಯಧರನಿಗೆ ಹೇಳಿದನು.

೧೩೪. "ಒಂದು ಯಂತ್ರ ವಿಮಾನವನ್ನು ನನ್ನ ಒಡೆಯನ ಸಲುವಾಗಿ ಸಿದ್ಧಪಡಿಸು. ಅದನ್ನೇರಿ ಕರ್ಪೂರಸಂಭವ ಪುರವನ್ನು ತಲುಪಿ ತನ್ನ ಪ್ರಿಯೆಯನ್ನು ಇವನು ಪಡೆಯಲಿ.'

೧೩೫. ಇದನ್ನು ಕೇಳಿದ ಬಡಗಿ ರಾಜ್ಯಧರನು ಮೊದಲೇ ಸಜ್ಜುಗೊಂಡಿದ್ದ ವಾಯುಯಂತ್ರದ ವಿಮಾನವೊಂದನ್ನು ನರವಾಹನದತ್ತನಿಗೆ ಒಪ್ಪಿಸಿಕೊಟ್ಟನು.

೧೩೬–೧೩೭. ಮನೋವೇಗದಲ್ಲಿ ಹೋಗುವ ಆ ಗಗನಗಾಮಿಯಲ್ಲಿ ಗೋಮುಖನೊಂದಿಗೆ ಕುಳಿತ ನರವಾಹನದತ್ತನು ಅವನ ಧೈರ್ಯದ ನೋಟದಿಂದ ಉಲ್ಲಾಸಗೊಂಡಂತೆ ಮೇಲೆದ್ದು ಕುಣಿಯುತ್ತಿದ್ದ ಅಲೆಗಳಿಂದ ಕೂಡಿದ ಸಮುದ್ರವನ್ನು ದಾಟಿ ಅದರ ದಡದಲ್ಲಿದ್ದ ಕರ್ಪೂರಸಂಭವ ಪುರವನ್ನು ತಲುಪಿದನು.

೧೩೮. ಅಲ್ಲಿ ಆಕಾಶದಿಂದ ಕೆಳಗೆ ಇಳಿದ ವಿಮಾನದಿಂದ ಇಳಿದ ಅವನು ಗೋಮುಖನೊಂದಿಗೆ ಆ ಊರೊಳಗೆಲ್ಲ ಸುತ್ತಾಡಿದನು.

---

ಇತಿ ರಾಜ್ಯಧರಾತ್ಶ್ರುತ್ವಾ ರಾತ್ರೌ ತತ್ರಾರ್ಥವದ್ವಚಃ ।
ನರವಾಹನದತ್ತಃ ಸ ಭೇಜೇ ನಿದ್ರಾಂ ಸಗೋಮುಖಃ ॥ ೧೩೨
ಪ್ರಾತಶ್ಚಾತ್ರ ಕೃತಾಹಾರಃ ಕ್ಷಣಂ ಯಾವತ್ ಸ ತಿಷ್ಠತಿ ।
ತಾವತ್ಸ ಗೋಮುಖೋ ಧೀಮಾಂಸ್ತಂ ರಾಜ್ಯಧರಮಭ್ಯಧಾತ್ ॥ ೧೩೩
ಕುರು ಯಂತ್ರವಿಮಾನಂ ತನ್ಮತ್ಪ್ರಭೋರಸ್ಯ ಯೇನ ತತ್ ।
ಕರ್ಪೂರಸಂಭವಪುರಂ ಪ್ರಾಪ್ಯ ಪ್ರಾಪ್ನೋತ್ಯಸೌ ಪ್ರಿಯಾಮ್ ॥ ೧೩೪
ಏತತ್ ಶ್ರುತ್ವಾ ಸ ತಕ್ಷಾಸ್ಮೈ ವಾತಯಂತ್ರವಿಮಾನಕಮ್ ।
ನರವಾಹನದತ್ತಾಯ ಪೂರ್ವಕ್ಲೃಪ್ತಮಢೌಕಯತ್ ॥ ೧೩೫
ತತ್ರಾರುಹ್ಯ ಮನಃಶೀಘ್ರೇ ಖಗಾಮಿನಿ ಸ ಗೋಮುಖಃ ।
ತದ್ಧೈರ್ಯಾಲೋಕಸೋಲ್ಲಾಸಮಿವೋಚ್ಚಲಿತವೀಚಿಕಮ್ ॥ ೧೩೬
ಮಕರಾಕರಮುಲ್ಲಂಘ್ಯ ಪ್ರಾಪ್ಯ ತತ್ತೀರವರ್ತಿ ಸಃ ।
ನರವಾಹನದತ್ತಸ್ತತ್ಪುರಂ ಕರ್ಪೂರಸಂಭವಮ್ ॥ ೧೩೭
ತತ್ರಾವತೀರ್ಣಾನ್ನಭಸೋ ವಿಮಾನಾದವರುಹ್ಯ ಸಃ ।
ಪುರಾಂತಃ ಪರಿಬಭ್ರಾಮ ಕೌತುಕೇನ ಸಗೋಮುಖಃ ॥ ೧೩೮

೧೪೯. ತನಗೆ ಬೇಕಾದ ಊರು ಅದೇ, ಅನುಮಾನವೇ ಇಲ್ಲ ಎಂದು ಜನರಿಂದ ಕೇಳಿ ತಿಳಿದು ಸಂತೋಷಪಟ್ಟ ಅವನು ಅರಮನೆಯ ಬಳಿಗೆ ಹೋದನು.

೧೫೦. ಅಲ್ಲಿ ಸುಂದರ ಗೃಹವೊಂದಿದ್ದು ಅದರಲ್ಲಿ ಮುದುಕಿಯೊಬ್ಬಳಿದ್ದಳು. ಅಲ್ಲಿಗೆ ಹೋಗಿ ವಾಸಮಾಡಲು ಜಾಗ ನೀಡಬೇಕೆಂದು ಕೇಳಿದಾಗ ವಿನಯವತಿಯಾದ ಅವಳು ಒಪ್ಪಿಗೆ ನೀಡಿದಳು. ಅವನು ಆ ಮನೆಯನ್ನು ಪ್ರವೇಶಿಸಿದನು.

೧೫೧. ಮುಂದಿನ ಉಪಾಯವನ್ನು ಸ್ವಲ್ಪ ಹೊತ್ತು ಚಿಂತಿಸುತ್ತ ಆಕೆಯನ್ನು ಪ್ರಶ್ನಿಸಿದನು. "ಆರ್ಯಳೇ, ಇಲ್ಲಿಯ ರಾಜನ ಹೆಸರೇನು ? ಅವನಿಗೆ ಎಂಥ ಮಗಳಿದ್ದಾಳೆ ?

೧೫೨–೧೫೩. ಅವಳ ರೂಪವನ್ನಿಷ್ಟು ನಮಗೆ ತಿಳಿಸು. ಏಕೆಂದರೆ ನಾವು ಪರವೂರಿನವರು.' ಅದನ್ನು ಕೇಳಿ ಇವನ ಉತ್ತಮ ಆಕೃತಿಯನ್ನು ಕಂಡ ಮುದುಕಿಯು, "ಮಹಾಶಯನೇ, ನಿನಗೆ ಎಲ್ಲವನ್ನೂ ಹೇಳುತ್ತೇನೆ, ಕೇಳು. ಕರ್ಪೂರಸಂಭವವೆಂಬ ಈ ಊರಿನ ರಾಜ ಕರ್ಪೂರಕ ಎಂಬುವನು.

೧೫೪. ಮಕ್ಕಳಿಲ್ಲದಿದ್ದ ಆತನು ಸಂತಾನದ ಸಲುವಾಗಿ ತನ್ನ ಮಡದಿಯಾದ ಬುದ್ಧಿಕಾರಿಯೊಂದಿಗೆ ಉಪವಾಸವಿದ್ದು ಶಂಕರನನ್ನು ಕುರಿತು ತಪಸ್ಸು ಮಾಡಿದನು.

೧೫೫. ಮೂರು ರಾತ್ರಿ ಉಪವಾಸ ಮಾಡಿದ ಅವನಿಗೆ ದೇವರು ಕನಸಿನಲ್ಲಿ ಹೀಗೆಂದನು : "ಏಳು, ಮಗನಿಗಿಂತಲೂ ಮಿಗಿಲಾದ ಮಗಳೊಬ್ಬಳು ನಿನಗೆ ಹುಟ್ಟಲಿದ್ದಾಳೆ.

---

ಪೃಷ್ಟಾಚ್ಚ ಲೋಕತೋ ಬುದ್ಧ್ವಾ ತದೇವಾಭೀಪ್ಸಿತಂ ಪುರಮ್ ।
ಪ್ರಾಪ್ತಂ ನಿಃಸಂಶಯಂ ಹೃಷ್ಟೋ ಯಯೌ ರಾಜಕುಲಾಂತಿಕಮ್ ॥ ೧೪೯

ತತ್ರೈಕಂ ರುಚಿರಂ ವೇಶ್ಮ ವೃದ್ಧಯಾಧಿಷ್ಠಿತಂ ಸ್ತ್ರಿಯಾ ।
ಸ ವಿವೇಶ ನಿವಾಸಾಯ ನಮ್ರಯಾನುಮತಸ್ತಯಾ ॥ ೧೫೦

ಯುಕ್ತಿಂ ಜಿಜ್ಞಾಸಮಾನಶ್ಚ ಕ್ಷಣಾತ್ ಪಪ್ರಚ್ಛ ತಾಂ ಸ್ತ್ರಿಯಮ್ ।
ಆರ್ಯೇ ಕಿಮಭಿಧಾನೋಽತ್ರ ರಾಜಾಪತ್ಯಂ ಚ ತಸ್ಯ ಕಿಮ್ ॥ ೧೫೧

ರೂಪಂ ಚ ತಸ್ಯ ನಃ ಶಂಸ ಯತೋ ವೈದೇಶಿಕಾ ವಯಮ್ ।
ಇತ್ಯುಕ್ತಾ ತೇನ ವೃದ್ಧಾ ಸಾ ತಂ ವಿಲೋಕ್ಯೋತ್ತಮಾಕೃತಿಮ್ ॥ ೧೫೨

ಪ್ರತ್ಯುವಾಚ ಮಹಾಭಾಗ ಶೃಣು ಸರ್ವಂ ವದಾಮಿ ತೇ ।
ಇಹ ಕರ್ಪೂರಕೋ ನಾಮ ರಾಜಾ ಕರ್ಪೂರಸಂಭವೇ ॥ ೧೫೩

ಸ ಚಾನಪತ್ಯಃ ಸಂತಾನಹೇತೋರುದ್ದಿಶ್ಯ ಶಂಕರಮ್ ।
ಬುದ್ಧಿಕಾರ್ಯಾಸಮಂ ದೇವ್ಯಾ ನಿರಾಹಾರೋಽಕರೋತ್ತಪಃ ॥ ೧೫೪

ತ್ರಿರಾತ್ರೋಪೋಷಿತಂ ದೇವೋ ಹರಃ ಸ್ವಪ್ನೇ ತಮಾದಿಶತ್ ।
ಉತ್ತಿಷ್ಠ ಪುತ್ರಾಭ್ಯಧಿಕಾ ಸಾ ತೇ ಕನ್ಯಾ ಜನಿಷ್ಯತೇ ॥ ೧೫೫

೧೪೬-೧೪೭ ಆಕೆಯ ಗಂಡನು ವಿದ್ಯಾಧರರ ಸಾಮ್ರಾಜ್ಯವನ್ನು ಪಡೆಯಲಿದ್ದಾನೆ.' ಹೀಗೆ ಶಂಕರನು ಹೇಳಿದ ಮೇಲೆ ರಾಜನು ಎಚ್ಚರಗೊಂಡು ಬೆಳಿಗ್ಗೆ ಎದ್ದು ತನ್ನ ರಾಣಿ ಬುದ್ಧಿಕಾರಿಗೆ ಆ ಕನಸನ್ನು ಹೇಳಿ ಸಂತೋಷದಿಂದ ಅವನು ಆಕೆಯೊಂದಿಗೆ ವ್ರತದ ಪಾರಣೆಯನ್ನು ಮಾಡಿದನು.

೧೪೮. ಆಮೇಲೆ ಸ್ವಲ್ಪ ಕಾಲದಲ್ಲಿಯೇ ರಾಣಿಯು ಗರ್ಭ ಧರಿಸಿದಳು. ಸಕಾಲದಲ್ಲಿ ಸರ್ವಾಂಗ ಸುಂದರಿಯಾದ ಹೆಣ್ಣು ಮಗುವನ್ನು ಅವಳು ಹೆತ್ತಳು.

೧೪೯. ಆ ಮಗುವಿನ ಕಾಂತಿಗೆ ಬಾಣಂತಿ ಕೋಣೆಯ ದೀಪಗಳೆಲ್ಲ ಸೋತು ಮಂಕಾಗಿ ಕಾಡಿಗೆಯನ್ನು ಬಿಡುವ ನೆಪದಿಂದ ನಿಟ್ಟುಸಿರುಬಿಡುತ್ತಿರುವಂತೆ ಕಾಣುತ್ತಿದ್ದವು .

೧೫೦. ಅನಂತರ ರಾಜ ಕರ್ಪೂರಕನು ಉತ್ಸವವನ್ನಾಚರಿಸಿ ಆ ಮಗುವಿಗೆ ಕರ್ಪೂರಿಕಾ ಎಂದು ತನ್ನದೇ ಹೆಸರಿಟ್ಟು ನಾಮಕರಣ ಮಾಡಿದನು.

೧೫೧. ಕ್ರಮವಾಗಿ ಬೆಳೆದು ದೊಡ್ಡವಳಾಗಿ ಜನರ ಕಣ್ಣುಗಳಿಗೆ ಬೆಳದಿಂಗಳಾದ, ರಾಜಕುಮಾರಿ ಕರ್ಪೂರಿಕೆಯು ಈಗ ಯುವತಿಯಾಗಿದ್ದಾಳೆ.

೧೫೨. ಅವಳ ತಂದೆಯಾದ ರಾಜ ಕರ್ಪೂರಕನು ಅವಳಿಗೆ ಮದುವೆ ಮಾಡಬಯಸುತ್ತಾನೆ ಆದರೆ ಪುರುಷದ್ವೇಷಿಯಾದ ಆ ಮಾನಿನಿಯು ಅದನ್ನು ಇಷ್ಟಪಡುತ್ತಿಲ್ಲ.

---

ವಿದ್ಯಾಧರಾಣಾಂ ಸಾಮ್ರಾಜ್ಯಂ ಯಸ್ಯಾಃ ಪತಿರವಾಪ್ಸ್ಯತಿ ।
ಇತ್ಯಾದಿಷ್ಟೋ ಹರೇಣಾಸೌ ಪ್ರಾತಃ ಪ್ರಾಬುದ್ಧ ಭೂಪತಿಃ ॥ ೧೪೬
ನಿವೇದ್ಯ ಬುದ್ಧಿಕಾರ್ಯೈ ಚ ದೇವ್ಯೈ ಸ್ವಪ್ನಂ ತಮುತ್ಥಿತಃ ।
ಪ್ರಹೃಷ್ಟೋಽಥ ತಯಾ ಸಾಕಂ ಚಕಾರ ವ್ರತಪಾರಣಮ್ ॥ ೧೪೭
ತತಸ್ತಸ್ಯಾಚಿರಾದ್ರಾಜ್ಞೋ ರಾಜ್ಞೀ ಗರ್ಭಮಧತ್ತ ಸಾ ।
ಕಾಲೇ ಚಾಸೂತ ಸಂಪೂರ್ಣೇ ಕನ್ಯಾಂ ಸರ್ವಾಂಗಸುಂದರೀಮ್ ॥ ೧೪೮
ಯಯಾ ಪ್ರಭಾಜಿತಾಸ್ತತ್ರ ಜಾತವೇಶ್ಮನಿ ದೀಪಕಾಃ ।
ಕಜ್ಜಲೋದ್ಗಾರಮಿಷತೋ ನಿಃಶ್ವಾಸಾನಮುಚನ್ನಿವ ॥ ೧೪೯
ಕರ್ಪೂರಿಕೇತಿ ತಸ್ಯಾಶ್ಚ ನಿಜಂ ನಾಮ ತತಃ ಪಿತಾ ।
ಏಷ ಕರ್ಪೂರಕೋ ರಾಜಾ ವ್ಯಧತ್ತ ವಿಹಿತೋತ್ಸವಃ ॥ ೧೫೦
ಕ್ರಮಾಚ್ಚ ವೃದ್ಧಿಂ ಪ್ರಾಪ್ತಾ ಸಾ ಲೋಕಲೋಚನಚಂದ್ರಿಕಾ ।
ಕರ್ಪೂರಿಕಾ ರಾಜಪುತ್ರೀ ಯೌವನಸ್ಥಾದ್ಯ ವರ್ತತೇ ॥ ೧೫೧
ಪಿತಾ ಚೇಹ ನೃಪಸ್ತಸ್ಯ ವಿವಾಹಮಭಿಕಾಂಕ್ಷತಿ ।
ಪುರುಷದ್ವೇಷಿಣೀ ಸಾ ತು ತಂ ನೇಚ್ಛತಿ ಮನಸ್ವಿನೀ ॥ ೧೫೨

೧೫೩. ನನ್ನ ಮಗಳು ಅವಳ ಗೆಳತಿ. ಅವಳು ಹೆಣ್ಣಾಗಿ ಹುಟ್ಟಿದ್ದರ ಫಲವೇ ಮದುವೆ, ಅದನ್ನು ನೀನೇಕೆ ಇಷ್ಟಪಡುತ್ತಿಲ್ಲ ಎಂದು ಅವಳನ್ನು ಕೇಳಿದಾಗ ಆ ರಾಜಕುವರಿ ಹೇಳಿದಳು :

೧೫೪. "ಗೆಳತಿಯೇ, ಪೂರ್ವಜನ್ಮಸ್ಮರಣೆಯುಳ್ಳ ನನ್ನ ಹಿಂದಿನ ಜನ್ಮದ ಕಥೆಯನ್ನು ಹೇಳುತ್ತೇನೆ, ಕೇಳು. ಮಹಾಸಮುದ್ರದ ದಡದಲ್ಲಿ ದೊಡ್ಡದೊಂದು ಗಂಧದ ಮರವಿದೆ.

೧೫೫. ಅದರ ಬಳಿಯಲ್ಲಿ ಅರಳಿದ ತಾವರೆಗಳಿಂದ ಕಂಗೊಳಿಸುವ ಸರೋವರವೊಂದಿದೆ. ಅಲ್ಲಿ ನಾನು ಕರ್ಮಾನುಗುಣವಾಗಿ ಪೂರ್ವಜನ್ಮದಲ್ಲಿ ಹೆಣ್ಣು ಹಂಸವಾಗಿದ್ದೆ.

೧೫೬. ನಾನು ಒಮ್ಮೆ ಸಮುದ್ರದ ದಡದ ಆ ಶ್ರೀಗಂಧದ ಮರದಲ್ಲಿ ನನ್ನ ಗಂಡ ರಾಜಹಂಸೆಯೊಂದಿಗೆ ಮನೆ ಮಾಡಿಕೊಂಡಿದ್ದೆ.

೧೫೭. ಆ ಗೂಡಿನಲ್ಲಿ ವಾಸವಾಗಿದ್ದಾಗ ನನಗೆ ಹುಟ್ಟಿದ್ದ ಎಳೆ ಮರಿಗಳನ್ನು ಇದ್ದಕ್ಕಿದ್ದಂತೆ ಉಕ್ಕಿಬಂದ ಬಲಿಷ್ಠವಾದ ಸಮುದ್ರದ ಅಲೆಯು ಕೊಂಡೊಯ್ದಿತು.

೧೫೮. ಪ್ರವಾಹವು ಮರಿಗಳನ್ನು ಹೊತ್ತುಕೊಂಡು ಹೋದ ಮೇಲೆ ತಾನು ಜೋರಾಗಿ ಅಳುತ್ತಾ ಆಹಾರವನ್ನೂ ಸ್ವೀಕರಿಸದೆ ಸಮುದ್ರದ ದಡೆಯಲ್ಲಿದ್ದ ಶಿವಲಿಂಗದ ಮುಂದೆ ದುಃಖದಿಂದ ಕುಳಿತಿದ್ದೆನು.

೧೫೯. ಆಗ ನನ್ನ ಪತಿ ರಾಜಹಂಸನು ಬಂದು ನನಗೆಂದಿತು. "ಏಳು, ಕಳೆದುಹೋದ ಮಕ್ಕಳಿಗಾಗಿ ಏಕೆ ಶೋಕಪಡುತ್ತೀಯ ?

---

ಕನ್ಯಾಜನ್ಮಫಲಂ ಕಸ್ಮಾದ್ವಿವಾಹಂ ಸಖಿ ನೇಚ್ಛಸಿ ।
ಇತಿ ಮತ್ಸುತಯಾ ಸಾ ಚ ಸಖ್ಯಾ ಪೃಷ್ಟೇದಮಬ್ರವೀತ್ ॥ ೧೫೩

ಸಖಿ ಜಾತಿಸ್ಮರಾಯಾ ಮೇ ಪ್ರಾಗ್ವೃತ್ತಂ ಶೃಣು ಕಾರಣಮ್ ।
ಅಸ್ತಿ ತೀರೇ ಮಹಾಂಭೋಧೇರ್ಮಹಾಂಶ್ಚಂದನಪಾದಪಃ ॥ ೧೫೪

ತಸ್ಯಾಸ್ತಿ ನಿಕಟೇ ಫುಲ್ಲನಲಿನಾಲಂಕೃತಂ ಸರಃ ।
ತತ್ರಾಹಮಭವಂ ಹಂಸೀ ಪೂರ್ವಜನ್ಮನಿ ಕರ್ಮತಃ ॥ ೧೫೫

ಸಾಹಮಬ್ಧಿತಟಾಜ್ಜಾತು ತಸ್ಮಿಂಶ್ಚಂದನಪಾದಪೇ ।
ಅಕಾರ್ಷಂ ರಾಜಹಂಸೇನ ಸ್ವೇನ ಭರ್ತ್ರಾ ಸಹಾಲಯಮ್ ॥ ೧೫೬

ತತ್ರಾಲಯೇ ವಸಂತ್ಯಾ ಮೇ ಪ್ರಜಾತಾನ್ಪೋತಕಾನ್ ಸುತಾನ್ ।
ಅಕಸ್ಮಾದೇತ್ಯ ಬಲವಾನ್ ಸಮುದ್ರೋರ್ಮಿರಪಾಹರತ್ ॥ ೧೫೭

ಹೃತೇಷ್ವಪತ್ಯೇಷ್ವೋಘೇನ ಕ್ರಂದಂತ್ಯಹಮನಶ್ನತೀ ।
ಆಸಂ ಶುಚಾಬ್ಧಿತೀರಸ್ಥ ಶಿವಲಿಂಗಾಗ್ರವರ್ತಿನೀ ॥ ೧೫೮

ತತಃ ಸ ರಾಜಹಂಸೋ ಮಾಮುಪೇತ್ಯ ಪತಿರಭ್ಯಧಾತ್ ।
ಉತ್ತಿಷ್ಠ ಕಿಮಪತ್ಯಾನಿ ವ್ಯತೀತಾನ್ಯನುಶೋಚಸಿ ॥ ೧೫೯

೧೬೦. ನಮಗೆ ಇನ್ನು ಮುಂದೆಯೂ ಮರಿಗಳಾಗುತ್ತವೆ. ಬದುಕಿದ್ದವರು ಎಲ್ಲವನ್ನೂ ಪಡೆಯುತ್ತಾರೆ.' ಅವನ ಈ ಮಾತು ಬಾಣದಂತೆ ನನ್ನ ಹೃದಯವನ್ನು ಇರಿಯಿತು. ಆಗ ನಾನು ಚಿಂತಿಸಿದೆ

೧೬೧. ಈ ಪಾಪಿ ಗಂಡಸರಿಗೆ ಧಿಕ್ಕಾರ. ಹೆಂಡಂದಿರು ಎಷ್ಟು ಭಕ್ತಿಯಿಂದಿದ್ದರೂ ಇವರಿಗೆ ಎಳೆ ಮಕ್ಕಳ ಬಗ್ಗೆ ಕೂಡ ಪ್ರೀತಿಯೂ ಇಲ್ಲ, ಕರುಣೆಯೂ ಇಲ್ಲ.

೧೬೨-೬೪. ಆದ್ದರಿಂದ ನನಗೆ ಈ ಗಂಡನೇಕೆ? ದುಃಖಿಯಾಗಿರುವ ಈ ಶರೀರವಾದರೂ ಏಕೆ ? ಎಂದು ಆಲೋಚಿಸಿ ಶಿವನಿಗೆ ವಂದಿಸಿ ಅವನನ್ನು ಭಕ್ತಿಯಿಂದ ಹೃದಯದಲ್ಲಿಟ್ಟುಕೊಂಡು ನನ್ನ ಪತಿ ಹಂಸವು ನೋಡುತ್ತಿರುವಂತೆಯೇ ಮುಂದಿನ ಜನ್ಮದಲ್ಲಿ ಪೂರ್ವಜನ್ಮದ ಸ್ಮರಣೆಯುಳ್ಳ ರಾಜಕುಮಾರಿಯಾಗುವಂತಾಗಲಿ ಎಂದು ಸಂಕಲ್ಪಿಸಿ ಸಮುದ್ರದಲ್ಲಿ ನನ್ನ ಶರೀರವನ್ನು ಅರ್ಪಿಸಿದೆ. ಆದ್ದರಿಂದ ಗೆಳತಿ, ನಾನು ಈ ಜನ್ಮದಲ್ಲಿ ಹೀಗಾಗಿದ್ದೇನೆ

೧೬೫. ನನ್ನ ಆ ಹಿಂದಿನ ಜನ್ಮದಲ್ಲಿ ಗಂಡನ ಕ್ರೂರ ಸ್ವಭಾವವು ನನ್ನ ನೆನಪಿನಲ್ಲೇ ಬೆಳೆದು ನನಗೆ ಯಾವ ಗಂಡಿನ ಬಗ್ಗೆಯೂ ಮನಸ್ಸಿನಲ್ಲಿ ಪ್ರೀತಿಯೂ ಕಾಣುವುದಿಲ್ಲ.

೧೬೬ ಹಾಗಾಗಿ ನಾನು ಮದುವೆಯನ್ನು ಬಯಸುತ್ತಿಲ್ಲ. ಇದನ್ನು ಮೀರಿದ್ದು ವಿಧಿಗೆ ಸೇರಿದ್ದು ಎಂದು ರಾಜಕುಮಾರಿಯ ನನ್ನ ಮಗಳಿಗೆ ಗುಟ್ಟಿನಲ್ಲಿ ಹೇಳಿದ್ದಾಳೆ.

---

ಅನ್ಯಾನಿ ನೌ ಭವಿಷ್ಯಂತಿ ಸರ್ವಂ ಜೀವದ್ಭಿರಾಪ್ಯತೇ ।
ಇತಿ ತದ್ವಾಕ್ಶರೇಣಾಹಂ ಹೃದಿ ವಿದ್ಧಾ ವ್ಯಚಿಂತಯಮ್ ॥ ೧೬೦

ಧಿಗಹೋ ಪುರುಷಾಃ ಪಾಪಾಃ ಬಾಲಾಪತ್ಯೇಷ್ವಪೀದೃಶಾಃ ।
ನಿಃಸ್ನೇಹಾ ನಿಷ್ಕೃಪಾಶ್ಚೈವ ಸ್ತ್ರೀಷು ಭಕ್ತಿಮತೀಷ್ವಪಿ ॥ ೧೬೧

ತನ್ಮೇ ಕಿಮಮುನಾ ಪತ್ಯಾ ಕಿಂ ವಾ ದೇಹೇನ ದುಃಖಿನಾ ।
ಇತ್ಯಾಲೋಚ್ಯ ಹರಂ ನತ್ವಾ ಕೃತ್ವಾ ಭಕ್ತ್ಯಾ ಚ ತಂ ಹೃದಿ ॥ ೧೬೨

ತತ್ರೈವ ಪುರತಸ್ತಸ್ಯ ಪತ್ಯುರ್ಹಂಸಸ್ಯ ಪಶ್ಯತಃ ।
ಜಾತಿಸ್ಮರಾ ರಾಜಪುತ್ರೀ ಭೂಯಾಸಂ ಜನನಾಂತರೇ ॥ ೧೬೩

ಇತಿ ಸಂಕಲ್ಪ್ಯ ತತ್ಕ್ಷಿಪ್ತಂ ಶರೀರಂ ಜಲಧೌ ಮಯಾ ।
ತತೋಽಹಂ ಸಖಿ ಜಾತಾದ್ಯ ತಥಾಭೂತೇಹ ಜನ್ಮನಿ ॥ ೧೬೪

ಪೂರ್ವಜಾತೌ ಚ ತಸ್ಯಾಂ ತಾಂ ಭರ್ತುಸ್ತಸ್ಯ ನೃಶಂಸತಾಮ್ ।
ಸಂಸ್ಮರಂತ್ಯಾ ನ ಕಸ್ಮಿಂಶ್ಚಿದ್ವರೇ ರಜ್ಯತಿ ಮೇ ಮನಃ ॥ ೧೬೫

ಅತೋ ವಿವಾಹಂ ನೇಚ್ಛಾಮಿ ದೈವಾಯತ್ತಮತಃಪರಮ್ ।
ಇತ್ಯುಕ್ತಂ ರಾಜಸುತಯಾ ಮತ್ಸುತಾಯೈ ತಯಾ ರಹಃ ॥ ೧೬೬

೧೬೭ ನನ್ನ ಮಗಳು ಬಂದು ಇದನ್ನು ನನಗೆ ಬಣ್ಣಿಸಿ ಹೇಳಿದಳು. ನೀನು ಕೇಳಿದ್ದರಿಂದ ಇದನ್ನೇ ನಿನಗೆ ಹೇಳಿದ್ದೇನೆ.

೧೬೮–೧೬೯. ಈ ರಾಜಸುತೆಯು ನಿನ್ನ ಮಡದಿಯೇ ಆಗಲಿದ್ದಾಳೆ. ಏಕೆಂದರೆ ಎಲ್ಲ ವಿದ್ಯಾಧರ ಚಕ್ರವರ್ತಿಯಾಗಲಿರುವವನ ರಾಣಿ ಇವಳೆಂದು ಶಿವನು ಈ ಹಿಂದೆಯೇ ಹೇಳಿದ್ದಾನೆ. ತಿಲಕ ಮುಂತಾದವುಗಳಿಂದ ನೀನು ಅಂಥ ಲಕ್ಷಣಗಳುಳ್ಳವನಾಗಿ ನನಗೆ ಕಂಡುಬರುತ್ತಿದ್ದೀಯೆ.

೧೭೦. ಆ ಉದ್ದೇಶಕ್ಕೋಸ್ಕರವೇ ವಿಧಿಯು ನಿನ್ನನ್ನು ಇಲ್ಲಿಗೆ ಕರೆತಂದಿರಬೇಕು. ಏಳು, ನಮ್ಮ ಮನೆಯಲ್ಲಿ ಏನಾಗಲಿದೆಯೆಂದು ನೋಡೋಣ.'

೧೭೧. ಹೀಗೆಂದು ಆ ಮದುಕಿಯು ಅವನಿಗೆ ಊಟವನ್ನು ನೀಡಿದ ನಂತರ ನರವಾಹನದತ್ತನು ಸೋಮುಖನೊಂದಿಗೆ ಆ ರಾತ್ರಿಯನ್ನು ಅಲ್ಲಿ ಕಳೆದನು.

೧೭೨–೧೭೩. ಬೆಳಗಾದ ಮೇಲೆ ವತ್ಸೇಶ್ವರನ ಮಗನಾದ ನರವಾಹನದತ್ತನು ಗೋಮುಖನ ಜೊತೆ ಗುಟ್ಟಾಗಿ ಮಾಡಬೇಕಾದುದನ್ನು ಗೊತ್ತುಪಡಿಸಿಕೊಂಡು ದೊಡ್ಡ ವ್ರತಧಾರಿಯ ವೇಷವನ್ನು ಹಾಕಿಕೊಂಡು ಗೋಮುಖನನ್ನೂ ಕರೆದುಕೊಂಡು ರಾಜನ ಮನೆಯ ಬಾಗಿಲಿನ ಬಳಿ ಹೋಗಿ ಜನರೆಲ್ಲರೂ ಗಮನಿಸುವಂತೆ "ಎಲೈ ಹಂಸಿಯೇ, ಎಲೈ ಹಂಸಿಯೇ' ಎಂದು ಮತ್ತೆ ಮತ್ತೆ ಕರೆಯುತ್ತಾ ಸುತ್ತಾಡಿದನು.

---

ತಯಾ ಮತ್ಸುತಯಾಪ್ಯೇತನ್ಮಹ್ಯಮಾಗತ್ಯ ವರ್ಣಿತಮ್ ।
ತದೇವಂ ತೇ ಮಯಾ ಖ್ಯಾತಂ ಪುತ್ರ ಯತ್ಪೃಷ್ಟವಾನಸಿ ॥ ೧೬೭

ತವೈವ ಭಾವಿನೀ ಭಾರ್ಯಾ ನೂನಂ ಚೈಷಾ ನೃಪಾತ್ಮಜಾ ।
ಸರ್ವವಿದ್ಯಾಧರಾಣಾಂ ಹಿ ಭವಿಷ್ಯಚ್ಚಕ್ರವರ್ತಿನಃ ॥ ೧೬೮

ಮಹಿಷೀಯಂ ಸಮಾದಿಷ್ಟಾ ಪೂರ್ವಂ ದೇವೇನ ಶಂಭುನಾ ।
ತಲ್ಲಕ್ಷಣೈಶ್ಚ ಯುಕ್ತಂ ತ್ವಾಂ ಪಶ್ಯಾಮಿ ತಿಲಕಾದಿಭಿಃ ॥ ೧೬೯

ಕಿಂಸ್ವಿತ್ತದರ್ಥಮಾನೀತಃ ಕೋಽಪಿ ತ್ವಮಿಹ ವೇಧಸಾ ।
ಉತ್ತಿಷ್ಠ ತಾವನ್ಮದ್ಗೇಹೇ ದ್ರಕ್ಷ್ಯಾಮಃ ಕಿಂ ಭವಿಷ್ಯತಿ ॥ ೧೭೦

ಇತ್ಯುಕ್ತ್ವೋಪಹೃತಾಹಾರೋ ವೃದ್ಧಯಾತ್ರ ತಯಾ ನಿಶಾಮ್ ।
ನರವಾಹನದತ್ತಸ್ತಾಮನೈಷೀದ್ಗೋಮುಖಾನ್ವಿತಃ ॥ ೧೭೧

ಪ್ರಾತಃ ಸಂಮಂತ್ರ್ಯ ಕಾರ್ಯಂ ಚ ಗೋಮುಖೇನ ಸಮಂ ರಹಃ ।
ಮಹಾವ್ರತಿಕವೇಷಂ ಚ ಕೃತ್ವಾ ವತ್ಸೇಶ್ವರಾತ್ಮಜಃ ॥ ೧೭೨

ತದ್ದ್ವಿತೀಯೋಽತ್ರ ತು ಹಾ ಹಂಸಿ ಹಾ ಹಂಸೀತಿ ವದನ್ಮುಹುಃ ।
ಗತ್ವಾ ರಾಜಕುಲದ್ವಾರಿ ಬಭ್ರಾಮ ಜನತೇಕ್ಷಿತಃ ॥ ೧೭೩

೧೭೪. ಅಂತಹ ಸ್ಥಿತಿಯಲ್ಲಿ ಅವನನ್ನು ಕಂಡ ಚೇಟಿಯರು ಅಚ್ಚರಿಗೊಂಡು ಹೋಗಿ ರಾಜಕುಮಾರಿ ಕರ್ಪೂರಿಕೆಗೆ ಹೀಗೆಂದರು.

೧೭೫. "ರಾಜಕುಮಾರಿ ! ಸಿಂಹದ್ವಾರದಲ್ಲಿ ಒಬ್ಬ ಯುವಕನಾದ ಮಹಾವ್ರತಿಯನ್ನು ನೋಡಿದೆವು. ಅವನು ಸೌಂದರ್ಯದಲ್ಲಿ ಸದ್ವಿತೀಯನಾದರೂ (ಇನ್ನೊಬ್ಬನೊಡನೆ ಕೂಡಿದ್ದರೂ) ಅದ್ವಿತೀಯನಾಗಿದ್ದಾನೆ. (ಅವನಿಗೆ ಸರಿಸಾಟಿ ಇಲ್ಲ).

೧೭೬. ಸ್ತ್ರೀಯರಿಗೆ ಮಹಾಮೋಹವನ್ನುಂಟುಮಾಡುವ "ಎಲೈ ಹಂಸಿ, ಎಲೈ ಹಂಸಿ' ಎಂಬ ಅದ್ಭುತ ಮಂತ್ರವನ್ನು ಹಗಲೂ ರಾತ್ರಿ ಹೇಳುತ್ತಾನೆ.

೧೭೭. ಅದನ್ನು ಕೇಳಿ ಹಿಂದಿನ ಜನ್ಮದಲ್ಲಿ ಹಂಸಿಯಾಗಿದ್ದ ಆ ರಾಜಕುಮಾರಿಯು ಕುತೂಹಲಹುಟ್ಟಿ ಅಂತಹ ಚೆಲುವನಾದ ಆತನನ್ನು ಸಖಿಯರ ಮೂಲಕ ತನ್ನ ಬಳಿಗೆ ಕರೆಸಿಕೊಂಡಳು.

೧೭೮. ಶಿವನನ್ನು ಒಲಿಸಿಕೊಳ್ಳಲು ಬಂದ ವ್ರತನಿಷ್ಠನಾದ ಅವನು ಅದ್ಭುತವಾದ ಸೌಂದರ್ಯದಿಂದ ಹೊಸ ಮನ್ಮಥನಂತಿದ್ದನು.

೧೭೯. ಆಶ್ಚರ್ಯದಿಂದ ಕಣ್ಣುಗಳನ್ನು ಅರಳಿಸಿಕೊಂಡು ಅವನನ್ನೇ ನೋಡುತ್ತಾ "ಇದೇನು ನೀನು "ಎಲೈ ಹಂಸಿ ಎಲೈ ಹಂಸಿ' ಎಂದು ಇದನ್ನೇ ಏಕೆ ಮತ್ತೆ ಮತ್ತೆ ಹೇಳುತ್ತಿರುವೆ ?' ಎಂದು ಕೇಳಿದಳು.

---

ತಥಾಭೂತಂ ಚ ತಂ ದೃಷ್ಟ್ವಾ ತತ್ರ ಗತ್ವೈವ ಚೇಟಿಕಾಃ ।
ಕರ್ಪೂರಿಕಾಂ ರಾಜಸುತಾಂ ತಾಮವೋಚನ್ಸವಿಸ್ಮಯಾಃ ॥ ೧೭೪

ಸಿಂಹದ್ವಾರೇ ಯುವಾ ದೇವಿ ದೃಷ್ಟೋಽಸ್ಮಾಭಿರ್ಮಹಾವ್ರತೀ ।
ಸದ್ವಿತೀಯೋಽಪಿ ಯೋ ಧತ್ತೇ ಸೌಂದರ್ಯೇಣಾದ್ವಿತೀಯತಾಮ್ ॥ ೧೭೫

ನಾರೀಜನಮಹಾಮೋಹದಾಯಿನಂ ಮಂತ್ರಮದ್ಭುತಮ್ ।
ಉಚ್ಚಾರಯತಿ ಹಾ ಹಂಸಿ ಹಾ ಹಂಸೀತಿ ದಿವಾನಿಶಮ್ ॥ ೧೭೬

ತಚ್ಛ್ರುತ್ವಾ ಪೂರ್ವಹಂಸೀ ಸಾ ರಾಜಪುತ್ರೀ ಸಕೌತುಕಾ ।
ಆನಾಯಯತ್ತಮೇತಾಭಿಸ್ತದ್ರೂಪಂ ಪಾರ್ಶ್ವಮಾತ್ಮನಃ ॥ ೧೭೭

ದದರ್ಶ ಚೈತಮುದ್ದಾಮರೂಪಾಲಂಕೃತಿಭೂಮಿಕಮ್ ।
ಶಂಕರಾರಾಧನೋಪಾತ್ತವ್ರತಂ ನವಮಿವ ಸ್ಮರಮ್ ॥ ೧೭೮

ನಿಜಗಾದ ಚ ಪಶ್ಯಂತೀ ವಿಸ್ಮಯೋತ್ಫುಲ್ಲಯಾ ದೃಶಾ ।
ಕಿಮೇತದೇವ ಹಾ ಹಂಸಿ ಹಾ ಹಂಸೀತ್ಯುಚ್ಯತೇ ತ್ವಯಾ ॥ ೧೭೯

೧೮೦. ಆದರೂ ಅವನು ಮಾತ್ರ "ಎಲೈ ಹಂಸಿ, ಎಲೈ ಹಂಸಿ' ಎಂದಿಷ್ಟೇ ಹೇಳಿದನು. ಆಗ ಅವನೊಂದಿಗಿದ್ದ ಗೋಮುಖನು ಅವಳಿಗೆ ಉತ್ತರವಿತ್ತನು.

೧೮೧. "ರಾಜಕುಮಾರಿಯೇ, ಇದನ್ನು ಸಂಕ್ಷೇಪವಾಗಿ ನಾನು ಹೇಳುತ್ತೇನೆ, ಕೇಳು. ಈತನು ಹಿಂದಿನ ಜನ್ಮದಲ್ಲಿ ಕರ್ಮಕ್ಕೆ ಅನುಗುಣವಾಗಿ ಹಂಸವಾಗಿದ್ದನು.

೧೮೨. ಅಲ್ಲಿ ಇವನು ಸಮುದ್ರದ ದಂಡೆಯ ಬಳಿಯ ದೊಡ್ಡ ಸರೋವರದ ದಡದಲ್ಲಿದ್ದ ಶ್ರೀಗಂಧದ ಮರವೊಂದರಲ್ಲಿ ಮನೆಮಾಡಿಕೊಂಡು ಹಂಸಿಯೊಂದಿಗೆ ಜೀವಿಸುತ್ತಿದ್ದನು.

೧೮೩. ಅಲ್ಲಿ ವಿಧವಶದಿಂದಾಗಿ ಇವರ ಮರಿಗಳೆಲ್ಲವನ್ನೂ ಸಮುದ್ರದ ಅಲೆಯು ಕೊಚ್ಚಿಕೊಂಡು ಹೋಯಿತು. ಶೋಕಾರ್ತಳಾದ ಇವನ ಮಡದಿಯು ಸಮುದ್ರದಲ್ಲಿ ಆತ್ಮಾರ್ಪಣೆ ಮಾಡಿಕೊಂಡಿತು.

೧೮೪. ಆಗ ಈತನು ಆಕೆಯ ವಿಯೋಗದಿಂದ ವಿಹ್ವಲನಾಗಿ ಪಕ್ಷಿಜನ್ಮದಲ್ಲಿ ವಿರಕ್ತಿಹೊಂದಿ ತನ್ನ ಶರೀರವನ್ನು ತ್ಯಜಿಸಬಯಸಿ ಮನಸ್ಸಿನಲ್ಲಿ ಸಂಕಲ್ಪಮಾಡಿದನು.

೧೮೫. ಮುಂದಿನ ಜನ್ಮದಲ್ಲಿ ನಾನು ಹಿಂದಿನ ಜನ್ಮದ ನೆನಪುಳ್ಳ ರಾಜಕುಮಾರನಾಗಿ ಹುಟ್ಟುವಂತಾಗಲಿ. ಇವಳೂ ಜಾತಿಸ್ಮರಳಾಗಿ ಮುಂದಿನ ಜನ್ಮದಲ್ಲಿ ನನ್ನ ಮಡದಿಯಾಗಲಿ.

---

ಏವಂ ತಯೋಕ್ತೇಽಪಿ ತದಾ ಹಾ ಹಂಸೀತ್ಯೇವ ಸೋಽಬ್ರವೀತ್ ।
ತತಃ ಸಹಸ್ಥಿತಸ್ತಸ್ಯ ಗೋಮುಖಃ ಪ್ರತ್ಯುವಾಚ ತಮ್ ॥ ೧೮೦
ಅಹಂ ತೇ ಕಥಯಾಮ್ಯೇತತ್ ಶೃಣು ದೇವಿ ಸಮಾಸತಃ ।
ಪೂರ್ವಜನ್ಮನಿ ಹಂಸೋಽಯಮಭವತ್ ಕರ್ಮಯೋಗತಃ ॥ ೧೮೧
ತತ್ರೈಷ ಜಲಧೇಸ್ತೀರೇ ಮಹತಃ ಸರಸಸ್ತಟೇ ।
ಕೃತಾಲಯಃ ಸಮಂ ಹಂಸ್ಯಾ ತಸ್ಥೌ ಚಂದನಪಾದಪೇ ॥ ೧೮೨
ತಸ್ಮಿನ್ ದೈವಾದಪತ್ಯೇಷು ಸಮುದ್ರೋರ್ಮಿಹೃತೇಷು ಸಾ ।
ಏತಸ್ಯ ಹಂಸೀ ಶೋಕಾರ್ತಾ ತತ್ರೈವಾತ್ಮಾನಮಕ್ಷಿಪತ್ ॥ ೧೮೩
ತತೋಽಸೌ ತದ್ವಿಯೋಗಾರ್ತಃ ಪಕ್ಷಿಜಾತೌ ವಿರಕ್ತಿಮಾನ್ ।
ತ್ಯಕ್ತುಕಾಮಃ ಶರೀರಂ ತತ್ಸಂಕಲ್ಪಮಕರೋದ್ ಹೃದಿ ॥ ೧೮೪
ಜಾತಿಸ್ಮರೋಽಹಂ ಭೂಯಾಸಂ ರಾಜಪುತ್ರೋಽನ್ಯಜನ್ಮನಿ ।
ಏಷಾ ಚ ತತ್ರ ಮೇ ಭಾರ್ಯಾ ಭೂಯಾಜ್ಜಾತಿಸ್ಮರಾ ಸತೀ ॥ ೧೮೫

೧೭೬ ಹೀಗೆ ಸಂಕಲ್ಪಿಸಿ ಶಿವನನ್ನು ಸ್ಮರಿಸುತ್ತಾ ವಿರಹದ ಬೆಂಕಿಯಿಂದ ಬೆಂದು ಹೋದ ಆ ಶರೀರದೊಡನೆ ಸಮುದ್ರಕ್ಕೆ ಬಿದ್ದನು.

೧೭೭ ಆಮೇಲೆ ಇವನು ಕೌಶಾಂಬಿಯಲ್ಲಿ ವತ್ಸರಾಜನ ಮಗನಾಗಿ ಹುಟ್ಟಿ ಜಾತಿಸ್ಮರನಾಗಿದ್ದಾನೆ. ಇದರ ಹೆಸರು ನರವಾಹನದತ್ತ

೧೭೮. "ಇವನು ವಿದ್ಯಾಧರರ ಚಕ್ರವರ್ತಿಯಾಗಲಿದ್ದಾನೆ" ಎಂದು ಇವನು ಹುಟ್ಟಿದ ಕೂಡಲೇ ದಿವ್ಯವಾಣಿಯು ಸ್ಪಷ್ಟವಾಗಿ ಹೇಳಿದೆ.

೧೭೯. ಯುವರಾಜನಾಗಿದ್ದ ಇವನಿಗೆ ತಂದೆಯು, ದಿವ್ಯ ಸ್ತ್ರೀಯಾದರೂ ಕಾರಣಾಂತರದಿಂದ ಇಲ್ಲಿ ಜನಿಸಿರುವ ಮದನಮಂಚುಕೆಯನ್ನು ತಂದುಕೊಂಡು ಮದುವೆ ಮಾಡಿದ್ದಾನೆ

೧೮೦. ಆಮೇಲೆ ಹೇಮಪ್ರಭನೆಂಬ ವಿದ್ಯಾಧರಾಧಿಪನ ಮಗಳಾದ ರತ್ನಪ್ರಭೆಯೆಂಬ ಕನ್ಯೆಯು ತಾನೇ ಬಂದು ಇವನನ್ನು ವರಿಸಿದ್ದಾಳೆ.

೧೮೧. ಆದರೂ ಈತನು ಆ ಹಂಸಿಯನ್ನು ನೆನಸಿಕೊಂಡು ನೆಮ್ಮದಿಯನ್ನು ಕಳೆದುಕೊಂಡಿದ್ದಾನೆ. ಇದನ್ನು ಬಾಲ್ಯದಲ್ಲೇ ಇವನ ಸೇವಕನಾಗಿರುವ ನನಗೆ ಹೇಳಿದ್ದಾನೆ

೧೮೨. ನನ್ನೊಂದಿಗೆ ಬೇಟೆಗೆಂದು ಕಾಡಿಗೆ ಬಂದಾಗ ದೈವಯೋಗದಿಂದ ಇವನಿಗೆ ಯಾರೋ ಸಿದ್ಧತಾಪಸಿಯೋರ್ವಳ ಭೇಟಿಯಾಯಿತು.

---

ಇತಿ ಸಂಕಲ್ಪ್ಯ ತಂ ದೇಹಂ ತದಾ ಸಂಸ್ಮೃತ್ಯ ಶಂಕರಮ್ ।
ವಿರಹಾನಲಸಂತಪ್ತಂ ಸಮುದ್ರಾಂಭಸ್ಯಪಾತಯತ್ ॥ ೧೭೬

ತತೋಽಯಂ ವತ್ಸರಾಜಸ್ಯ ಕೌಶಾಂಬ್ಯಾಂ ತನಯೋಽಧುನಾ ।
ನರವಾಹನದತ್ತಾಖ್ಯೋ ಜಾತೋ ಜಾತಿಸ್ಮರಃ ಶುಭೇ ॥ ೧೭೭

ಅಸೌ ವಿದ್ಯಾಧರೇಂದ್ರಾಣಾಂ ಚಕ್ರವರ್ತೀ ಭವಿಷ್ಯತಿ ।
ಇತಿವಾಗುದಭೂದ್ದಿವ್ಯಾ ಜಾತಸ್ಯಾಸ್ಯ ಸ್ಫುಟಂ ತದಾ ॥ ೧೭೮

ಕ್ರಮೇಣ ಯೌವರಾಜ್ಯಸ್ಥಃ ಪಿತ್ರಾಯಂ ಪರಿಣಾಯಿತಃ ।
ದಿವ್ಯಾಂ ಕಾರಣಸಂಭೂತಾಂ ದೇವೀಂ ಮದನಮಂಚುಕಾಮ್ ॥ ೧೭೯

ತತೋ ಹೇಮಪ್ರಭಾಖ್ಯಸ್ಯ ವಿದ್ಯಾಧರಪತೇಃ ಸುತಾ ।
ಏತ್ಯ ಸ್ವಯಂ ವೃತವತೀ ಕನ್ಯಾ ರತ್ನಪ್ರಭೇತ್ಯಮುಮ್ ॥ ೧೮೦

ತಥಾಪಿ ತಾಂ ಸ್ಮರನ್ ಹಂಸೀಂ ನಾಯಂ ಭಜತಿ ನಿರ್ವೃತಿಮ್ ।
ಏತಚ್ಚ ಬಾಲಭೃತ್ಯಾಯ ಮಹ್ಯಮೇತೇನ ವರ್ಣಿತಮ್ ॥ ೧೮೧

ಅಥಾಸ್ಯ ಮೃಗಯಾಯಾತಸ್ಯಾಸೀತ್ ಸಂದರ್ಶನಂ ವನೇ ।
ಕಯಾಪಿ ಸಿದ್ಧತಾಪಸ್ಯಾ ಮದ್ದ್ವಿತೀಯಸ್ಯ ದೈವತಃ ॥ ೧೮೨

೧೯೩. ಹೀಗೆಯೇ ಮಾತನಾಡುತ್ತಾ ಅವಳು ಅನುಗ್ರಹಪೂರ್ವಕವಾಗಿ ಇವನಿಗೆಂದಳು. "ಮಗನೇ, ಕರ್ಮದ ಯೋಗದಿಂದಾಗಿ ಹಿಂದೆ ಮನ್ಮಥನು ಹಂಸರೂಪವನ್ನು ಧರಿಸಿದ್ದನು.

೧೯೪. ಶಾಪದಿಂದಾಗಿ ಕೆಳಗೆ ಬಂದಿದ್ದ ದಿವ್ಯಸ್ತ್ರೀಯೊಬ್ಬಳು, ಸಮುದ್ರದ ದಡದಲ್ಲಿದ್ದ ಶ್ರೀಗಂಧದ ಮರದಲ್ಲಿ ವಾಸಿಸುತ್ತಿದ್ದ ಅವನಿಗೆ, ಹಂಸಿಯ ರೂಪದಲ್ಲಿ ಪ್ರೀತಿಯ ಹೆಂಡತಿಯಾಗಿದ್ದಳು.

೧೯೫. ಸಮುದ್ರದ ದಡದ ನೀರಿನಿಂದ ಮರಿಗಳ ಅಪಹರಣವಾಗಿ ಆ ದುಃಖದಲ್ಲಿ ಹಂಸಿಯು ಸಮುದ್ರಕ್ಕೆ ಬೀಳಲು ಆ ಹಂಸವೂ ಅಲ್ಲಿಯೇ ಸಮುದ್ರಕ್ಕೆ ಬಿದ್ದಿತು.

೧೯೬ ಅದೇ ನೀನು ಈಗ ಶಂಭುವಿನ ಅನುಗ್ರಹದಿಂದ ವತ್ಸರಾಜನ ಮಗನಾಗಿ ಹುಟ್ಟಿದ್ದೀಯೆ. ನಿನ್ನ ಹಳೆಯ ಜನ್ಮವನ್ನು ನೆನಪಿಸಿಕೊಳ್ಳುವ ನೀನು ಜಾತಿಸ್ಮರನಾಗಿದ್ದೀಯೆ.

೧೯೭ ಆ ಹಂಸಿಯು ಈಗ ಹೀಗೆಯೇ ಸಮುದ್ರದ ತೀರದಲ್ಲಿರುವ ಕರ್ಪೂರಸಂಭವ ನಗರದಲ್ಲಿ ಕರ್ಪೂರಿಕೆಯೆಂಬ ರಾಜಕುಮಾರಿಯಾಗಿ ಹುಟ್ಟಿದ್ದಾಳೆ.

೧೯೮. ಆದ್ದರಿಂದ ಮಗನೇ, ನೀನು ಅಲ್ಲಿಗೆ ಹೋಗು. ನಿನ್ನ ಪ್ರೀತಿಯ ಮಡದಿಯನ್ನು ಪಡೆಯಲಿರುವೆ.' ಇಷ್ಟು ಹೇಳಿದ ಆ ಸಿದ್ಧತಾಪಸಿಯು ಆಕಾಶಕ್ಕೆ ಜಿಗಿದು ಕಣ್ಮರೆಯಾದಳು.

---

ಕಥಾಪ್ರಸಂಗಾತ್ ಸಾ ಚೈತಮೇವಂ ಸಾನುಗ್ರಹಾಬ್ರವೀತ್ ।
ಕರ್ಮಯೋಗಾತ್ಪುರಾ ಪುತ್ರ ಕಾಮೋ ಹಂಸತ್ವಮಾಗತಃ ॥ ೧೯೩

ತಸ್ಯ ಚಾಂಬುಧಿತೀರಸ್ಥಚಂದನದ್ರುಮವಾಸಿನಃ ।
ಪ್ರಿಯಾ ಭಾರ್ಯಾಭವದ್ಧಂಸೀ ದಿವ್ಯಸ್ತ್ರೀ ಶಾಪತಶ್ಚ್ಯುತಾ ॥ ೧೯೪

ವೇಲಾಜಲಹೃತಾಪತ್ಯಶೋಕಾತ್ತಸ್ಯಾಂ ಚ ವಾರಿಧೌ ।
ಕ್ಷಿಪ್ತಾತ್ಮನಿ ಸ ಹಂಸೋಽಪಿ ತತ್ರೈವಾತ್ಮಾನಮಕ್ಷಿಪತ್ ॥ ೧೯೫

ಸೋಽದ್ಯ ಶಂಭೋಃ ಪ್ರಸಾದಾತ್ ತ್ವಂ ಜಾತೋ ವತ್ಸೇಶ್ವರಾತ್ಮಜಃ ।
ಪೂರ್ವಜಾತಿಂ ಚ ತಾಂ ವತ್ಸ ವೇತ್ಸಿ ಜಾತಿಸ್ಮರೋ ಹ್ಯಸಿ ॥ ೧೯೬

ಸಾ ಹಂಸ್ಯಪ್ಯೇವಮೇವಾಬ್ಧೇಃ ಪಾರೇ ಕರ್ಪೂರಸಂಭವೇ ।
ಪುರೇ ಕರ್ಪೂರಿಕಾ ನಾಮ ಜಾತಾ ರಾಜಸುತಾಧುನಾ ॥ ೧೯೭

ತದ್ಗಚ್ಛ ತತ್ರ ಪುತ್ರ ತ್ವಂ ಪ್ರಿಯಾಂ ಭಾರ್ಯಾಮವಾಪ್ಸ್ಯಸಿ ।
ಇತ್ಯುಕ್ತ್ವಾ ಸಾ ಖಮುತ್ಪತ್ಯ ತಿರೋಽಭೂತ್ ಸಿದ್ಧತಾಪಸೀ ॥ ೧೯೮

೧೯೯. ನಮ್ಮ ಈ ಒಡೆಯನು ವಿಷಯವನ್ನು ತಿಳಿದ ಕೂಡಲೇ ಅಲ್ಲಿಂದ ನಮ್ಮೊಂದಿಗೆ ಇಲ್ಲಿಗೆ ಹೊರಟುಬಿಟ್ಟನು.

೨೦೦. ನಿನ್ನ ಪ್ರೀತಿಯಿಂದ ಆಕರ್ಷಿತನಾಗಿ,ತನ್ನ ಬಾಳನ್ನೇ ಪಣವಾಗಿಟ್ಟುಕೊಂಡು ನೂರಾರು ಕಾಡುಗಳನ್ನು ದಾಟಿ ಸಮುದ್ರದ ದಡದ ದೇಶವೊಂದನ್ನು ತಲುಪಿದನು.

೨೦೧. ಅಲ್ಲಿ ಹೇಮಪುರದಲ್ಲಿ ರಾಜ್ಯಧರನೆಂಬ ಬಡಗಿಯು ಸಿಕ್ಕಿ ಯಂತ್ರವಿಮಾನವನ್ನು ನೀಡಿದನು.

೨೦೨. ಹೆದರಿಕೆ ಹುಟ್ಟಿಸುವಂತಿದ್ದ ಹಾಗೂ ಸಾಹಸವೇ ಮೈದಳೆದು ಬಂದಂತಿದ್ದ ಆ ವಿಮಾನವನ್ನು ಹತ್ತಿ ನಾವಿಬ್ಬರೂ ಸಮುದ್ರದ ಕಾಡನ್ನು ದಾಟಿ ಈ ಊರನ್ನು ತಲುಪಿದೆವು.

೨೦೩. ಈ ಕಾರಣದಿಂದಲೇ ರಾಜಕುಮಾರಿ ನನ್ನ ಈ ಒಡೆಯನು ನಿನ್ನ ಬಳಿಗೆ ಬಂದಾಗಿನಿಂದ "ಎಲ್ಲೈ ಹಂಸಿ, ಎಲ್ಲೈ ಹಂಸಿ' ಎನ್ನುತ್ತಾ ಭ್ರಾಂತನಾಗಿದ್ದಾನೆ.

೨೦೪. ಇದೀಗ ನಿನ್ನ ಮುಖವೆಂಬ ವಿಶಾಲವಾದ ಹುಣ್ಣಿಮೆ ಚಂದ್ರನನ್ನು ಕಂಡದ್ದರಿಂದ ಅಪಾರ ದುಃಖದ ಸಾನ್ನಿಧ್ಯವೆಂಬ ಕತ್ತಲೆಯ ನಾಶವನ್ನು ಅನುಭವಿಸುತ್ತಿದ್ದಾನೆ.

೨೦೫. .......... ಆದ್ದರಿಂದ ನಿನ್ನ ಕಣ್ಣಿನ ನೋಟವೆಂಬ ಕನ್ನೈದಿಲೆಯ ಮಾಲೆಯಿಂದ ಈ ಮಹಾ ಅತಿಥಿಯನ್ನು ಪೂಜಿಸು.

---

ಅಯಂ ಚಾಸ್ಮತ್ಪ್ರಭುರ್ಜ್ಞಾತಪ್ರವೃತ್ತಿಸ್ತತ್ಕ್ಷಣಂ ತತಃ ।
ಇತೋಽಭಿಮುಖಮಾಗಂತುಂ ಪ್ರಾವರ್ತತ ಮಯಾ ಸಹ ॥ ೧೯೯

ತ್ವತ್ಸ್ನೇಹಾಕೃಷ್ಯಮಾಣಶ್ಚ ಪಣೀಕೃತ್ಯ ಸ್ವಜೀವಿತಮ್ ।
ಉತ್ತೀರ್ಯ ಕಾಂತಾರಶತಂ ಪ್ರಾಪ ದೇಶೋಽಂಬುಧೇಸ್ತಟಮ್ ॥ ೨೦೦

ತತ್ರ ಹೇಮಪುರಸ್ಥೇಽಸ್ಮೈ ತಕ್ಷಾ ರಾಜ್ಯಧರಾಭಿದಃ ।
ಮದ್ದ್ವಿತೀಯಾಯ ಮಿಲಿತಃ ಪ್ರಾದಾದ್ಯಂತ್ರವಿಮಾನಕಮ್ ॥ ೨೦೧

ತಸ್ಮಿನ್ನಾರುಹ್ಯ ಭಯದೇ ಹಾ ಮೂರ್ತ ಇವ ಸಾಹಸೇ ।
ಅಬ್ಧಿಕಾಂತಾರಮುಲ್ಲಂಘ್ಯ ಪ್ರಾಪ್ತಾವಾವಾಮಿದಂ ಪುರಮ್ ॥ ೨೦೨

ಏತದರ್ಥಮಸಾವೇವಂ ಹಾ ಹಂಸೀತಿ ವದನ್ನಿಹ ।
ಭ್ರಾಂತೋ ದೇವಿ ಮಮ ಸ್ವಾಮೀ ಯಾವತ್ಪ್ರಾಪ್ತಸ್ತ್ವದಂತಿಕೇ ॥ ೨೦೩

ಇದಾನೀಂ ತ್ವನ್ಮುಖೋದಾರರಾಕಾರಮಣದರ್ಶನಾತ್ ।
ಅಸಂಖ್ಯದುಃಖಸಾಂನಿಧ್ಯತಮೋಪಹ್ನುತಿಮಶ್ನುತೇ ॥ ೨೦೪

———————————————————————|

ತದ್ದೃಷ್ಟಿ ನೀಲನಲಿನಸ್ರಜಾರ್ಚಯ ಮಹಾತಿಥಿಮ್ ॥ ೨೦೫

1 ಟಿಪ್ಪಣಿ: ಇಲ್ಲಿ ೨೦೫ನೆಯ ಶ್ಲೋಕದ ಪ್ರಥಮಾರ್ಧ ಇಲ್ಲ.

೨೦೬. ಹೀಗೆ ಗೋಮುಖನು ಬಣ್ಣ ಕಟ್ಟಿ ಹೇಳಿದ ಮಾತುಗಳನ್ನು ಕೇಳಿದ ಆ ಕರ್ಪೂರಿಕೆಯು ಆ ಸಂದರ್ಭಕ್ಕೆ ಹೊಂದಾಣಿಕೆಯಾಗುತ್ತಿದ್ದ ಆ ಮಾತನ್ನು ಸತ್ಯವೆಂದು ಭಾವಿಸಿದಳು.

೨೦೭. ಅಯ್ಯೋ, ಈ ಆರ್ಯಪುತ್ರನಿಗೆ ನನ್ನ ಮೇಲಣ ಪ್ರೀತಿಯು ನನ್ನಿಂದಾಗಿ ವ್ಯರ್ಥವಾಗಿ ವೈರಾಗ್ಯವು ಉಂಟಾಯಿತು ಎಂದು ಪ್ರೇಮವಶಳಾದ ಅವಳು ತನ್ನಲ್ಲಿಯೇ ವಿಮರ್ಶೆ ಮಾಡಿಕೊಂಡಳು.

೨೦೮. "ನಿಜವಾಗಿಯೂ ಆ ಹಂಸಿಯೇ ನಾನು. ನಾನೇ ಧನ್ಯಳು. ನನ್ನ ಸಲುವಾಗಿ ಆರ್ಯಪುತ್ರನು ಎರಡು ಜನ್ಮಗಳಲ್ಲಿಯೂ ದುಃಖವನ್ನು ಅನುಭವಿಸಿದನು' ಎಂದು ಹೇಳಿದಳು.

೨೦೯. "ಆದ್ದರಿಂದ ನೀವು ಪ್ರೇಮದಿಂದ ಕೊಂಡುಕೊಂಡ ನಿಮ್ಮ ದಾಸಿಯು ನಾನು' ಎಂದು ಹೇಳುತ್ತಾ ಆ ನರವಾಹನದತ್ತನನ್ನು ಸ್ನಾನ ಇತ್ಯಾದಿ ಉಪಚಾರಗಳಿಂದ ಗೌರವಿಸಿದಳು.

೨೧೦. ಆಮೇಲೆ ತನ್ನ ಪರಿವಾರದವರ ಮುಖಾಂತರ ಇದೆಲ್ಲವನ್ನೂ ತನ್ನ ತಂದೆಗೆ ತಿಳಿಯಪಡಿಸಿದಳು. ಅವನು ಅದನ್ನು ತಿಳಿಯುತ್ತಲೇ ಮಗಳ ಬಳಿಗೆ ಬಂದನು.

---

ಏವಂ ವಚೋ ವಿರಚಿತಂ ಗೋಮುಖಸ್ಯ ನಿಶಮ್ಯ ಸಾ ।
ಸಂವಾದಪ್ರತ್ಯಯಾತ್ಸತ್ಯಂ ಮೇನೇ ಕರ್ಪೂರಿಕಾ ತದಾ ॥ ೨೦೬

ಅಹೋ ಮಯ್ಯಾರ್ಯಪುತ್ರಸ್ಯ ಸ್ನೇಹೋಽಮುಷ್ಯ ಮುಧೈವ ಮೇ ।
ವಿರಕ್ತತಾಭೂದಿತ್ಯಂತಃ ಪ್ರೇಮಾರ್ದ್ರಾ ವಿಮಮರ್ಶ ಚ ॥ ೨೦೭

ಉವಾಚ ಚಾಹಂ ಸತ್ಯಂ ಸಾ ಹಂಸೀ ಧನ್ಯಾ ಚ ಯತ್ಕೃತೇ ।
ಏವಂ ಜನ್ಮದ್ವಯೇ ಕ್ಲೇಶಮಾರ್ಯಪುತ್ರೋಽನುಭೂತವಾನ್ ॥ ೨೦೮

ತದಹಂ ವೋಽಧುನಾ ದಾಸೀ ಪ್ರೇಮಕ್ರೀತೇತಿವಾದಿನೀ ।
ನರವಾಹನದತ್ತಂ ತಂ ಸ್ನಾನಾದ್ಯೈಃ ಸಮಮಾನಯತ್ ॥ ೨೦೯

ತತಃ ಪರೀವಾರಮುಖೇನೈತತ್ ಸರ್ವಮಬೋಧಯತ್ ।
ಪಿತರಂ ಸ್ವಂ ಸ ಚೋಪಾಗಾತ್ತದ್ಬುದ್ಧ್ವೈವ ತದಂತಿಕಮ್ ॥ ೨೧೦

೨೧೧–೧೨. ಅಲ್ಲಿ ಮದುವೆಯಾಗಲು ಬಯಸಿದ ಮಗಳನ್ನೂ, ಹಾಗೆಯೇ ಚಿರಕಾಲಾನಂತರ ಬಂದಿರುವ ವಿದ್ಯಾಧರ ಚಕ್ರವರ್ತಿಯ ಲಕ್ಷಣಗಳಿಂದ ಕೂಡಿದ ಯೋಗ್ಯ ವರನಾದ ನರವಾಹನದತ್ತನನ್ನೂ ಕಂಡು ತನ್ನನ್ನು ಕೃಥಾರ್ಥನೆಂದು ಆ ರಾಜನು ಭಾವಿಸಿದನು.

೨೧೩. ಅನಂತರ ನರವಾಹನದತ್ತನಿಗೆ ಪ್ರೀತಿಪೂರ್ವಕವಾಗಿ ಶಾಸ್ತ್ರವಿಧಿಯಂತೆ ತನ್ನ ಮಗಳಾದ ಕರ್ಪೂರಿಕೆಯನ್ನು ಮದುವೆಮಾಡಿಕೊಟ್ಟನು.

೨೧೪. ಅಗ್ನಿಪ್ರದಕ್ಷಿಣೆ ಮಾಡಿದ ಅಳಿಯನಿಗೆ ಪ್ರತಿಯೊಂದು ಪ್ರದಕ್ಷಿಣೆಗೂ ಮೂರು ಕೋಟಿ ಸುವರ್ಣಗಳನ್ನೂ ಅಷ್ಟೇ ಕರ್ಪೂರದ ರಾಶಿಗಳನ್ನೂ ನೀಡಿದನು.

೨೧೫. ಆ ರಾಶಿಗಳು ಪಾರ್ವತಿಯ ಮದುವೆಯನ್ನು ನೋಡಲು ಬಂದಿದ್ದ ಮೇರು–ಕೈಲಾಸಪರ್ವತಗಳೋ ಎಂಬಂತೆ ಶೋಭಿಸುತ್ತಿದ್ದುವು.

೨೧೬. ಮತ್ತೆ ಹತ್ತು ಕೋಟಿ ವಸ್ತ್ರಗಳನ್ನೂ ಅಲಂಕೃತರಾದ ಮುನ್ನೂರು ದಾಸಿಯರನ್ನೂ ಧನ್ಯನಾದ ಕರ್ಪೂರಕ ರಾಜನು ಅವನಿಗೆ ನೀಡಿದನು.

೨೧೭. ಆಮೇಲೆ ನರವಾಹನದತ್ತನು ಪ್ರೀತಿಯೇ ಮೈದಳೆದು ಬಂದಂತಿದ್ದ ಆ ಕರ್ಪೂರಿಕೆಯೊಂದಿಗೆ ಅಲ್ಲಿಯೇ ಇದ್ದನು.

---

ತತ್ರೋತ್ಪನ್ನವಿವಾಹೇಚ್ಛಾಂ ಸುತಾಂ ತಾಂ ತದ್ವರಂ ತಥಾ ।
ನರವಾಹನದತ್ತಂ ತಂ ಸಂಪ್ರಾಪ್ತಮುಚಿತಂ ಚಿರಾತ್ ॥ ೨೧೧

ವಿದ್ಯಾಧರಮಹಾಚಕ್ರವರ್ತಿಲಕ್ಷಣಲಾಂಛಿತಮ್ ।
ದೃಷ್ಟ್ವಾ ಕೃತಾರ್ಥಮಾತ್ಮಾನಂ ಸೋಽಮನ್ಯತ ತದಾ ನೃಪಃ ॥ ೨೧೨

ಪ್ರದದೌ ಚಾತ್ಮಜಾಮೇತಾಂ ತಸ್ಮೈ ಕರ್ಪೂರಿಕಾಂ ತತಃ ।
ನರವಾಹನದತ್ತಾಯ ಯಥಾವಿಧಿ ಸ ಸಾದರಮ್ ॥ ೨೧೩

ಅದಾದಸ್ಮೈ ಚ ಜಾಮಾತ್ರೇ ಪ್ರತಿವಹ್ನಿಪ್ರದಕ್ಷಿಣಮ್ ।
ಕೋಟೀಸ್ತಿಸ್ರಃ ಸುವರ್ಣಸ್ಯ ಕರ್ಪೂರಸ್ಯ ಚ ತಾವತೀಃ ॥ ೨೧೪

ಯದ್ರಾಶಯೋ ಬಭುಸ್ತತ್ರ ಶೋಭಾಂ ದ್ರಷ್ಟುಮಿವಾಗತಾಃ ।
ಗಿರಿಜೋದ್ವಾಹದೃಶ್ವಾನೋ ಮೇರುಕೈಲಾಸಸಾನವಃ ॥ ೨೧೫

ಪುನಸ್ತದ್ವಸ್ತ್ರಕೋಟೀಶ್ಚ ದಶ ದಾಸೀಶತತ್ರಯಮ್ ।
ಸ್ವಲಂಕೃತಂ ದದೌ ಸೋಽಸ್ಮೈ ಕೃತೀ ಕರ್ಪೂರಕೋ ನೃಪಃ ॥ ೨೧೬

ತತಸ್ತಸ್ಥೌ ಕೃತೋದ್ವಾಹಃ ಸ ಕರ್ಪೂರಿಕಯಾ ತಯಾ ।
ನರವಾಹನದತ್ತೋಽತ್ರ ಸಮಂ ಪ್ರೀತ್ಯೇವ ಮೂರ್ತಯಾ ॥ ೨೧೭

೨೧೮. ಮಾಧವೀಲತೆ ಮತ್ತು ವಸಂತೋತ್ಸವಗಳ ಸಮಾಗಮದಂತೆ, ಆ ನೂತನ ವಧೂವರರ ಸಂಗಮವು ಯಾರಿಗೆ ತಾನೇ ಸಂತೋಷ ತಾರದು ?

೨೧೯. ಮೂಂದೊಂದು ದಿನ ಕೃತಕೃತ್ಯನಾದ ನರವಾಹನದತ್ತನು ಪ್ರಿಯೆಯಾದ ಕರ್ಪೂರಿಕೆಯನ್ನು ಕುರಿತು 'ಬಾ, ಕೌಶಾಂಬಿಗೆ ಹೋಗೋಣ'ಎಂದು ಹೇಳಿದನು.

೨೨೦. ಆಗ ಅವಳು "ಹಾಗಾದರೆ ಅದೇ ಅಂತರಿಕ್ಷಗಾಮಿಯಾದ ನಿನ್ನ ವಿಮಾನವನ್ನೇರಿ ಬೇಗನೆ ಹೋಗಬಹುದಲ್ಲ ?

೨೨೧. ಇದೇನಾದರೂ ಸಣ್ಣದಾದರೆ ಇನ್ನೊಂದು ದೊಡ್ಡದನ್ನು ತಯಾರು ಮಾಡಿಸುತ್ತೇನೆ. ಇಲ್ಲಿ ಪ್ರಾಣಧರನೆಂಬ ಯಂತ್ರವಿಮಾನಗಳನ್ನು ಮಾಡುವ ಬಡಗಿಯೊಬ್ಬನಿದ್ದಾನೆ.

೨೨೨. ಯಾವುದೊ ದೂರ ದೇಶದಿಂದ ಬಂದು ತಂಗಿರುವ ಅವನಿಗೆ ಹೇಳಿ ಬೇಗನೆ ಸಜ್ಜುಗೊಳಿಸುತ್ತೇನೆ.' ಹೀಗೆಂದು ಹೇಳಿ ದ್ವಾರಪಾಲಕನನ್ನು ಕರೆಸಿ ಸಾರಥಿಗೆ ಅಪ್ಪಣೆಯಿತ್ತಳು.

೨೨೩. "ನೀನು ಹೋಗಿ ಯಂತ್ರದ ಬಡಗಿಯಾದ ಪ್ರಾಣಧರನಿಗೆ ಹೇಳು. ನಾವು ಹೋಗಲು ದೊಡ್ಡದೊಂದು ಗಗನಗಾಮಿ ವಿಮಾನವನ್ನು ನಿರ್ಮಾಣ ಮಾಡು.'

೨೨೪. ಹೀಗೆ ಸಾರಥಿಯನ್ನು ಕಳಿಸಿಕೊಟ್ಟು ಅವಳು ತಂದೆಯಾದ ರಾಜ ಕರ್ಪೂರಕನಿಗೆ ಚೇಟಿಯ ಮೂಲಕ ತಾನು ಹೊರಡಬೇಕೆಂದಿರುವುದನ್ನು ತಿಳಿಸಿದಳು.

---

ಕಸ್ಯ ನಾಭೂನ್ಮನಃಪ್ರೀತ್ಯೈ ಸ ವಧೂವರಯೋಸ್ತಯೋಃ ।
ಸಂಗಮೋ ಮಾಧವೀವಲ್ಲೀವಸಂತೋತ್ಸವಯೋರಿವ ॥ ೨೧೮

ಏಹಿ ವ್ರಜಾವಃ ಕೌಶಾಂಬೀಮಿತ್ಯನ್ಯೇದ್ಯುಶ್ಚ ಸೋಽಬ್ರವೀತ್ ।
ನರವಾಹನದತ್ತಸ್ತಾಂ ಕೃತೀ ಕರ್ಪೂರಿಕಾಂ ಪ್ರಿಯಾಮ್ ॥ ೨೧೯

ತತಃ ಪ್ರತ್ಯಬ್ರವೀತ್ ಸಾ ತಂ ಯದ್ಯೇವಂ ತತ್‌ಖಗಾಮಿನಾ ।
ತೇನೈವ ತ್ವದ್ವಿಮಾನೇನ ವ್ರಜಾಮಸ್ತ್ವರಿತಂ ನ ಕಿಮ್ ॥ ೨೨೦

ತಚ್ಚೇತ್ ಸ್ವಲ್ಪಂ ತದಪರಂ ವಿಸ್ತೀರ್ಣಂ ಢೌಕಯಾಮ್ಯಹಮ್ ।
ಇಹ ಪ್ರಾಣಧರಾಖ್ಯೋ ಹಿ ತಕ್ಷಾ ಯಂತ್ರವಿಮಾನಕೃತ್ ॥ ೨೨೧

ಆಸ್ತೇ ದೇಶಾಂತರಾಯಾತಸ್ತಚ್ಛೀಘ್ರಂ ಕಾರಯಾಮ್ಯದಃ ।
ಇತ್ಯುಕ್ತ್ವಾ ಸಾ ಪ್ರತೀಹಾರಮಾನಾಯ್ಯ ಕ್ಷತ್ತುರಾದಿಶತ್ ॥ ೨೨೨

ಗತ್ವಾ ತಂ ಯಂತ್ರತಕ್ಷಾಣಂ ವದ ಪ್ರಾಣಧರಂ ಮಹತ್ ।
ವ್ಯೋಮಗಾಮಿ ವಿಮಾನಂ ನಃ ಪ್ರಸ್ಥಾನಾಯೋಪಕಲ್ಪಯ ॥ ೨೨೩

ಏವಂ ವಿಸೃಜ್ಯ ಕ್ಷತ್ತಾರಂ ರಾಜ್ಞೇ ಕರ್ಪೂರಿಕಾಥ ಸಾ ।
ಚೇಟೀಮುಖೇನ ಪಿತ್ರೇ ತಾಂ ಪ್ರಸ್ಥಾನೇಚ್ಛಾಂ ನ್ಯವೇದಯತ್ ॥ ೨೨೪

೨೨೫. ಅದನ್ನು ತಿಳಿದ ಕೂಡಲೇ ಆ ರಾಜನು ಅಲ್ಲಿಗೆ ಬರುವುದಕ್ಕೆ ಮುಂಚೆ ನರವಾಹನದತ್ತನು ಮನಸ್ಸಿನಲ್ಲಿಯೇ ಹೀಗೆ ಆಲೋಚಿಸಿದನು.

೨೨೬. ಈ ಬಡಗಿ ಪ್ರಾಣಧರನು ರಾಜನ ಭಯದಿಂದ ತನ್ನ ಊರನ್ನು ಬಿಟ್ಟು ಓಡಿಹೋದನೆಂದು ಅವನು ಹೇಳಿದ್ದ ರಾಜ್ಯಧರನ ಸೋದರನೆಂಬುದು ನಿಶ್ಚಯ.

೨೨೭. ಹೀಗೆ ಈತನು ಚಿಂತಿಸುತ್ತಿದ್ದಾಗ, ರಾಜನು ವೇಗವಾಗಿ ಅಲ್ಲಿಗೆ ಬಂದನು. ದ್ವಾರಪಾಲಕನೊಂದಿಗೆ ಬಡಗಿ ಪ್ರಾಣಧರನೂ ಅಲ್ಲಿಗೆ ಬಂದನು.

೨೨೮. ಅವನು ಸಾವಿರ ಮನುಷ್ಯರನ್ನು ಅನಾಯಾಸವಾಗಿ ಹೊರಬಲ್ಲ ದೊಡ್ಡ ವಿಮಾನವು ನಿರ್ಮಿತವಾಗಿದೆ ಎಂದು ವಿಜ್ಞಾಪನೆ ಮಾಡಿದನು.

೨೨೯. ಹೀಗೆ ಹೇಳಿದ ಬಡಗಿಗೆ ಒಳ್ಳೆಯದು ಎಂದು ಹೇಳಿ ಗೌರವಿಸಿದ ನರವಾಹನದತ್ತನು ಅವನನ್ನು ಪ್ರೀತಿಯಿಂದ ಕೇಳಿದನು.

೨೩೦. "ದೊಡ್ಡ ದೊಡ್ಡ ವಿವಿಧ ಯಂತ್ರಪ್ರಯೋಗಗಳನ್ನು ತಿಳಿದ ರಾಜ್ಯಧರನ ಅಣ್ಣನಾದ ಪ್ರಾಣಧರನು ನೀನಲ್ಲವೇ !'

೨೩೧. ಆ ಪ್ರಾಣಧರನು ನಮಸ್ಕಾರ ಮಾಡಿ "ಅವನ ಸೋದರನೇ ನಾನು. ಇಬ್ಬರನ್ನೂ ಒಡೆಯರು ಹೇಗೆ ತಿಳಿದಿದ್ದೀರಿ ?' ಎಂದು ಹೇಳಿದನು.

---

ಸ ಚ ಬುದ್ಧ್ವೈವ ತದ್ಯಾವದಾಯಾತ್ಯತ್ರೈವ ಭೂಪತಿಃ ।
ನರವಾಹನದತ್ತೋಽಂತಸ್ತಾವದೇವಮಚಿಂತಯತ್ ॥ ೨೨೫

ತಕ್ಷಾ ರಾಜ್ಯಧರಭ್ರಾತಾ ಸೋಽಯಂ ಪ್ರಾಣಧರೋ ಧ್ರುವಮ್ ।
ರಾಜಭೀತ್ಯಾ ಸ್ವದೇಶಾದ್ಯೋ ವಿದ್ರುತಸ್ತೇನ ವರ್ಣಿತಃ ॥ ೨೨೬

ಇತ್ಯಸ್ಮಿಂಶ್ಚಿಂತಯತ್ಯೇವ ರಾಜ್ಞಿ ಚ ಕ್ಷಿಪ್ರಮಾಗತೇ ।
ಆಗಾತ್ ಪ್ರತೀಹಾರಯುತಸ್ತಕ್ಷಾ ಪ್ರಾಣಧರೋಽತ್ರ ಸಃ ॥ ೨೨೭

ವ್ಯಜಿಜ್ಞಪಚ್ಚ ಸುಮಹದ್ವಿಮಾನಂ ಕೃತಮಸ್ತಿ ಮೇ ।
ಯನ್ಮಾನುಷಸಹಸ್ರಾಣಿ ವಹತ್ಯದ್ಯಾವಹೇಲಯಾ ॥ ೨೨೮

ಇತ್ಯುಕ್ತವಂತಂ ತಕ್ಷಾಣಂ ಸಾಧ್ವಿತ್ಯುಕ್ತ್ವಾಭಿಪೂಜ್ಯ ಚ ।
ನರವಾಹನದತ್ತೋಽಥ ತಂ ಪಪ್ರಚ್ಛ ಸ ಸಾದರಮ್ ॥ ೨೨೯

ಕಚ್ಚಿದ್ರಾಜ್ಯಧರಸ್ಯ ತ್ವಂ ಭ್ರಾತಾ ಪ್ರಾಣಧರೋಽಗ್ರಜಃ ।
ನಾನಾಯಂತ್ರಪ್ರಯೋಗಾಣಾಂ ವೇತ್ತಾ ಸುಮಹತಾಮಪಿ ॥ ೨೩೦

ಸ ಏವ ತಸ್ಯ ಭ್ರಾತಾಹಂ ದೇವೋ ವೇತ್ತಿ ತು ನೌ ಕುತಃ ।
ಇತಿ ಪ್ರಾಣಧರಃ ಸೋಽಪಿ ಪ್ರಣತಃ ಪ್ರತ್ಯುವಾಚ ತಮ್ ॥ ೨೩೧

೨೩೨. ಆಮೇಲೆ ನರವಾಹನದತ್ತನು ರಾಜ್ಯಧರನನ್ನು ಕಂಡ ಪರಿಯನ್ನೂ ಅವನು ಹೇಳಿದ ಮಾತುಗಳನ್ನೂ ಪ್ರಾಣಧರನಿಗೆ ಹೇಳಿದನು.

೨೩೩–೨೩೪. ಆಮೇಲೆ ಆತನು ಸಂತೋಷದಿಂದ ಆ ಮಹಾ ವಿಮಾನವನ್ನು ತರಲು, ಮಾವನಾದ ರಾಜನಿಂದ ಅನುಮತಿ ಪಡೆದು ಅವನಿಂದ ಬೀಳ್ಕೊಂಡು ದಾಸಿಯರನ್ನೂ ಚಿನ್ನವನ್ನೂ ಕರ್ಪೂರವನ್ನೂ ವಿಮಾನದಲ್ಲಿ ಏರಿಸಿದನು. ಆ ರಾಜನು ಕಳಿಸಿಕೊಟ್ಟ ಶ್ರೇಷ್ಠ ಬಡಗಿಯಾದ ಪ್ರಾಣಧರನನ್ನು ಕರೆಯಿಸಿಕೊಂಡನು.

೨೩೫–೨೩೬. ಅತ್ತೆಯು ಪ್ರಸ್ಥಾನ ಮಂಗಳವನ್ನು ಮಾಡಿ ಸಿದ್ಧಗೊಳಿಸಿದ್ದ ಹೊಸ ಮದುವಣಗಿತ್ತಿ ರಾಜಕುಮಾರಿ ಕರ್ಪೂರಿಕೆಯನ್ನು ಕರೆದುಕೊಂಡು ಬ್ರಾಹ್ಮಣರಿಗೆ ಒಳ್ಳೆಯ ಬಟ್ಟೆಗಳ ರಾಶಿಗಳನ್ನು ದಾನಮಾಡಿ ನರವಾಹನದತ್ತನು ಗೋಮುಖನೊಂದಿಗೆ ವಿಮಾನವನ್ನೇರಿದನು.

೨೩೭ ಮೊದಲಿಗೆ ಸಮುದ್ರದ ದಡಕ್ಕೆ ರಾಜ್ಯಧರನ ಬಳಿಗೆ ಹೋಗೋಣ, ಆಮೇಲೆ ಮನೆಗೆ ಹೋಗೋಣ ಎಂದು ಪ್ರಾಣಧರನಿಗೆ ಹೇಳಿದನು.

೨೩೮. ಅನಂತರ ಆತನು ವೇಗವಾಗಿ ಹಾರಿಸಿದ ವಿಮಾನದ ಮೂಲಕ ಪರಿಪೂರ್ಣವಾದ ತನ್ನ ಮನೋರಥದೊಡನೆಯೇ ಎಂಬಂತೆ ತನ್ನ ಪತ್ನಿಯೊಡನೆ, ಆಕಾಶಕ್ಕೆ ಹಾರಿದನು.

---

ತತೋ ಯಥಾ ರಾಜ್ಯಧರೇಣೋಕ್ತೋ ದೃಷ್ಟೋ ಯಥಾ ಚ ಸಃ ।
ನರವಾಹನದತ್ತಸ್ತಥಾ ತಸ್ಮೈ ಶಶಂಸ ಸಃ ॥ ೨೩೨

ಅಥ ತೇನ ಮುದಾ ಪ್ರಾಣಧರೇಣ ಸಮುಪಾಹೃತೇ ।
ಮಹಾವಿಮಾನೇಽನುಮತಃ ಶ್ವಶುರೇಣಾತ್ರ ಭೂಭುಜಾ ॥ ೨೩೩

ತಮಾಮಂತ್ರ್ಯ ಸಮಾರೋಪ್ಯ ದಾಸೀಕರ್ಪೂರಕಾಂಚನಮ್ ।
ತೇನ ರಾಜವಿಸೃಷ್ಟೇನ ಸಹ ಪ್ರಾಣಧರೇಣ ಸಃ ॥ ೨೩೪

ತೇನ ಚ ಕ್ಷತ್ತೃಮುಖ್ಯೇನ ಶ್ವಶ್ರೂರಚಿತಮಂಗಲಃ ।
ಕರ್ಪೂರಿಕಾಂ ರಾಜಪುತ್ರೀಂ ನವಾಮಾದಾಯ ತಾಂ ವಧೂಮ್ ॥ ೨೩೫

ದತ್ತದಾನೋ ದ್ವಿಜಾತಿಭ್ಯಃ ಸದ್ವಸ್ತ್ರನಿಚಯೈಶ್ಚ ತೈಃ ।
ನರವಾಹನದತ್ತೋಽಸಾವಾರುರೋಹ ಸಗೋಮುಖಃ ॥ ೨೩೬

ಪೂರ್ವಮಬ್ಧೇಃ ತಟಂ ತಾವದ್ಯಾಮೋ ರಾಜ್ಯಧರಾಂತಿಕಮ್ ।
ತತೋ ಗೃಹಮಿತಿ ಪ್ರಾಣಧರಂ ತಂ ನಿಜಗಾದ ಸಃ ॥ ೨೩೭

ತತಸ್ತೇನಾಹತೇನಾಶು ವಿಮಾನೇನೋತ್ಪಪಾತ ಸಃ ।
ನಭೋ ಮನೋರಥೇನೇವ ಪೂರ್ಣೇನ ಸಪರಿಗ್ರಹಃ ॥ ೨೩೮

೨೫೯. ಸ್ವಲ್ಪ ಸಮಯದಲ್ಲಿಯೇ ಸಮುದ್ರವನ್ನು ದಾಟಿ ಮುಂದೆ ಅದರ ದಡದಲ್ಲಿದ್ದ ಹೇಮಪುರವನ್ನು ತಲುಪಿ ಅಲ್ಲಿ ರಾಜ್ಯಧರನ ಮನೆಯನ್ನು ತಲುಪಿದನು.

೨೬೦. ಅಲ್ಲಿ ಅಣ್ಣನನ್ನು ಕಂಡದ್ದರಿಂದ ಸಂತೋಷಗೊಂಡಿದ್ದ ವಿನೀತವಾದ ರಾಜ್ಯಧರನನ್ನು ಸಂಧಿಸಿ ಸೇವಕರಿಲ್ಲದ ಆತನಿಗೆ ದಾಸಿಯರನ್ನು ಸೇವೆಗಾಗಿ ಕೊಟ್ಟು ಉತ್ಸವವನ್ನು ಆಚರಿಸಿದನು.

೨೬೧. ಅಣ್ಣನನ್ನು ಹೇಗೋ ಕಣ್ಣೀರು ಸುರಿಸುತ್ತಾ ಬಿಟ್ಟುಕೊಟ್ಟ ರಾಜ್ಯಧರನಿಂದ ಬೀಳ್ಕೊಂಡ ನರವಾಹನದತ್ತನು ಅದೇ ವಿಮಾನದಿಂದ ಕೌಶಾಂಬಿಗೆ ಹೋದನು.

೨೬೨. ಅನಾಯಾಸವಾಗಿ ಕೆಳಗಿಳಿದ ಶ್ರೇಷ್ಠ ವಿಮಾನ ವಾಹನದಲ್ಲಿ ಅನುಚರರೊಡನೆಯೂ ನವವಧುವಿನೊಡನೆಯೂ ಬಂದಿಳಿದ ಅವನನ್ನು ಕಂಡು ಜನರೆಲ್ಲ ವಿಸ್ಮಿತರಾದರು.

೨೬೩. ಪಟ್ಟಣಿಗರ ಉತ್ಸಾಹದಿಂದ ಮಗನು ಬಂದಿರುವುದನ್ನು ತಿಳಿದ ಇವನ ತಂದೆ ವತ್ಸರಾಜನು ತನ್ನ ರಾಣಿ, ಮಂತ್ರಿಗಳು ಮತ್ತು ಸೊಸೆಯರೊಂದಿಗೆ ಸಂತಸದಿಂದ ತಾನೇ ಮುಂದೆ ಹೊರಟನು.

೨೬೪. ವಿಮಾನವೆಂಬ ವಾಹನದಿಂದಾಗಿ ಮುಂದೆ ವಿದ್ಯಾಧರರ ಸಾಮ್ರಾಜ್ಯವು ದೊರಕಲಿರುವುದು ಸೂಚಿತವಾಗಿರುವುದನ್ನು ಮನಗಂಡ ರಾಜನು ತನ್ನ ಕಾಲಿಗೆ ಪತ್ನೀ ಸಹಿತವಾಗಿ ಬಿದ್ದು ನಮಸ್ಕರಿಸಿದ ಮಗನನ್ನು ಅಭಿನಂದಿಸಿದನು.

---

ಕ್ಷಣಾದುತ್ತೀರ್ಯ ಜಲಧಿಂ ಪುನಸ್ತತ್ತೀರವರ್ತಿ ಚ ।
ಪ್ರಾಪ ಹೇಮಪುರಂ ಧಾಮ ತಸ್ಯ ರಾಜ್ಯಧರಸ್ಯ ತತ್ ॥ ೨೫೯

ತತ್ರ ರಾಜ್ಯಧರಂ ಪ್ರಹ್ವಂ ಪ್ರಹೃಷ್ಟಂ ಭ್ರಾತೃದರ್ಶನಾತ್ ।
ದಾಸೀಭಿಸ್ತಮದಾಸೀಕಂ ಸಂವಿಭೇಜೇ ಚ ಸೋತ್ಸವಮ್ ॥ ೨೬೦

ಆಪೃಚ್ಛ್ಯ ಚ ತಮುದ್ಬಾಷ್ಪಂ ಕಥಮಪ್ಯಜ್ಝಿತಾಗ್ರಜಮ್ ।
ಯಯೌ ತೇನೈವ ಕೌಶಾಂಬೀಂ ವಿಮಾನೇನ ತದೈವ ಸಃ ॥ ೨೬೧

ತತ್ರಾಂಬರಾದಶಂಕಿತಮವತೀರ್ಣಂ ವರವಿಮಾನವಹನಂ ತಮ್ ।
ಸಾನುಚರಂ ನವವಧ್ವಾ ಯುಕ್ತಂ ದೃಷ್ಟ್ವಾ ವಿಸಿಸ್ಮಿಯೇ ಜನತಾ ॥ ೨೬೨

ಪೌರೋತ್ಸಾಹೈಃ ಪ್ರಕಟಂ ಪುತ್ರಂ ಬುದ್ಧ್ವಾ ಪಿತಾಸ್ಯ ವತ್ಸೇಶಃ ।
ಪ್ರೀತೋ ನಿರಗಾದಗ್ರೇ ದೇವೀಸಚಿವಸ್ನುಷಾದಿಭಿಃ ಸಹಿತಃ ॥ ೨೬೩

ದೃಷ್ಟ್ವಾ ವಿಮಾನವಾಹನಸೂಚಿತಭವಿತವ್ಯಖಚರಸಾಮ್ರಾಜ್ಯಮ್ ।
ತಂ ಸೋಽಭಿನಂದತ ಸುತಂ ರಾಜಾ ಚರಣಾನತಂ ವಧೂಸಹಿತಮ್ ॥
೨೬೪

೨೪೫. ತಾಯಿ ವಾಸವದತ್ತೆಯು ಪದ್ಮಾವತಿಯೊಂದಿಗೆ ಮಗನನ್ನು ಅಪ್ಪಿಕೊಂಡು, ಅವನನ್ನು ಕಾಣದ್ದರಿಂದ ಉಂಟಾಗಿದ್ದ ದುಃಖದ ಗಂಟು ಕರಗಿ ಉದುರಿದಂತೆ ಆನಂದ ಬಾಷ್ಪವನ್ನು ಸುರಿಸಿದಳು.

೨೪೬. ಮಡದಿಯಾದ ರತ್ನಪ್ರಭೆಯೂ ಮದನಮಂಚುಕೆಯೂ ಆಗ ಆತನ ಪ್ರೀತಿಯಿಂದ ಹೊಟ್ಟೆಕಿಚ್ಚನ್ನು ಕಳೆದುಕೊಂಡು ಆತನ ಕಾಲುಗಳನ್ನೂ ಹೃದಯವನ್ನೂ ಸಮವಾಗಿಯೇ ಹಿಡಿದುಕೊಂಡರು.

೨೪೭ ಆಮೇಲೆ ರಾಜಕುಮಾರ ನರವಾಹನದತ್ತನು ತನ್ನ ತಂದೆಯ ಮಂತ್ರಿಗಳಾದ ಯೌಗಂಧರಾಯಣ ಮುಂತಾದವರನ್ನೂ, ಮರುಭೂತಿಯೇ ಮುಂತಾದ ತನ್ನ ವಿಧೇಯ ಸಚಿವರನ್ನೂ ತಕ್ಕ ಸತ್ಕಾರದ ಮೂಲಕ ಆನಂದಗೊಳಿಸಿದನು.

೨೪೮–೨೪೯. ಉತ್ತಮವಾದ ದಶಾರ್ಹ ಕುಲದ ತನ್ನ ಪತಿಯು ಸಮುದ್ರವನ್ನು ಆಕ್ರಮಿಸಿ ತಂದಿದ್ದ ಅಮೃತದ ಸೋದರಮೂರ್ತಿಯಂತಿದ್ದ ನೂರು ದೇವಕನ್ಯೆಯರೊಡಗೂಡಿದ ಲಕ್ಷ್ಮಿಯಂತಿದ್ದ ವಿನಯದಿಂದ ತಲೆಬಾಗಿದ್ದ ಹೊಸವಧು ಕರ್ಪೂರಿಕೆಯನ್ನು ವತ್ಸರಾಜನೇ ಮುಂತಾದವರೆಲ್ಲ ಅಭಿನಂದಿಸಿದರು.

---

ಮಾತಾ ವಾಸವದತ್ತಾ ಪದ್ಮಾವತ್ಯಾ ಸಮಂ ತಮಾಶ್ಲಿಷ್ಯ ।
ವಿಗಲಿತಮಿವ ತದದರ್ಶನದುಃಖಗ್ರಂಥಿಂ ಜಹೌ ಬಾಷ್ಪಮ್ ॥ ೨೪೫

ರತ್ನಪ್ರಭಾ ಚ ಭಾರ್ಯಾ ಸಾನಂದಾ ಮದನಮಂಚುಕಾ ಚ ತದಾ ।
ತಸ್ಯ ಪ್ರೇಮಹತೇರ್ಷ್ಯೇ ಚರಣೌ ಹೃದಯಂ ಚ ಜಗೃಹತುಸ್ತುಲ್ಯಮ್ ॥
೨೪೬

ಯೌಗಂಧರಾಯಣಾದೀನ್ ಪಿತೃಸಚಿವಾನ್ ಸ್ವಾಂಶ್ಚ ಸೋಽಥ ನೃಪಸೂನುಃ ।
ಮರುಭೂತಿಮುಖಾನ್ ಪ್ರಣತಾನ್ ಅನಂದಯತ್ ಕೃತಯಥಾರ್ಥಸತ್ಕಾರಃ ॥
೨೪೭

ಸರ್ವೇ ಚ ತೇ ವಿಭೂಷಿತಸುದಶಾರ್ಹಕುಲೇನ ಜಲಧಿಮಾಕ್ರಮ್ಯ ।
ಸಮುಪಾಹೃತಾಂ ಸ್ವಪತಿನಾ ವ್ಯಕ್ತಾಂ ಸೋದರ್ಯಮೂರ್ತಿಮಮೃತಸ್ಯ ॥
೨೪೮

ಅಜರಾಂಗನಾಶತಯುತಾಮಾಯಾತಾಂ ಶ್ರಿಯಮಿವಾಭ್ಯನಂದಂಸ್ತಾಮ್ ।
ಕರ್ಪೂರಿಕಾಂ ನವವಧೂಂ ವತ್ಸೇಶಾದ್ಯಾ ಯಥೋಚಿತಾವನತಾಮ್ ॥
೨೪೯

೨೫೦. ಆಕೆಯ ತಂದೆಯ ಮನೆಯಿಂದ ಬಂದಿದ್ದ ಪ್ರತೀಹಾರನನ್ನು, ವಿಮಾನದಿಂದ ಹೊತ್ತು ತಂದಿದ್ದ ಚಿನ್ನ ಬಟ್ಟೆ ಕರ್ಪೂರಗಳ ಕೋಟಿ ರಾಶಿಯನ್ನು ನೀಡುವುದರ ಮೂಲಕ, ವತ್ಸರಾಜನು ಗೌರವಿಸಿದನು.

೨೫೧. ಆಮೇಲೆ ವಿಮಾನವನ್ನು ನಿರ್ಮಿಸಿಕೊಟ್ಟು ಉಪಕಾರ ಮಾಡಿದ ಪ್ರಾಣಧರನನ್ನು ನರವಾಹನದತ್ತನು ಪರಿಚಯಿಸಲು ವತ್ಸರಾಜನು ಅವನನ್ನೂ ಗೌರವಿಸಿದನು.

೨೫೨. "ಈ ರಾಜಕುಮಾರಿಯು ದೊರಕಿದ್ದು ಹೇಗೆ ? ಇಲ್ಲಿಂದ ಹೇಗೆ ಹೋದಿರಿ ?' ಎಂದೆಲ್ಲ ರಾಜನು ಗೋಮುಖನನ್ನು ಸನ್ಮಾನಿಸಿ ಸಂತಸದಿಂದ ಕೇಳಿದನು.

೨೫೩–೨೫೫. ಆಗ ಬೇಟೆಗೆಂದು ಕಾಡಿಗೆ ಹೋದ ಸಂದರ್ಭದಿಂದ ಆರಂಭಿಸಿ ಸಿದ್ಧತಾಪಸಿಯ ದರ್ಶನವಾದದ್ದು, ರಾಜ್ಯಧರನು ಒದಗಿಸಿಕೊಟ್ಟ ವಿಮಾನದ ಸಹಾಯ ಮತ್ತು ಅದರಿಂದ ಸಮುದ್ರವನ್ನು ದಾಟಿದ್ದು, ಮದುವೆಯ ಬಗ್ಗೆ ಆಸಕ್ತಿಯಿರದಿದ್ದ ಕರ್ಪೂರಿಕೆಯನ್ನು ಮದುವೆಗೆ ಒಪ್ಪಿಸಿದ್ದು, ಪ್ರಾಣಧರನು ಸಿಕ್ಕಿದ್ದರಿಂದ ದೊರೆತ ವಿಮಾನದಿಂದ ಮೊದಲಿನಂತೆಯೇ ಹಿಂತಿರುಗಿಬಂದದ್ದು, ಹೀಗೆ ಎಲ್ಲವನ್ನು ನಡೆದ ರೀತಿಯಲ್ಲಿಯೇ ಗೋಮುಖನು ರೋಚಕವಾಗಿ ಏಕಾಂತದಲ್ಲಿ ಹೆಂಡತಿ ಮತ್ತು ಮಂತ್ರಿಗಳೊಂದಿಗಿದ್ದ ವತ್ಸರಾಜನಿಗೆ ಹೇಳಿದನು.

---

ತಸ್ಯಾಶ್ಚ ಪೈತೃಕಂ ತಂ ವತ್ಸೇಶೋಽಪೂಜಯತ್ ಪ್ರತೀಹಾರಮ್ ।
ಅರ್ಪಿತವಿಮಾನವಾಹಿತಕಾಂಚನಕರ್ಪೂರವಸ್ತ್ರಕೋಟಿಚಯಮ್ ॥ ೨೫೦

ಆಖ್ಯಾತಂ ನರವಾಹನದತ್ತೇನ ತತೋ ವಿಮಾನಕರ್ತಾರಮ್ ।
ಉಪಕಾರಿಣಂ ಸ ರಾಜಾ ಪ್ರಾಣಧರಂ ತಮಪಿ ಮಾನಯಾಮಾಸ ॥ ೨೫೧

ಕಥಮೇಷಾ ರಾಜಸುತಾ ಸಂಪ್ರಾಪ್ತಾ ಕಥಮಿತಶ್ಚ ಯಾತೌ ಸ್ಥ ।
ಇತಿ ಪೃಷ್ಟಃ ಸಹರ್ಷಃ ಸಂಮಾನ್ಯ ಸ ಗೋಮುಖಂ ನೃಪತಿಃ ॥ ೨೫೨

ಅಥ ಮೃಗಯಾವನಗಮನಾತ್ ಪ್ರಭೃತಿ ಯಥಾ ದರ್ಶನಂ ತಪಸ್ವಿನ್ಯಾಃ ।
ರಾಜ್ಯಧರಸಮಾಸಾದಿತವಿಮಾನಯುಕ್ತ್ಯಾ ಯಥಾ ಚ ತೀರ್ಣೋಽಬ್ಧಿಃ ॥ ೨೫೩

ಕರ್ಪೂರಿಕಾ ವಿವಾಹೇ ವಿಮುಖಾಪಿ ಚ ಸುಮುಖೀ ಯಥಾ ವಿಹಿತಾ ।
ಪ್ರಾಣಧರಲಾಭಲಬ್ಧೇನಾಗಮನಂ ಪ್ರಾಗ್ಯಥಾ ವಿಮಾನೇನ ॥ ೨೫೪

ಯುಕ್ತ್ಯೈಕಾಂತೇ ಸ ಯಥಾ ತದಶೇಷಂ ಗೋಮುಖೋ ಯಥಾವೃತ್ತಮ್ ।
ಕಥಯಾಂಚಕಾರ ತಸ್ಮೈ ಸದಾರಸಚಿವಾಯ ವತ್ಸರಾಜಾಯ ॥ ೨೫೫

೨೫೬. ಬೇಟೆಯೆಲ್ಲಿ ? ತಾಪಸಿಯೆಲ್ಲಿ ? ಸಮುದ್ರದ ದಡದಲ್ಲಿ ಯಂತ್ರಗಳನ್ನು ಬಲ್ಲ ಅಂತಹ ರಾಜ್ಯಧರನೆಂಬ ಶಿಲ್ಪಿ ಎಲ್ಲಿ ? ಅವನ ವಾಹನದಿಂದ ಸಮುದ್ರವನ್ನು ದಾಟುವುದೆಲ್ಲಿ ? ಅದರ ದಡದಲ್ಲಿ ಇನ್ನೊಬ್ಬ ವಿಮಾನಕರ್ತನು ಮೊದಲು ಹೋದದ್ದು ಹೇಗೆ ? ಆಗಲೇಬೇಕೆಂದಿರುವುದಕ್ಕೆ ಉಪಾಯಗಳನ್ನು ಉಂಟುಮಾಡುವ ವಿಚಾರವನ್ನು ಭವ್ಯರಾದವರಿಗೆ ವಿಧಿಯೇ ಉಂಟುಮಾಡುತ್ತದೆ.

೨೫೭. ಹೀಗೆ ಆಶ್ಚರ್ಯದಿಂದ ಲಲನೆಯರೆಲ್ಲರೂ ತಲೆದೂಗುತ್ತಿರಲು ಅವರೆಲ್ಲರೂ ಆದರದಿಂದ ಗೋಮುಖನ ಪ್ರಭುಭಕ್ತಿಯ ಬಗ್ಗೆ ಪ್ರಶಂಸೆಯನ್ನು ಮಾಡಿದರು.

೨೫೮. ಪತಿವ್ರತಾಧರ್ಮದಿಂದ ಸಂತೋಷವುಂಟು ಮಾಡಿದ್ದ ಮತ್ತು ತನ್ನ ವಿದ್ಯಾಬಲದಿಂದ ಮಾರ್ಗ ರಕ್ಷಣೆ ಮಾಡಿದ ರಾಣಿ ರತ್ನ ಪ್ರಭೆಯನ್ನು ಅವರು ಹೊಗಳಿದರು.

೨೫೯. ಆಮೇಲೆ ನರವಾಹನದತ್ತನು ಆಕಾಶಮಾರ್ಗದಿಂದ ಪ್ರಯಾಣಿಸಿದ ಆಯಾಸವನ್ನು ಪರಿಹರಿಸಿಕೊಳ್ಳಲು ತಂದೆ ಹೆಂಡತಿ ಮತ್ತಿತರರ ಜೊತೆ ರಾಜಧಾನಿಯನ್ನು ಪ್ರವೇಶಿಸಿದನು.

೨೬೦. ಅಲ್ಲಿಗೆ ಬಂದಾಗ ಬಂಧುಗಳೂ ಸ್ನೇಹಿತರೂ ಆತನಿಗೆ ಗೌರವ ಸಲ್ಲಿಸಿದರು. ಮತ್ತೆ ಚಿನ್ನದ ರಾಶಿಗಳಿಂದ ತುಂಬಿದ ಖಜಾನೆಯಿಂದ ಅವನು ಪ್ರಾಣಧರ ಮತ್ತು ಮಾವನವರು ಕಳುಹಿಸಿದ ಪ್ರತೀಹಾರಿಯನ್ನೂ ಐಸಿರಿಯಿಂದ ತುಂಬಿದನು.

---

ಕ್ವಾಖೇಟಃ ಕ್ವ ಚ ತಾಪಸೀ ಕ್ವ ಚ ತಥೋದನ್ವತ್ತಟೇ ಯಂತ್ರವಿತ್  
ತಕ್ಷಾ ರಾಜ್ಯಧರಸ್ತದೀಯವಹನೇನೋಲ್ಲಂಘನಂ ಕ್ವಾಂಬುಧೇಃ ।  
ತತ್ಪಾರೇ ಚ ವಿಮಾನಕರ್ತುರಪರಸ್ಯಾಸ್ಯ ಕ್ವ ಪೂರ್ವಂ ಗತಿಃ  
ಭವ್ಯಾನಾಂ ಶುಭಸಿದ್ಧ್ಯುಪಾಯರಚನಾ ಚಿಂತಾಂ ವಿಧತ್ತೇ ವಿಧಿಃ ॥ ೨೫೬

ಇತಿ ತೈರ್ನಿಖಿಲೈಃ ಸವಿಸ್ಮಯ ಪ್ರಮದಾಕಂಪಿತಮಸ್ತಕೈಸ್ತತಃ ।  
ಜಗದೇ ವಿದಧೇ ಚ ಗೋಮುಖೇ ಪ್ರಭುಭಕ್ತಿಸ್ತುತಿರತ್ರ ಸಾದರೈಃ ॥ ೨೫೭

ರತ್ನಪ್ರಭಾಂ ಚ ರಾಜ್ಞೀಂ ಪತಿವ್ರತಾಧರ್ಮಜನಿತಪರಿತೋಷಾಮ್ ।  
ಪ್ರಶಶಂಸುಸ್ತೇ ಭರ್ತುರ್ನಿಜವಿದ್ಯಾವಿಹಿತಪಥರಕ್ಷಾಮ್ ॥ ೨೫೮

ಅಥ ನರವಾಹನದತ್ತೋ ವಿನೀತಗಗನಾಂಗಣಾಗಮನಖೇದಃ ।  
ಸ ವಿವೇಶ ರಾಜಧಾನೀಂ ಪಿತೃಭಿರ್ಭಾರ್ಯಾದಿಭಿಶ್ಚ ಸಮಮ್ ॥ ೨೫೯

ತತ್ರೋಪಾಗತಮಾನಿತಬಂಧುಸುಹೃತ್ಸ್ವರ್ಣಕೂಟಭೃತಕೋಷಃ ।  
ವಸುಭಿಸ್ತೌ ಪೂರಿತವಾನ್ ಪ್ರಾಣಧರಶ್ವಾಶುರಪ್ರತೀಹಾರೌ ॥ ೨೬೦

೩೯೧. ಊಟವಾದ ಕೂಡಲೇ ಪ್ರಾಣಧರನು ವಿನಯದಿಂದ ಅವನಿಗೆ ಬಿನ್ನವಿಸಿದನು : "ಒಡೆಯನೇ, ಕರ್ಪೂರಕ ರಾಜನು ನಮ್ಮಿಬ್ಬರಿಗೂ ಹೀಗೆ ಅಪ್ಪಣೆ ಮಾಡಿದ್ದನು.

೩೯೨. ನನ್ನ ಮಗಳು ಗಂಡನ ಮನೆಯನ್ನು ತಲುಪಿದ ಕೂಡಲೇ ಬೇಗನೆ ಬಂದುಬಿಡಬೇಕು. ಅದರಿಂದ ಅವಳು ಬೇಗನೆ ತಲುಪಿದಳು ಎಂಬುದು ಗೊತ್ತಾಗುತ್ತದೆ.

೩೯೩. ಆದ್ದರಿಂದ ನಾವಿಬ್ಬರೂ ನಿಶ್ಚಿತವಾಗಿಯೂ ಈಗ ಬೇಗನೇ ಹಿಂತಿರುಗಲೇಬೇಕು. ಪ್ರಭುವೇ, ರಾಜನಿಗೆಂದು ಕರ್ಪೂರಿಕೆಯ ಕೈಯಿಂದಲೇ ಪತ್ರವನ್ನು ಬರೆಸಿ ನಮಗೆ ಕೊಡಿಸು.

೩೯೪. ಇಲ್ಲದಿದ್ದರೆ ಮಗಳಿಗಾಗಿ ಕರಗುವ ರಾಜನ ಹೃದಯವು ಸಮಾಧಾನ ಹೊಂದಲಾರದು. ವಿಮಾನವನ್ನೇರಿದವರು ಕೆಳಗೆ ಬಿದ್ದಿರಬಹುದೆಂಬ ಆತಂಕವು ಅವನಿಗಿದ್ದರೆ ಅದು ಇದರಿಂದ ಹೋಗುತ್ತದೆ.

೩೯೫. ಆದ್ದರಿಂದ ಈಗ ಆಕೆಯ ಪತ್ರವನ್ನೂ ವಿಮಾನದಲ್ಲಿ ಹೊರಡಲು ಅನುವಾಗಿರುವ ಈ ಪ್ರಧಾನ ಪ್ರತೀಹಾರನೊಂದಿಗೆ ಹೋಗಲು ಅನುಮತಿಯನ್ನೂ ನೀಡು.

೩೯೬. ಎಲೈ ಯುವರಾಜನೇ, ನಾನು ನನ್ನ ಕುಟುಂಬವನ್ನೂ ಕರೆದುಕೊಂಡು ಮತ್ತೆ ಇಲ್ಲಿಗೇ ಬಂದುಬಿಡುತ್ತೇನೆ. ಅಮೃತಮಯವಾದ ನಿನ್ನೆರಡು ಪಾದಗಳನ್ನು ಬಿಟ್ಟು ಹೋಗಲು ನನಗೆ ಸಾಧ್ಯವಾಗುತ್ತಿಲ್ಲ.'

---

ಭುಕ್ತೋತ್ತರಂ ಚ ಸಪದಿ ಪ್ರಾಣಧರಸ್ತಂ ವ್ಯಜಿಜ್ಞಪತ್ ಪ್ರಣತಃ ।
ದೇವಾವಯೋಃ ಕಿಲೈವಂ ಕರ್ಪೂರಕಭೂಭೃತಾ ಸಮಾದಿಷ್ಟಮ್ ॥ ೩೯೧
ಆಗಂತವ್ಯಂ ತ್ವರಿತಂ ಮದ್ದುಹಿತರಿ ಭರ್ತೃಭವನಮಾಪ್ತಾಯಾಮ್ ।
ಯೇನಾಹಂ ಜಾನೀಯಾಂ ಸಂಪ್ರಾಪ್ತಾಮತ್ರ ಶೀಘ್ರಮಿತಿ ॥ ೩೯೨
ತದ್ಗಂತವ್ಯಂ ನಿಶ್ಚಿತಮಾವಾಭ್ಯಾಂ ದೇವ ಚತುರಮಧುನೈವ ।
ದಾಪಯ ಕರ್ಪೂರಿಕಯಾ ರಾಜ್ಞೋ ಲೇಖಂ ಸ್ವಹಸ್ತಲಿಖಿತಂ ನೌ ॥ ೩೯೩
ನ ಹಿ ತಸ್ಯ ಸುತಾಸ್ನಿಗ್ಧಂ ಹೃದಯಂ ರಾಜ್ಞೋಽನ್ಯಥಾ ಸಮಾಶ್ವಸಿತಿ ।
ಸ ಹ್ಯಾರೂಢವಿಮಾನೋ ನ ಜಾತುಚಿಚ್ಛಂಕತೇ ಪ್ರಪಾತಮತಃ ॥ ೩೯೪
ತಲ್ಲೇಖನಾದಪೂರ್ವಂ ಸಂಪ್ರತಿ ಸಹಿತಂ ಮಯಾ ಪ್ರಧಾನಮಿಮಮ್ ।
ಅನುಜಾನೀಹಿ ವಿಮಾನಪ್ರಸ್ಥಾನಪ್ರೋನ್ಮುಖಂ ಪ್ರತೀಹಾರಮ್ ॥ ೩೯೫
ಅಹಮಾದಾಯ ಕುಟುಂಬಕಮೇಷ್ಯಾಮಿ ಪುನಸ್ತ್ವಿಹೈವ ಯುವರಾಜ ।
ಶಕ್ಷ್ಯಾಮಿ ನಾಮೃತಮಯಂ ಚರಣಾಂಭೋಜದ್ವಯಂ ತವ ತ್ಯಕ್ತುಮ್ ॥ ೩೯೬

೨೬೭. ಹೀಗೆ ಪ್ರಾಣಧರನು ನಿಶ್ಚಿತವಾಗಿ ಹೇಳಲು ವತ್ಸರಾಜನ ಮಗನು ಆ ಕೂಡಲೇ ಪತ್ರ ಬರೆಯುವಂತೆ ಮಡದಿ ಕರ್ಪೂರಿಕೆಯನ್ನು ನಿಯೋಜಿಸಿದನು.

೨೬೮. ""ಅಪ್ಪಾ, ನನ್ನ ವಿಷಯದಲ್ಲಿ ನೀವೇನೂ ಚಿಂತಿಸಬೇಕಾಗಿಲ್ಲ. ಒಳ್ಳೆಯ ಗಂಡನ ಮನೆಯನ್ನು ಸೇರಿದ್ದೇನೆ. ಮಹಾವಿಷ್ಣುವನ್ನು ಆಶ್ರಯಿಸಿದ ಸಮುದ್ರಪುತ್ರಿ ಲಕ್ಷ್ಮಿಯ ಬಗ್ಗೆ ಚಿಂತೆ ಮಾಡುವುದೇನಿದೆ ?'

೨೬೯. ಹೀಗೆ ತನ್ನ ಕೈಯಿಂದಲೇ ಬರೆದ ಪತ್ರವನ್ನು ಕರ್ಪೂರಿಕೆಯು ಅವರಿಗೆ ನೀಡಲು ಪ್ರತೀಹಾರಿ ಮತ್ತು ಪ್ರಾಣಧರರನ್ನು ಗೌರವಿಸಿ ವತ್ಸರಾಜಕುಮಾರನು ಅವರನ್ನು ಕಳಿಸಿಕೊಟ್ಟನು.

೨೭೦. ಅವರಿಬ್ಬರೂ ವಿಮಾನವನ್ನೇರಿ ಆಕಾಶದಲ್ಲಿ ಹೋಗುತ್ತಾ, ಎಲ್ಲರೂ ಆಶ್ಚರ್ಯದಿಂದ ನೋಡುತ್ತಿರಲು. ಸಮುದ್ರವನ್ನು ದಾಟಿ ಕರ್ಪೂರಸಂಭವ ನಗರವನ್ನು ತಲುಪಿದರು.

೨೭೧. ಅಲ್ಲಿ ಮಗಳು ಗಂಡನ ಮನೆಯನ್ನು ತಲುಪಿರುವುದನ್ನು ಹೇಳಿ ಆಕೆಯ ಪತ್ರವನ್ನು ನೀಡಿ ಕರ್ಪೂರಕ ಮಹಾರಾಜನನ್ನು ಆನಂದಪಡಿಸಿದರು.

೨೭೨. ಮತ್ತೆ ಒಂದು ದಿನ ರಾಜನ ಅನುಮತಿಯನ್ನು ಪಡೆದ ಪ್ರಾಣಧರನು ರಾಜ್ಯಧರನನ್ನು ಗೌರವಿಸಿ ತನ್ನ ಕುಟುಂಬದೊಂದಿಗೆ ನರವಾಹನದತ್ತನ ಬಳಿಗೇ ಹೋದನು.

---

ಇತಿ ತೇನ ಸುದೃಢಮುಕ್ತೇ ಪ್ರಾಣಧರೇಣೈಷ ವತ್ಸರಾಜಸುತಃ ।
ಲೇಖಸ್ಯ ಲೇಖನೇ ತಾಂ ನ್ಯಯುಂಕ್ತ ಕರ್ಪೂರಿಕಾಂ ತದೈವ ವಧೂಮ್ ॥
೨೬೭

ತಾತ ನ ಚಿಂತಾ ಮಯಿ ತೇ ಕಾರ್ಯಾ ಸದ್ಭರ್ತೃಸೌಖ್ಯಸದನಜುಷಿ ।
ಕಿಂ ಹಿ ಮಹಾಬ್ಧೇಃ ಕಮಲಾ ಚಿಂತಾಸ್ಪದಮಾಶ್ರಿತೋತ್ತಮಂ ಪುರುಷಮ್ ॥
೨೬೮

ಇತಿ ಚ ಸ್ವಹಸ್ತಲಿಖಿತೇ ಕರ್ಪೂರಿಕಯಾ ತಯಾರ್ಪಿತೇ ಲೇಖೇ ।
ಕ್ಷತ್ತೃಪ್ರಾಣಧರೌ ತೌ ವತ್ಸೇಶಸುತೋಽರ್ಚಿತೌ ಸ ವಿಸಸರ್ಜ ॥ ೨೬೯
ತೌ ಚಾರುಹ್ಯ ವಿಮಾನಂ ಗಗನಗತೀ ಜಾತವಿಸ್ಮಯೈಃ ಸರ್ವೈಃ ।
ದೃಷ್ಟೌ ತೀರ್ತ್ವಾ ಜಲಧಿಂ ಯಯತುಃ ಕರ್ಪೂರಸಂಭವಂ ನಗರಮ್ ॥
೨೭೦

ತತ್ರ ಸುತಾಂ ಪತಿಸದನಪ್ರಾಪ್ತಾಂ ಸಂಶ್ರಾವ್ಯ ದತ್ತಲೇಖೌ ತೌ ।
ಆನಂದಯಾಂಬಭೂವತುರಥ ತಂ ಕರ್ಪೂರಕಂ ನರಾಧಿಪತಿಮ್ ॥ ೨೭೧
ಅನ್ಯೇದ್ಯುರನುಜ್ಞಾಪ್ಯ ಪ್ರಾಣಧರಸ್ತಂ ನೃಪಂ ಸ ಸಕುಟುಂಬಃ ।
ಸಂಭಾವಿತರಾಜ್ಯಧರೋ ನರವಾಹನದತ್ತಪಾರ್ಶ್ವಮೇವಾಗಾತ್ ॥ ೨೭೨

೨೭೩. ಕಾರ್ಯವನ್ನು ಮುಗಿಸಿ ಬೇಗನೆ ಹಿಂತಿರುಗಿ ಬಂದ ಅವನಿಗೆ ತನ್ನ ಮನೆಯ ಬಳಿಯಲ್ಲಿಯೇ ಮನೆಯನ್ನು ಕೊಟ್ಟು ಜೀವನಕ್ಕೆ ದೊಡ್ಡದೊಂದು ಉದ್ಯೋಗವನ್ನು ಕಲ್ಪಿಸಿಕೊಟ್ಟನು.

೨೭೪. ಆತನು ನಿರ್ಮಿಸಿದ ವಿಮಾನಗಳಲ್ಲಿ ಹೆಂಡತಿಯರೊಂದಿಗೆ ವಿಹರಿಸುತ್ತಾ ನರವಾಹನದತ್ತನು ಭವಿಷ್ಯದಲ್ಲಿ ವಿದ್ಯಾಧರ ಚಕ್ರವರ್ತಿಗೆ (ಅನುಗುಣವಾದ) ಆಕಾಶಗಮನವನ್ನು ಅಭ್ಯಾಸಮಾಡುತ್ತಿರುವನೋ ಎಂಬಂತೆ ವಿಹರಿಸುತ್ತಿದ್ದನು.

೨೭೫. ಈ ರೀತಿ ಸಂತೋಷದಿಂದಿದ್ದ ಸ್ನೇಹಿತರು ಬಂಧುಗಳು ಮಡದಿಯರೆಲ್ಲರ ಜೊತೆ ವತ್ಸೇಶ್ವರನ ಮಗನು ಆ ದಿನಗಳನ್ನು ರತ್ನಪ್ರಭೆ, ಮದನಮಂಚುಕೆಯರೊಡನೆ ಮೂರನೆಯ ರಾಣಿಯಾದ ಕರ್ಪೂರಿಕೆಯನ್ನೂ ಹೊಂದಿ ಸುಖವಾಗಿ ಕಳೆದನು.

ಮಹಾಕವಿ ಶ್ರೀ ಸೋಮದೇವ ಭಟ್ಟನು ರಚಿಸಿದ

ಕಥಾಸರಿತ್ಸಾಗರದ ರತ್ನಪ್ರಭಾಲಂಬಕದಲ್ಲಿ

ಒಂಬತ್ತನೆಯ ತರಂಗವು ಮುಗಿಯಿತು.

ಏಳನೆಯದಾದ ಈ ರತ್ನಪ್ರಭಾಲಂಬಕವೂ ಮುಗಿಯಿತು.

---

ಸೋಽತ್ರಾಗತಾಯ ಸದ್ಯಃ ಕೃತಕಾರ್ಯಾಯಾತ್ಮಮಂದಿರಸಮೀಪೇ ।
ನರವಾಹನದತ್ತೋಽಸ್ಮೈ ಪ್ರದದೌ ವಸತಿಂ ಚ ಜೀವನಂ ಚ ಮಹತ್ ॥ ೨೭೩

ಚಿಕ್ರೀಡ ಚ ತದ್ವಿಹಿತೈರವರೋಧಸಖೋ ವಿಮಾನಕೈರ್ವಿಚರನ್ ।
ಅಭ್ಯಸ್ಯದಿವ ಭವಿಷ್ಯದ್ವಿದ್ಯಾಧರಚಕ್ರವರ್ತಿಗಗನಗತಿಮ್ ॥ ೨೭೪

ಇತ್ಯತ್ರ ನಂದಿತಸುಹೃತ್ಸ್ವಜನಾವರೋಧೋ
ವತ್ಸೇಶ್ವರಸ್ಯ ತನಯೋಽಥ ಸ ತಾನ್ಯಹಾನಿ ।
ರತ್ನಪ್ರಭಾಮದನಮಂಚುಕಯೋಸ್ತೃತೀಯಾಂ
ಕರ್ಪೂರಿಕಾಂ ಸಮಧಿಗಮ್ಯ ಸುಖಂ ನಿನಾಯ ॥ ೨೭೫

ಇತಿ ಮಹಾಕವಿ ಶ್ರೀ ಸೋಮದೇವಭಟ್ಟ ವಿರಚಿತೇ

ಕಥಾಸರಿತ್ಸಾಗರೇ

ರತ್ನಪ್ರಭಾಲಂಬಕೇ ನವಮಸ್ತರಂಗಃ

ಸಮಾಪ್ತಶ್ಚಾಯಂ ರತ್ನಪ್ರಭಾಲಂಬಕಃ ಸಪ್ತಮಃ ।

